# ಸಮಗ್ರ ದಾಸ ಸಾಹಿತ್ಯ

ಸಂಪುಟ : ೧೬



# ಉರಗಾದ್ರಿವಾಸವಿಠಲದಾಸರು ಮತ್ತು ಇತರರ ಕೀರ್ತನೆಗಳು

ಸಮಗ್ರ ದಾಸ ಸಾಹಿತ್ಯ
ಸಂಪುಟ : ೧೬

# ಉರಗಾದ್ರಿವಾಸವಿಠಲದಾಸರು ಮತ್ತು ಇತರರ ಕೀರ್ತನೆಗಳು

(ರಘುರಾಮವಿಠಲದಾಸ, ಶ್ರೀಶ ಕೇಶವದಾಸ, ನಿಡಂಬೂರು
ರಾಮದಾಸ, ಬಿ. ವೆಂಕಟರಾವ್ ಮತ್ತು
ಅಚಲಾನಂದದಾಸರ ಕೀರ್ತನೆಗಳು)

*ಸಂಪಾದಕರು*
ಹೆಚ್.ಎಸ್.ಶ್ರೀನಿವಾಸಮೂರ್ತಿ
ಎ.ಎನ್. ಅನಂತಸ್ವಾಮಿ ರಾವ್
ಡಾ. ಟಿ.ಎನ್.ನಾಗರತ್ನ

ಕರ್ನಾಟಕ ಸರ್ಕಾರ
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ಬೆಂಗಳೂರು

**SAMAGRA DASA SAHITYA VOLUME - 16 :**
*Uragadrivasavittaladasaru Mattu Itarara Keerthanegalu.* Edited by H.S. Srinivasamurthy, A.N. Anantha Swamy Rao & Dr. T.N. Nagaratna. Published by Sri.Y. K.Muddukrishna, Director, Directorate of Kannada and Culture, Kannada Bhavana, J.C. Road, Bangalore - 560 002.

ಪುಟಗಳು : 22 + ೪೩೯


ಪ್ರಥಮ ಮುದ್ರಣ : ೨೦೦೩
ಪ್ರತಿ : ೧೨೫೦

ಬಿಡಿ ಪ್ರತಿ ಬೆಲೆ : ರೂ. ೬೦=೦೦
ಸಮಗ್ರ ಸಂಪುಟಗಳ ಬೆಲೆ : ರೂ. ೨೪೦೦=೦೦

ಮುದ್ರಣ ನಿರ್ವಹಣೆ :

ಮೈಸೂರು ಸೇಲ್ಸ್ ಇಂಟರ್‌ನ್ಯಾಷನಲ್ ಲಿಮಿಟೆಡ್
೩೬, ಕನ್ನಿಂಗ್‌ಹ್ಯಾಮ್ ರಸ್ತೆ
ಬೆಂಗಳೂರು – ೫೬೦ ೦೫೨.

ಮುದ್ರಕರು :

ಮೆ. ಡಾಟ್ಸ್
೧೨೪, ಸುಲ್ತಾನ್‌ಪೇಟೆ
ಬೆಂಗಳೂರು – ೫೬೦ ೦೫೩.

# ಸಮಗ್ರ ದಾಸಸಾಹಿತ್ಯ ಪ್ರಕಟಣ ಯೋಜನೆ

## ಸಂಪಾದಕ ಮಂಡಳಿ

# ಮುನ್ನುಡಿ

ಹರಿದಾಸ ಸಾಹಿತ್ಯ ಕನ್ನಡ ಸಂಸ್ಕೃತಿ ಪರಂಪರೆಯ ಮಹತ್ವಪೂರ್ಣ ಭಾಗವಾಗಿದೆ. ದೇಶೀಯತೆ ಹಾಗೂ ಗೇಯತೆಗಳೆರಡನ್ನೂ ಮೇಳವಿಸಿಕೊಂಡು, ಕನ್ನಡ ಸಾಹಿತ್ಯವಾಹಿನಿಗೆ ಇದು ಹೊಸತನವನ್ನು ನೀಡಿದೆ. ಮನುಜಮತ, ಸಾಹಿತ್ಯಪಥ ಹಾಗೂ ಭಕ್ತಿಸಿದ್ಧಾಂತದ ತ್ರಿವೇಣಿಯಾಗಿರುವ ಈ ಪ್ರಜಾಸಾಹಿತ್ಯವನ್ನು ಪ್ರಜೆಗಳಿಗೆ ಮುಟ್ಟಿಸುವುದು ಪ್ರಜಾಸತ್ತಾತ್ಮಕ ಸರಕಾರದ ಆದ್ಯ ಕರ್ತವ್ಯವಾಗಿದೆ.

ಕನ್ನಡ ಭಾಷಿಕಶಕ್ತಿಯ ವಿವಿಧ ಆಯಾಮಗಳನ್ನು ಸೆಳೆದು ತೋರಿರುವ, ಸಾಹಿತ್ಯ–ಸಂಗೀತಗಳ ಸಾಮರಸ್ಯವನ್ನು ಮೆರೆದಿರುವ ಈ ಸಾಹಿತ್ಯ ಕನ್ನಡ ಸಾಹಿತ್ಯಕ್ಕೆ ಜಾಗತಿಕ ಮಹತ್ವವನ್ನು ತಂದುಕೊಟ್ಟಿದೆ ಎಂದರೆ ಅತಿಶಯೋಕ್ತಿಯಾಗಲಾರದು. ಮಾನವಾನುಕಂಪ, ಸಮಾಜಸುಧಾರಣೆ, ಲೋಕದ ಡೊಂಕುಗಳನ್ನು ನಗೆ ವಿಡಂಬನೆಗಳ ಮೂಲಕ ತಿದ್ದುವ ಕೌಶಲ ದಾಸಸಾಹಿತ್ಯದ ಪ್ರಮುಖ ಲಕ್ಷಣವಾಗಿದೆ.

ಆಧ್ಯಾತ್ಮಿಕ ಸಾಧನೆ, ಅನುಭವ – ಅನುಭಾವಗಳು ದಾಸಸಾಹಿತ್ಯದ ಪ್ರಮುಖ ಅಂಶವಾದರೂ, ಸುತ್ತಮುತ್ತಲಿರುವ ಜೀವನದ ಕಡೆಗೆ, ಮಾನವ ಸ್ವಭಾವದ ಕಡೆಗೆ ಕಣ್ಣು ಹರಿಸಿದ ಹರಿದಾಸರು ಸಾತ್ತ್ವಿಕ ಜೀವನ ನಿರ್ವಹಣೆಗೆ, ಮಾನವನ ಮೇಲ್ಮೆಗೆ, ನೈತಿಕ ಆಚರಣೆಗೆ ಒತ್ತು ನೀಡಿದವರು.

ಹರಿದಾಸ ಸಾಹಿತ್ಯ ಅಪಾರವಾದುದು ಹಾಗೂ ವೈವಿಧ್ಯಮಯ ವಾದುದು. ಈ ವಿಪುಲ ಸಾಹಿತ್ಯರಾಶಿಯನ್ನು ಒಂದೆಡೆ ಕ್ರೋಡೀಕರಿಸಿ, ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯವನ್ನು ಕನ್ನಡ ಜನತೆಗೆ ನೀಡುತ್ತಿದೆ.

ಈ ಯೋಜನೆಗೆ ದುಡಿದ ಸಂಪಾದಕ ಮಂಡಳಿಯ ಶ್ರದ್ಧೆ ಹಾಗೂ ಮಾರ್ಗದರ್ಶನವನ್ನು, ವಿವಿಧ ಸಂಪುಟಗಳ ಸಂಪಾದಕರಾಗಿ ನಾಡಿನ ಅನೇಕ ವಿದ್ವಾಂಸರು ತೋರಿರುವ ಆಸಕ್ತಿ ಹಾಗೂ ನೆರವನ್ನು ಮತ್ತು ಈ ಸಂಪುಟದ ಸಂಪಾದಕರ ಶ್ರಮವನ್ನು ಸ್ಮರಿಸುತ್ತ ಕನ್ನಡ ಜನತೆಯ ಕೈಗೆ ಈ ಮೌಲಿಕ ಪ್ರಕಟಣೆಗಳನ್ನು ಸಂತೋಷದಿಂದ ಅರ್ಪಿಸುತ್ತೇನೆ.

**ಎಸ್. ಎಂ. ಕೃಷ್ಣ**

ಮುಖ್ಯಮಂತ್ರಿಗಳು

ಕರ್ನಾಟಕ ಸರ್ಕಾರ

# ಎರಡು ಮಾತು

ಕನ್ನಡ ಸಾಹಿತ್ಯದ ತವನಿಧಿಗಳಲ್ಲಿ ದಾಸಸಾಹಿತ್ಯವೂ ಒಂದು. ಕರ್ನಾಟಕದ ಸಾಹಿತ್ಯ, ಸಂಗೀತ, ಸಂಸ್ಕೃತಿಗಳನ್ನು ಪ್ರಭಾವಪೂರ್ಣವಾಗಿ ಸಮೃದ್ಧಿಗೊಳಿಸಿದವರು ಹರಿದಾಸರು. ಬದುಕಿನಲ್ಲಿ ನಿಷ್ಠೆ, ಸಾಹಿತ್ಯದಲ್ಲಿ ಬದುಕಿನ ತತ್ತ್ವಗಳನ್ನು ಅಡಗಿಸಿ ಜನಸಾಮಾನ್ಯರನ್ನು ಉನ್ನತ ಜೀವನದತ್ತ ಉದ್ದೀಪಿಸುವ ಮಹಾಕಾಯಕದಲ್ಲಿ ತೊಡಗಿದವರು ಹರಿದಾಸರು. ಕನ್ನಡ ಸಾಹಿತ್ಯಕ್ಕೆ ಅಪೂರ್ವ ಕೊಡುಗೆಯಾಗಿರುವ ಹರಿದಾಸ ಸಾಹಿತ್ಯ ಸಮಾಜದ ಮೌಢ್ಯವನ್ನು ಬಯಲಿಗೆಳೆದು, ಜಾತಿ, ಮತ, ಪಂಥಗಳನ್ನು ಮೀರಿ ನಿಂತ ಮಾನವೀಯ ಮೌಲ್ಯಗಳನ್ನು ಸಾಹಿತ್ಯದ ಮೂಲಕ ಅಭಿವ್ಯಕ್ತಿಸಿತು.

ಹರಿದಾಸ ಸಾಹಿತ್ಯಕ್ಕೆ ಪ್ರೇರಣೆ ಭಕ್ತಿಯಾದರೂ, ಕರ್ನಾಟಕ ಸಂಗೀತಕ್ಕೆ ಸಮೃದ್ಧಿಯನ್ನು ನೀಡಿದವರು ಹರಿದಾಸರು. ಗ್ರಾಮ್ಯ ಮತ್ತು ದೇಶ್ಯ ಶಬ್ದಗಳಿಗೆ ಸಾಹಿತ್ಯದ ಮುದ್ರೆಯನ್ನು ಒತ್ತಿ, ಭಾಷೆಗೊಂದು ಪರಿಪಕ್ವತೆಯನ್ನು ತಂದುಕೊಟ್ಟರು. ಇಂಥ ಸಾಹಿತ್ಯ ಸಂಪತ್ತನ್ನು ರಕ್ಷಿಸುವುದು ಮತ್ತು ಪ್ರಸಾರ ಮಾಡುವುದು ನಮ್ಮ ಕರ್ತವ್ಯ. ಈ ದೃಷ್ಟಿಯಿಂದ ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯ ಪ್ರಕಟಣ ಯೋಜನೆಗೆ ಸಮಿತಿಯೊಂದನ್ನು ರಚಿಸಿದ್ದು, ಇದರಲ್ಲಿ ನಾಡಿನ ಅನೇಕ ವಿದ್ವಾಂಸರು ಸಂಪುಟ ಸಂಪಾದಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಈ ಸಂಪುಟಗಳು ಹೊರಬರಲು ಕಾರಣರಾದ ಸಂಪಾದಕ ಮಂಡಳಿಯ ಸದಸ್ಯರಿಗೆ ಹಾಗೂ ಈ ಸಂಪುಟದ ಸಂಪಾದಕರಿಗೆ ನನ್ನ ಕೃತಜ್ಞತೆಗಳು.

ದಾಸರು ತಮ್ಮ ಸಾಹಿತ್ಯದಲ್ಲಿ ಸಾರ್ವಕಾಲಿಕ ಮೌಲ್ಯಗಳನ್ನು ಉಳಿಸಿ ಹೋಗಿದ್ದಾರೆ. ನಮ್ಮ ಸಾಮಾಜಿಕ ಜೀವನವನ್ನು ರೂಪಿಸುವಲ್ಲಿ ಈ ಕೀರ್ತನೆಗಳು ಮೌಲಿಕವಾದುವು. ಕನ್ನಡ ಜನತೆ ಈ ಕೃತಿಯ ಪ್ರಯೋಜನವನ್ನು ಪಡೆದರೆ ಪಟ್ಟ ಶ್ರಮ ಸಾರ್ಥಕವಾಗುತ್ತದೆ.

**ರಾಣಿ ಸತೀಶ್**

ಕನ್ನಡ ಮತ್ತು ಸಂಸ್ಕೃತಿ ಸಚಿವರು

# ಯೋಜನೆಯನ್ನು ಕುರಿತು

ಕನ್ನಡ ಸಾಹಿತ್ಯ ಚರಿತ್ರೆಯ ಸಿರಿವಂತಿಕೆಯಲ್ಲಿ ಕೀರ್ತನ ಸಾಹಿತ್ಯದ ಕೊಡುಗೆ ವಿಪುಲವಾದುದು; ವೈಶಿಷ್ಟ್ಯಪೂರ್ಣವಾದುದು. ಈ ಸಮಗ್ರ ಸಾಹಿತ್ಯದ ಸಂಗ್ರಹ ಮತ್ತು ಪ್ರಕಾಶನದ ಕಾರ್ಯ ಪೂರ್ಣವಾಗಿ ಆಗಿರಲಿಲ್ಲ. ಇದನ್ನು ಮನಗಂಡ ಸರ್ಕಾರ ಸಮಗ್ರ ದಾಸ ಸಾಹಿತ್ಯ ಪ್ರಕಟಣೆಯ ಕಾರ್ಯವನ್ನು ಕೈಗೆತ್ತಿಕೊಂಡಿತು.

ಸುಮಾರು ಒಂದು ನೂರ ಮೂವತ್ತೊಂಬತ್ತು ಜನ ದಾಸರ ಸುಮಾರು ಹದಿನಾರು ಸಾವಿರ ಕೀರ್ತನೆಗಳ ಬೃಹತ್ ಸಾಹಿತ್ಯ ಸಾಮಗ್ರಿ ದೊರಕಿತು. ಹೀಗೆ ಸಾಂಪ್ರದಾಯಿಕ ರೀತಿಯಲ್ಲಿ ಸಂಗ್ರಹಿಸಿ, ಸಂಪಾದಿಸಿದ ಕೀರ್ತನ ಸಾಹಿತ್ಯವನ್ನು ಸಂಪುಟಗಳಲ್ಲಿ ಮುದ್ರಿಸುವುದು ಕಷ್ಟವೇನಾಗಿರಲಿಲ್ಲ. ಆದರೆ, ಅದನ್ನು ಮಾಹಿತಿ ತಂತ್ರಜ್ಞಾನದ ಇವತ್ತಿನ ಸಂದರ್ಭದಲ್ಲಿ ಬಹು ಉಪಯೋಗಿ ನೆಲೆಯಲ್ಲಿ ಬಹುಮಾಧ್ಯಮದಲ್ಲಿ ಹೊರತರಬೇಕೆಂಬ ಕನಸು ರೋಮಾಂಚಕಾರಿ ಅನುಭವವೇ ಸರಿ. ಇದನ್ನು ಕೃತಿ ರೂಪಕ್ಕಿಳಿಸುವ ಹಾದಿಯಲ್ಲಿ ಎದುರಾದ ತಾಂತ್ರಿಕ ಸವಾಲು ಬಹು ಕ್ಲಿಷ್ಟಕರವಾಗಿಯೇ ಕಂಡಿತು.

ದಿಟ, ಈ ಸಮಗ್ರ ಸಾಹಿತ್ಯವನ್ನು ಕೇವಲ ಮುದ್ರಣದಲ್ಲಷ್ಟೇ ಅಲ್ಲ, ಆಯ್ದ ಕೀರ್ತನೆಗಳನ್ನು ಗಾಯನಕ್ಕೆ ಅಳವಡಿಸಿ, ಸಿ.ಡಿ. ಮತ್ತು ಅಂತರ್ಜಾಲದಲ್ಲಿ ಹೊರತರ ಬೇಕೆಂದಾಗ ಬಳಕೆದಾರರ ಆವಶ್ಯಕತೆಯನ್ನು ಆಧರಿಸಿ ತಯಾರಿಸುವ ಅಗತ್ಯ ಇತ್ತು. ಆದರೆ ಇವುಗಳಲ್ಲಿ ಕನ್ನಡ ಮತ್ತು ಇಂಗ್ಲಿಷ್ ಎರಡೂ ಭಾಷೆಗಳಲ್ಲಿ ಸರ್ಚ್ ಎಂಜಿನ್ (ಹುಡುಕುವಿಕೆ) ಇಲ್ಲದಿರುವುದು ಒಂದು ತಾಂತ್ರಿಕ ಸಮಸ್ಯೆಯೇ ಆಯಿತು.

ಈ ರೀತಿಯ ಪ್ರಯತ್ನ ಕನ್ನಡ ಭಾಷೆಯಲ್ಲಿ ಹಿಂದೆಂದೂ ಆಗದಿದ್ದುದರಿಂದ ತಂತ್ರಾಂಶವನ್ನು ಹೊಸದಾಗಿಯೇ ಅಭಿವೃದ್ಧಿ ಪಡಿಸಬೇಕಾದ ಸವಾಲನ್ನು ಕೈಗೆತ್ತಿ ಕೊಳ್ಳಲಾಯಿತು. ಇದಕ್ಕಾಗಿ ಕನ್ನಡ ಗಣಕ ಪರಿಷತ್ತು, ರಾಷ್ಟ್ರೀಯ ಮಾಹಿತಿ ಕೇಂದ್ರ (ಎನ್‌ಐಸಿ), ಮಾಹಿತಿ ಮತ್ತು ತಂತ್ರಜ್ಞಾನ ಇಲಾಖೆ, ಮಹಾಭಾರತ ಸಂಶೋಧನಾ ಪ್ರತಿಷ್ಠಾನ ಮುಂತಾದ ಹಲವಾರು ತಂತ್ರಾಂಶ ಸಂಸ್ಥೆಗಳೊಂದಿಗೆ ನಿರಂತರ ಸಮಾಲೋಚನೆ, ಚಿಂತನೆಗಳನ್ನು ನಡೆಸಲಾಯಿತು.

ಹೀಗೆ ಸಾಹಿತ್ಯ ಸಂಗ್ರಹ, ಸಂಪಾದನೆ, ಸಂಗೀತ ಸಂಯೋಜನೆ, ಧ್ವನಿಮುದ್ರಣ, ಬಹುಮಾಧ್ಯಮಕ್ಕೆ ಅಳವಡಿಸುವ ತಾಂತ್ರಿಕ ಕುಶಲತೆಯ ನಿರಂತರ ಕಾರ್ಯಾನುಷ್ಠಾನಕ್ಕೆ ಸಂಪಾದಕ ಮಂಡಳಿ ಸದಸ್ಯರು, ಸಂಪುಟ ಸಂಪಾದಕರು, ಇಲಾಖಾ ಅಧಿಕಾರಿಗಳು, ತಂತ್ರಜ್ಞರು, ಕೋರ್ ಸಮಿತಿ ಸದಸ್ಯರು, ಸಂಗೀತ ನಿರ್ದೇಶಕರು, ಗಾಯಕರು – ಈ ಎಲ್ಲರ ಪರಿಶ್ರಮ ಅಗಾಧವಾಗಿ ದೊರಕಿದೆ. ಈ ಶ್ರಮದ ಫಲವಾಗಿ ಬಹುಮಾಧ್ಯಮದಲ್ಲಿ ಸಮಗ್ರ ದಾಸ ಸಾಹಿತ್ಯ ಯೋಜನೆಯ ಬೃಹತ್ ಕಾರ್ಯ ಸಾಕಾರಗೊಂಡಿದೆ.

ಈ ವಿಪುಲ ಸಾಹಿತ್ಯವನ್ನು ಕನ್ನಡ ಅಕ್ಷರಜ್ಞಾನಿಗಳು ಪುಸ್ತಕ ರೂಪದಲ್ಲಿಯೂ ಬಹುಗಾತ್ರದ ಸಾಹಿತ್ಯವನ್ನು ಕೈ ಅಳತೆಯ ಸಿ.ಡಿ. ರೂಪದಲ್ಲಿಯೂ ಈಗ ಪಡೆಯಬಹುದಾಗಿದೆ. ಅಲ್ಲದೆ, ಅಂತರ್ಜಾಲದ ಮೂಲಕ ವಿಶ್ವದ ಯಾವುದೇ ಮೂಲೆಯಲ್ಲಿರುವ ಆಸಕ್ತ ಜನತೆ ಕುಳಿತಲ್ಲಿಯೇ ಆರಾಮವಾಗಿ ವೀಕ್ಷಿಸುವ, ಕೇಳುವ ಹಾಗೂ ಕನ್ನಡ ಅಕ್ಷರ ಜ್ಞಾನವಿರದ ಭಾಷಿಕರು ಸಹಿತ ಸಂಗೀತವನ್ನು ಕೇಳಿ ಆಸ್ವಾದಿಸುವ ಅವಕಾಶವನ್ನು ಏಕಕಾಲದಲ್ಲಿ ಕಲ್ಪಿಸಲಾಗಿದೆ. ಪ್ರಕಾಶನದ ಇತಿಹಾಸದಲ್ಲಿಯೇ ದಾಖಲನೀಯವಾದ ಈ ಕಾರ್ಯ ಮುಂದೆ ಸರ್ಕಾರಿ ಸಂಸ್ಥೆಗಳಿಗಾಗಲಿ, ಖಾಸಗಿ ಸಂಸ್ಥೆಗಳಿಗಾಗಲಿ ಮಾದರಿಯಾಗಬಹುದೆಂದು ನಂಬಲಾಗಿದೆ.

ನಮ್ಮ ಸಂಸ್ಕೃತಿಯನ್ನು ಬಿತ್ತರಿಸಲು ನಾಲ್ಕು ಗೋಡೆಗಳೊಳಗಿನ ರಂಗ ಮಂದಿರಗಳು, ವೇದಿಕೆಗಳು ಅಗತ್ಯವಿದೆ ದಿಟ. ಆದರೆ ಭವಿತವ್ಯದಲ್ಲಿ ವಿಶ್ವದ ಜನರನ್ನು ತಲಪಲು ಮತ್ತು ಮುಖ್ಯವಾಗಿ ಯುವಜನಾಂಗಕ್ಕೆ ನಮ್ಮ ಸಾಂಸ್ಕೃತಿಕ ಕ್ಷಿತಿಜದ ವಿಸ್ತಾರವನ್ನು ಪರಿಚಯಿಸಲು ಸೂಕ್ಷ್ಮ ಸಂವೇದನಾಶೀಲವಾದ ಸಾಹಿತ್ಯವನ್ನು ಬಹುಮಾಧ್ಯಮದಲ್ಲಿ ಅಳವಡಿಸುವುದು ಅತ್ಯಾವಶ್ಯಕ. ಈ ನಿಟ್ಟಿನಲ್ಲಿ ಇದೊಂದು ವಿನೂತನ ಪ್ರಯೋಗ; ಈ ಪ್ರಯೋಗದ ಫಲ ಎಲ್ಲರಿಗೂ ಲಭ್ಯವಾಗಲೆಂಬುದು ನಮ್ಮ ಆಶಯ.

**ಸಿ. ಎಸ್. ಕೇದಾರ್**

ಸರ್ಕಾರದ ಕಾರ್ಯದರ್ಶಿ

# ಪ್ರಕಾಶಕರ ಮಾತು

ಕರ್ನಾಟಕದ ಧಾರ್ಮಿಕ, ಸಾಂಸ್ಕೃತಿಕ ಇತಿಹಾಸದಲ್ಲಿ ಹರಿದಾಸರ ಸ್ಥಾನ ವಿಶಿಷ್ಟವಾದದ್ದು. ಸಾವಿರಾರು ವರ್ಷಗಳಿಂದ ಭಾರತದಲ್ಲಿ ಅವಿರತವಾಗಿ ಹರಿದುಬಂದ ಜೀವನಮೌಲ್ಯಗಳನ್ನು ಜನಸಾಮಾನ್ಯರ ಆಡುಭಾಷೆಯಲ್ಲಿ ಮುಟ್ಟಿಸಿ, ಲೌಕಿಕ ವಿಡಂಬನೆಯ ಮೂಲಕ ಅವರ ಮಾನಸಿಕ ವಿಕಾಸವನ್ನು ಯಶಸ್ವಿಯಾಗಿ ಸಾಧಿಸಿದವರು ಹರಿದಾಸರು. ಪಾಂಡಿತ್ಯ, ಲೋಕಾನುಭವಗಳ ಹಿನ್ನೆಲೆಯಿಂದಾಗಿ, ಆಡುಭಾಷೆಯ ಸೊಗಡಿನಿಂದಾಗಿ ಇವರು ಹಾಡಿದ್ದೆಲ್ಲ ಸಾಹಿತ್ಯವಾಯಿತು, ಕಾವ್ಯವಾಯಿತು, ಕೇಳುಗರನ್ನು ಸೆರೆಹಿಡಿಯಿತು. ಗೇಯಗುಣವುಳ್ಳ, ನೃತ್ಯಕ್ಕೆ ಅಳವಡುವ, ಛಂದೋಬದ್ಧವಾದ, ಜನತೆಯ ಮಧ್ಯದಲ್ಲಿಯೇ ಸಂದರ್ಭಾನುಸಾರ ಹುಟ್ಟಿದ ಹರಿದಾಸ ಸಾಹಿತ್ಯ ವೈಶಿಷ್ಟ್ಯಪೂರ್ಣವೆನಿಸಿತು. ಕನ್ನಡ ವಾಙ್ಮಯದಲ್ಲಿ ದಾಸಸಾಹಿತ್ಯ ಒಂದು ವಿಶೇಷ ಸ್ಥಾನ ಪಡೆಯಿತು. ಹೀಗೆ ಸಾಹಿತ್ಯ, ಸಂಗೀತ ಮತ್ತು ಸಾಮಾಜಿಕ ಕ್ಷೇತ್ರಕ್ಕೆ ದಾಸಸಾಹಿತ್ಯದ ಕೊಡುಗೆ ಗಣನೀಯವಾದುದು.

ಸುಮಾರು ನೂರಮೂವತ್ತೊಂಬತ್ತು ಜನ ದಾಸರು ಆಗಿಹೋಗಿದ್ದು, ಅವರ ಕೀರ್ತನೆಗಳ ಸಂಖ್ಯೆ ಸುಮಾರು ಹದಿನಾರು ಸಾವಿರಕ್ಕೂ ಅಧಿಕ. ಈವರೆಗೆ ಕೆಲವು ದಾಸರ ಕೀರ್ತನೆಗಳು ಬಿಡಿ ಬಿಡಿಯಾಗಿ ಪ್ರಕಟವಾಗಿವೆಯಾದರೂ, ಇನ್ನೂ ಅನೇಕ ದಾಸವರೇಣ್ಯರ ಕೀರ್ತನೆಗಳು ಹಸ್ತಪ್ರತಿ ರೂಪದಲ್ಲಿಯೇ ಉಳಿದುಕೊಂಡಿವೆ. ಅವುಗಳನ್ನು ಸಂಗ್ರಹಿಸಿ, ಸಂಪಾದಿಸಿ, ಪ್ರಕಟಿಸಿ, ಸಮಗ್ರ ದಾಸಸಾಹಿತ್ಯವು ಕನ್ನಡಿಗರಿಗೆ ಒಂದೆಡೆ ಲಭ್ಯವಾಗುವಂತೆ ಮಾಡುವ ಉದ್ದೇಶದಿಂದ ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯವು ಸಮಗ್ರ ದಾಸಸಾಹಿತ್ಯ ಪ್ರಕಟಣೆಯ ಬೃಹತ್ ಯೋಜನೆಯನ್ನು ಹಾಕಿಕೊಂಡಿದೆ. ಈ ಉದ್ದೇಶಕ್ಕಾಗಿ ಕಾರ್ಯನಿರ್ವಾಹಕ ಸಂಪಾದಕರಾದ ಡಾ. ಶ್ರೀನಿವಾಸ ಹಾವನೂರ, ಡಾ. ಟಿ. ಎನ್. ನಾಗರತ್ನ, ಪ್ರೊ. ವಸಂತ ಕುಷ್ಟಗಿ, ಸದಸ್ಯರಾದ ಡಾ. ಎಂ. ಎಂ. ಕಲಬುರ್ಗಿ, ಡಾ. ಬಸವರಾಜ ಸಬರದ, ಪ್ರೊ. ಸುಧಾಕರ, ಡಾ. ಕೃಷ್ಣ ಕೊಲ್ಹಾರಕುಲಕರ್ಣಿ, ಡಾ. ಮಂದಾಕಿನಿ (ಈಗ ದಿವಂಗತರು) ಹಾಗೂ ಪ್ರೊ. ಎಂ. ರಾಜಗೋಪಾಲಾಚಾರ್ಯ (ಈಗ ದಿವಂಗತರು) ಅವರನ್ನೊಳಗೊಂಡಂತೆ ಸಂಪಾದಕ ಸಮಿತಿಯನ್ನು ರಚಿಸಲಾಯಿತು. ಇಲಾಖಾ ನಿರ್ದೇಶಕರು ಸಮಿತಿಯ ಸದಸ್ಯ-ಕಾರ್ಯದರ್ಶಿಗಳಾಗಿರುತ್ತಾರೆ. ಇದರಲ್ಲಿ ನಾಡಿನ ಅನೇಕ ವಿದ್ವಾಂಸರ ನೆರವನ್ನು ಬಳಸಿಕೊಳ್ಳಲಾಗುತ್ತಿದೆ.

ಈ ಯೋಜನೆಯನ್ವಯ 'ಸಮಗ್ರ'ವಾಗಿ ದಾಸರ ಕೀರ್ತನೆಗಳನ್ನು ಸಂಗ್ರಹಿಸಿ ಪ್ರಕಟಿಸುವುದಿದ್ದರೂ ಕೆಲವು ಹರಿದಾಸರ ರಚನೆಗಳು ಬಿಟ್ಟು ಹೋಗಿರುವ ಸಾಧ್ಯತೆ ಇರುತ್ತದೆ. ಅಂಥ ಹರಿದಾಸರ ಕೀರ್ತನೆಗಳು ದೊರೆತಲ್ಲಿ ಮುಂದೆ ಪರಿಷ್ಕರಣ ಸಂದರ್ಭದಲ್ಲಿ ಪ್ರಕಟಿಸಲು ಕ್ರಮಕೈಗೊಳ್ಳಲಾಗುವುದು.

ಸಮಗ್ರ ದಾಸಸಾಹಿತ್ಯ ಯೋಜನೆಯಡಿ ಪ್ರಕಟವಾಗುತ್ತಿರುವ ಆಯಾ ಸಂಪುಟಗಳ ಸಂಪಾದಕರಿಗೆ ಹಾಗೂ ಈ ಕಾರ್ಯದಲ್ಲಿ ನಮ್ಮೊಡನೆ ಸಹಕರಿಸಿದ ಸಂಪಾದಕ ಮಂಡಳಿಯವರಿಗೆ ಹಾಗೂ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಹಿಂದಿನ ನಿರ್ದೇಶಕರಾದ ಶ್ರೀ ಕೆ. ಸಿ. ರಾಮಮೂರ್ತಿ, ಶ್ರೀ ಸಿ. ಸೋಮಶೇಖರ ಅವರಿಗೆ, ಜಂಟಿ ನಿರ್ದೇಶಕರಾದ ಶ್ರೀ ಕಾ. ತ. ಚಿಕ್ಕಣ್ಣ ಅವರಿಗೆ, ಸಹಾಯಕ ನಿರ್ದೇಶಕರಾದ ಶ್ರೀಮತಿ ವೈ. ಎಸ್. ವಿಜಯಲಕ್ಷ್ಮಿ ಹಾಗೂ ಡಾ. ಮಂಜುಳ ಅವರಿಗೆ ಕೃತಜ್ಞತೆಗಳು.

ಹರಿದಾಸರ ಕೀರ್ತನೆಗಳನ್ನು ಆಯ್ದು ಸಂಗೀತಕ್ಕೆ ಆಯ್ಕೆ ಮಾಡಲು ನೆರವಾದ ಶ್ರೀ ವಿನಾಯಕ ತೊರವಿ, ಶ್ರೀ ಮೈಸೂರು ವಿ. ಸುಬ್ರಹ್ಮಣ್ಯ, ಶ್ರೀ ಆರ್. ಕೆ. ಪದ್ಮನಾಭ, ಶ್ರೀ ಬಾನಂದೂರು ಕೆಂಪಯ್ಯ ಹಾಗು ಶ್ರೀಮತಿ ಮಾಲತಿ ಶರ್ಮರವರಿಗೆ, ಮತ್ತು ಈ ಯೋಜನೆಯಲ್ಲಿ ಪಾಲ್ಗೊಂಡ ಎಲ್ಲ ಸಂಗೀತ ನಿರ್ದೇಶಕರಿಗೆ ಹಾಗೂ ಗಾಯಕರಿಗೆ ಕೃತಜ್ಞತೆಗಳು.

ಸಂಪುಟಗಳನ್ನು ಮುದ್ರಣಕ್ಕೆ ಅನುಗೊಳಿಸುವ ಕಾರ್ಯ ನಿರ್ವಹಿಸಿದ ಪ್ರೊ. ಜಿ. ಅಶ್ವತ್ಥನಾರಾಯಣ, ಡಾ. ಅನಂತ ಪದ್ಮನಾಭರಾವ್ ಮತ್ತು ಪ್ರೊ. ನಾ. ಗೀತಾಚಾರ್ಯ ಇವರಿಗೂ ಸಹ ಕೃತಜ್ಞತೆಗಳು.

ಈ ಸಮಗ್ರ ದಾಸಸಾಹಿತ್ಯ ಸಂಪುಟಗಳ ಮುದ್ರಣ ಕಾರ್ಯವನ್ನು ನಿರ್ವಹಿಸಿದ ಎಂ.ಎಸ್.ಐ.ಎಲ್. ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರಾದ ಶ್ರೀ ಅಶೋಕ್ ವಿ. ಡೇವಿಡ್ ಹಾಗೂ ವಿಶೇಷಾಧಿಕಾರಿಗಳಾದ ಶ್ರೀ ಎಂ. ರವಿಶಂಕರ್ ಅವರಿಗೆ ನನ್ನ ಕೃತಜ್ಞತೆಗಳು.
ಸಮಗ್ರ ದಾಸಸಾಹಿತ್ಯವನ್ನು ಪ್ರಕಟಿಸುವುದು ಹರಿದಾಸರಿಗೂ ಕನ್ನಡ ಜನತೆಗೂ ನಾವು ಸಲ್ಲಿಸಬೇಕಾದ ಸೇವೆಯೆಂದು ಭಾವಿಸಿದ್ದೇನೆ. ಪಂಡಿತ–ಪಾಮರರನ್ನು ಏಕಕಾಲಕ್ಕೆ ಆಕರ್ಷಿಸಬಲ್ಲ ವಿಶಿಷ್ಟ ಸಾಮರ್ಥ್ಯ ದಾಸಸಾಹಿತ್ಯದ್ದು ಎಂದರೆ ತಪ್ಪಾಗಲಾರದು. ಕನ್ನಡ ಜನತೆಯು ಈ ಪ್ರಕಟಣೆಯ ಸದುಪಯೋಗ ಪಡೆದುಕೊಂಡೀತು ಎಂದು ಆಶಿಸಿದ್ದೇನೆ.

**ವೈ. ಕೆ. ಮುದ್ದುಕೃಷ್ಣ**

ನಿರ್ದೇಶಕರು

# ಸಂಪಾದಕ ಮಂಡಳಿಯ ನುಡಿ

ಕನ್ನಡ ಸಾಹಿತ್ಯದ ತವನಿಧಿಗಳಲ್ಲಿ ದಾಸಸಾಹಿತ್ಯವೂ ಒಂದು. ಕನ್ನಡಜನಕ್ಕೆ ಪಂಪನಂತಹ ಪ್ರೌಢಕವಿಗಳು ಗೊತ್ತಿರಲಿ ಬಿಡಲಿ, ದಾಸರ ಹಾಡುಗಳು ಗೊತ್ತಿಲ್ಲದವರು ಮಾತ್ರ ಅಪರೂಪ. ಜನರ ಮೇಲೆ ನಿರಂತರ ಪ್ರಭಾವವನ್ನು ಬೀರುವ ಜನಸಮ್ಮುಖತೆ ದಾಸಸಾಹಿತ್ಯದ ಪ್ರಮುಖ ಲಕ್ಷಣಗಳಲ್ಲಿ ಒಂದು. ಇಂತಹ ದಾಸರ ಹಾಡುಗಳು ಜ್ಞಾನಸಂಪದ ಹಾಗೂ ಭಕ್ತಿಸಂಪದಗಳ ಸಾರ್ವತ್ರಿಕ ಹಬ್ಬುಗೆಗೆ ಸಾಧನವಾಗಿ ಪರಿಣಮಿಸಿವೆ.

ಕನ್ನಡ ನಾಡಿನಾದ್ಯಂತ ಎಲ್ಲ ಸ್ತರಗಳಲ್ಲಿ ವರ್ಗ-ವರ್ಣಗಳ ಭೇದವಿಲ್ಲದೆ, ಜನರ ಬಾಯಲ್ಲಿ ಉಳಿದುಕೊಂಡು ಬಂದ ಈ ಸಾಹಿತ್ಯವನ್ನು ಮೊಟ್ಟಮೊದಲಿಗೆ ಪ್ರಕಟಿಸಿದ ಶ್ರೇಯಸ್ಸು ಬಾಸೆಲ್ ಮಿಶನ್ನಿನ ರೆ. ಹರ್ಮನ್ ಮೊಗ್ಲಿಂಗ್‌ರಿಗೆ ಸೇರುತ್ತದೆ. ಇವರು ತಮ್ಮ ಇಲ್ಲಿಯ ವಾಸ್ತವ್ಯದಲ್ಲಿ (೧೮೩೬ರಿಂದ) ನಾಲ್ಕುನೂರಕ್ಕೂ ಮೀರಿದ ದಾಸರಪದಗಳನ್ನು ಸಂಗ್ರಹಿಸಿದ್ದರು. ಅವುಗಳಲ್ಲಿಯ ಒಂದು ನೂರು ಪದಗಳ ಸಂಗ್ರಹವನ್ನು 'ದಾಸರ ಪದಗಳು' ಎಂಬ ಹೆಸರಿನಿಂದ ಕ್ರಿ. ಶ. ೧೮೫೦ರಲ್ಲಿ, ಮತ್ತೆ ಕ್ರಿ.ಶ. ೧೮೫೨ರಲ್ಲಿ ೧೭೪ ಪದಗಳುಳ್ಳ ಸಂಕಲನವನ್ನು ಮಂಗಳೂರಿನಲ್ಲಿ ಕಲ್ಲಚ್ಚಿನಲ್ಲಿ ಛಾಪಿಸಿ ಪ್ರಕಟಿಸಿದರು. ಈ ವಿಷಯವನ್ನು ೧೮೭೩ರಲ್ಲಿ ಪ್ರಕಟವಾದ ಇಂಡಿಯನ್ ಎಂಟಿಕ್ವೆರಿಯ 'On the Karnataka Vaishnava Dasas' – ಎಂಬ ತಮ್ಮ ಲೇಖನದಲ್ಲಿ ರೆ. ಕಿಟೆಲ್ಲರು ಕಾಣಿಸಿದ್ದಾರೆ. ಇದರಿಂದ ಕಿಟೆಲ್‌ರಂಥವರು ಕೂಡ ದಾಸರ ಪದಗಳ ಮಹತ್ವವನ್ನು ಮತ್ತು ಜನಪ್ರಿಯತೆಯನ್ನು ಗುರುತಿಸಿದ್ದರು ಎಂಬುದು ಗೊತ್ತಾಗುತ್ತದೆ. ಪ್ರಾಸಂಗಿಕವಾಗಿ ಇದುವೇ ದಾಸಸಾಹಿತ್ಯದ ಕುರಿತಾದ ಮೊದಲ ಲೇಖನವೂ ಆಗಿದೆ.

ಆ ನಂತರದ ದಿನಗಳಲ್ಲಿ ಈ ಕ್ಷೇತ್ರದಲ್ಲಿ ಹಲವಾರು ಜನರು ಕೆಲಸವನ್ನು ಮುಂದುವರಿಸಿದರು. ರೆ. ಮೊಗ್ಲಿಂಗರ 'ದಾಸರ ಪದಗಳು' ಇದರ ದ್ವಿತೀಯ ಆವೃತ್ತಿಯನ್ನು ೧೮೭೧ರಲ್ಲಿ ಜಾನ್ ಗ್ಯಾರೆಟರ ಸೂಚನೆಯ ಮೇರೆಗೆ ಹೊಳಕಲ್ಲು ನರಸಿಂಹಯ್ಯನವರು ಬೆಂಗಳೂರಿನಿಂದ ಪ್ರಕಟಿಸಿದರು. ೧೮೭೩ರಲ್ಲಿ ಹಿಂದೂ ಭಾಷಾ ಸಂಜೀವಿನೀ ಮುದ್ರಣ ಶಾಲೆಯಲ್ಲಿ 'ಹರಿಭಜನೆ, ಕೀರ್ತನೆ' ಎಂಬ ಸಂಗ್ರಹ ಪ್ರಕಟವಾಯಿತು. ೧೮೯೦ನೆಯ ದಶಕದಲ್ಲಿ ಬೆಳಗಾವಿಯ ಆಬಾಜಿ ರಾಮಚಂದ್ರ ಸಾವಂತ ಇವರು ದೇವನಾಗರಿ ಲಿಪಿಯಲ್ಲಿ "ದಾಸರ ಪದಗಳ ಸಂಗ್ರಹವು" ಎಂಬುದಾಗಿ ಎರಡು ಭಾಗಗಳಲ್ಲಿ ಪ್ರಕಟಿಸಿದರು. ಆ ದಶಕದಲ್ಲಿಯೇ ಮಡಕಶಿರಾದ ಬಾಲಕೃಷ್ಣರಾಯರು ೧೮೯೪ರಲ್ಲಿ 'ಪುರಂದರ ದಾಸರು ಮೊದಲಾದ ಅಪರೋಕ್ಷ ಜ್ಞಾನಿಗಳ ಪದಗಳು' ಎಂಬ ಪುಸ್ತಕವನ್ನು ತೆಲುಗು ಲಿಪಿಯಲ್ಲಿ ಮುದ್ರಿಸಿದ್ದು ಗಮನಾರ್ಹವಾಗಿದೆ. ಮತ್ತೆ ೧೯೦೮ರಲ್ಲಿ ಅವರೇ ಇನ್ನೊಂದು ಸಂಕಲನವನ್ನೂ ಪ್ರಕಟಿಸಿದ್ದಾರೆ.

ಹೀಗೆ ೧೮೫೦ರಷ್ಟು ಹಿಂದೆಯೇ ಪ್ರಾರಂಭವಾದ ದಾಸರ ಪದಗಳ ಸಂಗ್ರಹ ಹಾಗೂ ಪ್ರಕಟಣೆಯ ಕಾರ್ಯಕ್ಕೆ ಒಂದು ವ್ಯವಸ್ಥಿತ ರೂಪವನ್ನು ಕೊಟ್ಟು, ನಾಡಿನಾದ್ಯಂತ ಹರಿದು ಹಂಚಿಹೋದ, ಜನರ ಬಾಯಲ್ಲಿ ಉಳಿದುಕೊಂಡು ಬಂದ ವಿವಿಧ ದಾಸರ ಪದಗಳನ್ನು ಸಂಗ್ರಹಿಸಿ ಪ್ರಕಟಿಸಲು ಪ್ರಾರಂಭಿಸಿದವರು ಉಡುಪಿಯ ಪಾವಂಜೆ ಗುರುರಾಯರು. ಅವರು ೧೯೧೪ರಲ್ಲಿ ಪ್ರಕಟಿಸಿದ ಮೊದಲ ಸಂಕಲನದ ಹೆಸರು 'ಉದಯರಾಗವು' ಎಂಬುದು. ಅನಂತರದ ದಿನಗಳಲ್ಲಿ ಪುರಂದರದಾಸರ ಕೀರ್ತನೆಗಳನ್ನು ಐದು ಸಂಪುಟಗಳಲ್ಲಿ ಮತ್ತು ಉಳಿದ ದಾಸರ ಕೃತಿಗಳನ್ನು ಬಿಡಿಬಿಡಿಯಾಗಿ ಪ್ರಕಟಿಸಿದರು. ಹೀಗೆ ನಾಡಿನ ದಕ್ಷಿಣದ ಅಂಚಿನ ಉಡುಪಿಯಲ್ಲಿ ಪ್ರಾರಂಭವಾದ ಕೆಲಸವನ್ನು ಉತ್ತರದ ಅಂಚಿನ ಲಿಂಗಸುಗೂರಿನಲ್ಲಿ ಗೊರಾಬಾಳ ಹಣಮಂತರಾಯರು 'ವರದೇಂದ್ರ ಸಾಹಿತ್ಯ ಮಾಲೆ'ಯನ್ನು ಪ್ರಾರಂಭಿಸಿ ತಮ್ಮ ಇಡೀ ಜೀವನವನ್ನೇ ಹರಿದಾಸ ಸಾಹಿತ್ಯದ ಸಂಗ್ರಹ ಮತ್ತು ಪ್ರಕಟಣೆಗೆ ಮೀಸಲಾಗಿರಿಸಿದರು. ಇತ್ತ ಮೈಸೂರು ಭಾಗದಲ್ಲಿ ಸುಪ್ರಸಿದ್ಧ ದಾಸರ ಹಾಡುಗಳನ್ನು ತಕ್ಕಮಟ್ಟಿಗೆ ಶಾಸ್ತ್ರಶುದ್ಧವಾಗಿ ಪ್ರಕಟಿಸಲು

ಸುಬೋಧ ರಾಮರಾಯರು ಮುಂದಾದರು. ಇದೇ ಬಗೆಯ ಕೆಲಸವನ್ನು ಧಾರವಾಡ ಪ್ರದೇಶದಲ್ಲಿ ನಾರಾಯಣರಾವ ಕಲಮದಾನಿ, ಹುಚ್ಚರಾವ ಬೆಂಗೇರಿ ಹಾಗೂ ಬೆಟಗೇರಿ ಕೃಷ್ಣಶರ್ಮರು ಮಾಡಿದರು. ಇದರೊಂದಿಗೆ, ಭಜನೆಯ ದೃಷ್ಟಿಯಿಂದ ಅನುಕೂಲವಾಗುವಂತೆ ನಾಡಿನ ವಿವಿಧ ಭಾಗಗಳಲ್ಲಿ ದಾಸಸಾಹಿತ್ಯಾಸಕ್ತರು ತಮತಮಗೆ ಬೇಕಾದ ಪದಗಳ ಸಂಗ್ರಹವನ್ನು ಪ್ರಕಟಿಸತೊಡಗಿದರು. ಇದರಿಂದಾಗಿ ನಾಡಿನ ಬಹುತೇಕ ಭಾಗಗಳಲ್ಲಿ ಬೇರೆ ಬೇರೆ ದಾಸರು ಇದ್ದುದು ಮತ್ತು ಅವರು ಹಾಡುಗಳನ್ನು ಬರೆದಿದ್ದಾರೆ ಎಂಬುದು ಗಮನಕ್ಕೆ ಬಂದಿತು. ಅದು 'ದಾಸ-ಪೀಳಿಗೆ'ಯನ್ನು ಗುರುತಿಸಲು ಸಹಾಯವಾಯಿತು.

ಶ್ರೀಪಾದರಾಜರಿಂದ ಪ್ರಾರಂಭವಾದ ಕೀರ್ತನೆಗಳ ರಚನೆಯ ಸಂಪ್ರದಾಯದಲ್ಲಿ ಈ ಐದುನೂರು ವರ್ಷಗಳಲ್ಲಿ ಸುಮಾರು ಮುನ್ನೂರು ಜನ ಹರಿದಾಸರು ಹುಟ್ಟಿ ಮೂವತ್ತು ಸಾವಿರಕ್ಕೂ ಮಿಕ್ಕ ಕೀರ್ತನೆಗಳನ್ನು ರಚಿಸಿದ್ದಾರೆಂದರೆ ಅವುಗಳ ಮಹತ್ವ ಗೊತ್ತಾಗದೇ ಇರದು.

ಇಡಿಯಾಗಿ-ಬಿಡಿಬಿಡಿಯಾಗಿ ವ್ಯಕ್ತಿಗಳಿಂದ, ಸಂಘ ಸಂಸ್ಥೆಗಳಿಂದ ದಾಸರ ಪದಗಳು ಪ್ರಕಟವಾಗುತ್ತ ಬರುತ್ತಿರುವಾಗಲೇ ಪುರಂದರ ಕನಕದಾಸರ ಚತುಃಶತಮಾನೋತ್ಸವ ಸಂದರ್ಭಗಳಲ್ಲಿ ಅವರ ಸಮಗ್ರ ಕೃತಿಗಳು ಸರ್ಕಾರದಿಂದ ಹಾಗೂ ವಿವಿಧ ಸಂಘ ಸಂಸ್ಥೆಗಳಿಂದ ಪ್ರಕಟವಾದವು. ಆದರೆ ಸಮಗ್ರ ದಾಸಸಾಹಿತ್ಯದ ಪ್ರಕಟಣೆ ಈವರೆಗೆ ಆಗಲೇ ಇಲ್ಲವೆಂದು ಹೇಳಬಹುದು. ಇಂಥದೊಂದು ಪ್ರಯತ್ನವನ್ನು ಮೂರು ದಶಕಗಳ ಹಿಂದೆ ಮೈಸೂರು ವಿಶ್ವವಿದ್ಯಾನಿಲಯವು ಕೈಗೊಂಡಿತು. ವೈಜ್ಞಾನಿಕ ರೀತಿಯಲ್ಲಿ ಶಾಸ್ತ್ರಶುದ್ಧವಾಗಿ ದಾಸಸಾಹಿತ್ಯವನ್ನು ಪ್ರಕಟಿಸುವುದರ ಅಡಿಗಲ್ಲನ್ನು ಹಾಕಿದ ಶ್ರೇಯಸ್ಸು ಆ ಮಾಲೆಯ ಸಂಪಾದಕರಾಗಿದ್ದ ಡಾ. ಜಿ. ವರದರಾಜರಾವ್ ಅವರಿಗೆ ಸಲ್ಲಬೇಕು. ಇದುವರೆಗೆ ಕೆಲವು ಸಂಪುಟಗಳು ಮಾತ್ರ ಬಂದಿವೆ. ಆದರೆ ಹಸ್ತಪ್ರತಿಗಳಲ್ಲಿ ವಿಪುಲ ದಾಸಸಾಹಿತ್ಯವನ್ನು ಸಂಗ್ರಹಿಸಲಾಗಿದೆ. ಅದೇ ರೀತಿಯಲ್ಲಿ ಲಿಂಗಸುಗೂರಿನಲ್ಲಿ, ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಹಾಗೂ ತಿರುಪತಿಯ ದಾಸಸಾಹಿತ್ಯ ಪ್ರೊಜೆಕ್ಟದಲ್ಲಿ ಕೂಡ ವಿಪುಲ ಹಸ್ತಪ್ರತಿಗಳ ಸಂಗ್ರಹವಿದೆ. ಇವರೆಲ್ಲರ ಸಹಕಾರದಿಂದ ಈಗ ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯವನ್ನು ಒಂದೆಡೆ ಸಂಗ್ರಹಿಸಿ ಪ್ರಕಟಿಸುವ ಸಾಹಸದ ಕಾರ್ಯವನ್ನು ಮಾಡುತ್ತಿದೆ.

## ಸಂಪುಟ ಯೋಜನೆ

ದಾಸಸಾಹಿತ್ಯದ ಪರಿಷ್ಕರಣ ಕಾರ್ಯ ತುಂಬ ಜಟಿಲವಾದುದೆಂಬುದು ಸಂಪಾದಕ ಮಂಡಳಿಯ ಪ್ರಥಮ ಸಭೆಯಲ್ಲಿಯೇ ಅನುಭವಕ್ಕೆ ಬಂದಿತು. ಕಳೆದ ಐದು ಶತಮಾನಗಳಿಂದ ನಿರಂತರ ಹರಿದುಬಂದ ದಾಸಸಾಹಿತ್ಯ ರಚನೆಯಲ್ಲಿಯ ದಾಸರ ಹಾಗೂ ದಾಸರ ಪದಗಳ ಸಂಖ್ಯಾಬಾಹುಳ್ಯವನ್ನು ಗಮನಿಸಿ ಅದಕ್ಕೊಂದು ಕಾಲಮಿತಿಯನ್ನು ಹಾಕಿಕೊಳ್ಳುವುದು ಅನಿವಾರ್ಯ ವಾಯಿತು. ಹಾಗೆ ದಾಸಸಾಹಿತ್ಯದ ಪ್ರಾರಂಭ ಕಾಲದಿಂದ ೧೯ನೆಯ ಶತಮಾನದ ಅಂತ್ಯದವರೆಗೆ ರಚಿತಗೊಂಡ ವೈದಿಕ ಪರಂಪರೆಯ ದಾಸರ ಪದಗಳನ್ನು ಸಂಗ್ರಹಿಸುವುದೆಂದೂ, ಅದರಲ್ಲಿ ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಪರಂಪರೆಯ ಲಭ್ಯವಿದ್ದ ಹಾಡುಗಳನ್ನು ಸೇರಿಸಿಕೊಂಡು ೩೫ ಸಂಪುಟಗಳಲ್ಲಿ ಪ್ರಕಟಿಸುವುದೆಂದೂ ನಿರ್ಧರಿಸಲಾಯಿತು.

ಈ ೩೫ ಸಂಪುಟಗಳನ್ನು* ಸಂಪಾದಕ ಮಂಡಳಿಯ ಸದಸ್ಯರಲ್ಲದೆ ನಾಡಿನ ಹಲವಾರು ವಿದ್ವಾಂಸರನ್ನು ಸಂಪಾದಿಸಿಕೊಡಲು ಕೇಳಿಕೊಳ್ಳಲಾಯಿತು.

ಇಂಥದೊಂದು ಬೃಹತ್ ಕಾರ್ಯವನ್ನು ಕೈಗೊಂಡಾಗ ಕೆಲವು ಮಾರ್ಗದರ್ಶಿ ಸೂತ್ರಗಳನ್ನು ಅನುಸರಿಸುವುದು ಅನಿವಾರ್ಯವಾಗುತ್ತದೆ. ಅನ್ಯ ಮತ-ಪಂಥಗಳ ಟೀಕೆಗಳು ಬಂದಿದ್ದರೆ ಅಂಥ ಹಾಡುಗಳನ್ನು ಕೈಬಿಡಬೇಕು. ಒಂದೇ ಹಾಡು ಇಬ್ಬರು ದಾಸರ ಅಂಕಿತದಲ್ಲಿ ಪ್ರಚಲಿತದಲ್ಲಿದ್ದರೆ, ಎರಡೂ ಕಡೆಗೆ ಅವುಗಳನ್ನು ಕೊಟ್ಟು, ಕೆಳಗೆ 'ಈ ಕೀರ್ತನೆ . . . . ದಾಸರ ಅಂಕಿತದಲ್ಲೂ ಇದೆ' ಎಂದೂ ಸೂಚಿಸಬೇಕು. ದ್ವೈತ ಸಂಪ್ರದಾಯದ ಕೀರ್ತನೆಗಳನ್ನು ಪ್ರಕಟಿಸುವಾಗ ದೇವ-ಗುರು ತಾರತಮ್ಯವನ್ನು ಪಾಲಿಸಬೇಕು ; ಉಳಿದೆಡೆ ಗಣೇಶ ಪ್ರಾರ್ಥನೆ, ಭಗವಂತನ ನಾಮಸಂಕೀರ್ತನೆ, ಆತ್ಮನಿವೇದನೆ, ಲೋಕನೀತಿ, ತಾತ್ವಿಕ, ಕಥನಾತ್ಮಕ, ಸಂಪ್ರದಾಯ ಹಾಗೂ ವಿಶೇಷ ಹಾಡುಗಳೆಂದು ಮುಂತಾಗಿ ವಿಂಗಡಿಸಿಕೊಡಬೇಕು- ಎಂಬುದಾಗಿ ನಿರ್ಧರಿಸಲಾಯಿತು.

---

*ಇವುಗಳಲ್ಲಿ ಕೆಲವಕ್ಕೆ ಎರಡು ಮೂರು ಭಾಗಗಳಿವೆ.

ಪ್ರತಿಯೊಂದು ಸಂಪುಟದ ಪ್ರಾರಂಭದಲ್ಲಿ ಹಾಡುಗಳ ಪರಿವಿಡಿಯನ್ನು ಕೊಟ್ಟು ಪ್ರಸ್ತಾವನೆಯಲ್ಲಿ ಆಯಾ ದಾಸರ ಸಂಕ್ಷಿಪ್ತ ಜೀವನ ಚರಿತ್ರೆ, ಕೃತಿಗಳ ಸಮೀಕ್ಷೆ, ಶೈಲಿ ಇತ್ಯಾದಿಗಳನ್ನು ವಿವರಿಸಿ, ಗ್ರಂಥಸಂಪಾದನೆಯ ಆಕರಗಳನ್ನೂ ಕೊಡಲು ಪ್ರಯತ್ನಿಸಲಾಗಿದೆ. ಕೊನೆಯಲ್ಲಿ ಬರುವ ಅನುಬಂಧಗಳಲ್ಲಿ ಕಠಿಣ ಶಬ್ದಗಳ ಅರ್ಥ, ಟಿಪ್ಪಣಿ ಮತ್ತು ವಿಶಿಷ್ಟ ಅಂಕಿತನಾಮಗಳ ಸೂಚಿ ಹಾಗೂ ಹಾಡುಗಳ ಅಕಾರಾದಿಯನ್ನು ಕೊಡಲಾಗಿದೆ.

ಈ ಸಂಪುಟಗಳು ಜನಪ್ರಿಯ ಆವೃತ್ತಿಗಳಾಗಿರುವುದರಿಂದ ಲಭ್ಯವಿರುವ ಪಾಠಾಂತರಗಳಲ್ಲಿ ಯೋಗ್ಯವಾದುದನ್ನು ಸ್ವೀಕರಿಸಿದೆ. ಅನ್ಯ ಪಾಠಗಳನ್ನು ಅಡಿಯಲ್ಲಿ ನಮೂದಿಸಿಲ್ಲ. ಆದರೂ ಇವು ವಿದ್ವಜ್ಜನಪ್ರಿಯ ಆವೃತ್ತಿಗಳೂ ಆಗಬೇಕೆಂಬ ರೀತಿಯಲ್ಲಿ ಈ ಸಂಪುಟಗಳನ್ನು ರೂಪಿಸಲು ಪ್ರಯತ್ನಿಸಿದ್ದೇವೆ.

## ಕೃತಜ್ಞತೆಗಳು

ಕಳೆದ ನೂರೈವತ್ತು ವರ್ಷಗಳಿಂದ ಪಾಶ್ಚಾತ್ಯ ಮಿಶನರಿಗಳಿಂದ ಹಿಡಿದು ಈ ಮೊದಲು ಉಲ್ಲೇಖಿಸಿದ ನಾಡಿನ ಅನೇಕ ವಿದ್ವಜ್ಜನರು, ಸಂಘ ಸಂಸ್ಥೆಗಳು, ವಿಶ್ವವಿದ್ಯಾಲಯಗಳು ದಾಸಸಾಹಿತ್ಯ ಕುರಿತು ನಿರಂತರ ದುಡಿದು ವಿಪುಲ ಸಾಮಗ್ರಿಯನ್ನು ಪ್ರಕಟಿಸಿದ್ದಾರೆ. ಈ ಎಲ್ಲ ವ್ಯಕ್ತಿಗಳಿಗೂ, ಸಂಘ ಸಂಸ್ಥೆಗಳಿಗೂ ನಮ್ಮ ಕೃತಜ್ಞತಾಪೂರ್ವಕ ವಂದನೆಗಳು ಸಲ್ಲುತ್ತವೆ.

ಈ ಯೋಜನೆ ಅಸ್ತಿತ್ವಕ್ಕೆ ಬಂದುದೂ ಒಂದು ವಿಶಿಷ್ಟ ಸಂದರ್ಭದಲ್ಲಿ ಎಂಬುದನ್ನು ಇಲ್ಲಿ ನಮೂದಿಸಬೇಕು. ಕರ್ನಾಟಕ ಸರ್ಕಾರವು ನಾಡಿನ ಖ್ಯಾತ ಸಂಶೋಧಕರಾದ ಡಾ. ಎಂ. ಎಂ. ಕಲಬುರ್ಗಿ ಅವರ ಪ್ರಧಾನ ಸಂಪಾದಕತ್ವದಲ್ಲಿ ಸಮಗ್ರ ವಚನಸಾಹಿತ್ಯವನ್ನು ಪ್ರಕಟಿಸಿತಷ್ಟೇ. ಅವರೇ 'ದಾಸಸಾಹಿತ್ಯ' ಯೋಜನೆಯನ್ನು ರೂಪಿಸಿ ಶ್ರೀ ಪೇಜಾವರ ಮಠಾಧೀಶರಾದ ಶ್ರೀ ವಿಶ್ವೇಶತೀರ್ಥರ ಮೂಲಕ ಈ ಯೋಜನೆಯತ್ತ ಸರ್ಕಾರದ ಗಮನ ಸೆಳೆದರು. ಇದನ್ನು ಅರಿತ ಅಂದಿನ ಮುಖ್ಯಮಂತ್ರಿಗಳೂ, ಅನಂತರ ಭಾರತದ ಪ್ರಧಾನಮಂತ್ರಿಗಳೂ ಆಗಿದ್ದ ಸನ್ಮಾನ್ಯ ಶ್ರೀ ಹೆಚ್. ಡಿ. ದೇವೇಗೌಡರು ಮುಧೋಳದಲ್ಲಿ (೧೯೯೫) ಜರುಗಿದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ, "ಸರ್ಕಾರವು ಸಮಗ್ರ

ದಾಸಸಾಹಿತ್ಯವನ್ನು ಪ್ರಕಟಿಸಲು ಒಪ್ಪಿಕೊಂಡಿದೆ" ಎಂದು ಘೋಷಿಸಿದರು. ಅದರಂತೆ, ಸರ್ಕಾರವು ಒಂಬತ್ತು ಜನರ ಸಂಪಾದಕ ಮಂಡಳಿಯನ್ನು ರಚಿಸಿತು. ಅದರಲ್ಲಿ ಡಾ. ಶ್ರೀನಿವಾಸ ಹಾವನೂರ, ಡಾ. ಟಿ.ಎನ್. ನಾಗರತ್ನ ಮತ್ತು ಪ್ರೊ. ವಸಂತ ಕುಷ್ಟಗಿ ಅವರನ್ನು ಸಮಿತಿಯ ಕಾರ್ಯನಿರ್ವಾಹಕ ಸಂಪಾದಕರೆಂದು ನಿಯಮಿಸಿತು. ಜೊತೆಗೆ ಈ ಮೊದಲು ಇಂಥ ಕಾರ್ಯವನ್ನು ಯಶಸ್ವಿಯಾಗಿ ಮಾಡಿದ ಅನುಭವಿ ಡಾ. ಎಂ. ಎಂ. ಕಲಬುರ್ಗಿ, ದಾಸಸಾಹಿತ್ಯದಲ್ಲಿ ನುರಿತ ವಿದ್ವಾಂಸರುಗಳಾದ ಪ್ರೊ. ಎಂ. ರಾಜಗೋಪಾಲಾಚಾರ್ಯ, ಡಾ. ಕೃಷ್ಣ ಕೊಲ್ಹಾರ ಕುಲಕರ್ಣಿ, ಡಾ. ಮಂದಾಕಿನಿ, ಪ್ರೊ. ಸುಧಾಕರ ಮತ್ತು ಡಾ. ಬಸವರಾಜ ಸಬರದ ಅವರನ್ನು ಸಂಪಾದಕ ಮಂಡಳಿಯ ಸದಸ್ಯರನ್ನಾಗಿ ನಿಯಮಿಸಿತು. ಅವರುಗಳ ನಿರಂತರ ಪರಿಶ್ರಮದ ಫಲವೇ ಈ ಸಮಗ್ರ ದಾಸಸಾಹಿತ್ಯದ ಪ್ರಕಟಣಾ ಕಾರ್ಯ. ಈ ಪ್ರಕಟಣಾ ಕಾರ್ಯದಲ್ಲಿ ಅವರುಗಳೊಂದಿಗೆ ೩೫ ಸಂಪುಟಗಳನ್ನು ಸಿದ್ಧಪಡಿಸುವಲ್ಲಿ ಸರ್ವಶ್ರೀ ಡಾ. ಅರಳುಮಲ್ಲಿಗೆ ಪಾರ್ಥಸಾರಥಿ, ಡಾ. ಡಿ. ಆರ್. ಪಾಂಡುರಂಗ, ಡಾ. ಅನಂತಪದ್ಮನಾಭರಾವ್, ಪ್ರೊ. ಬಿ. ಆರ್. ಕುಲಕರ್ಣಿ, ಡಾ. ಕೆ. ಜಿ. ವೆಂಕಟೇಶ್, ಪ್ರೊ. ಜಿ. ಅಶ್ವತ್ಥನಾರಾಯಣ, ಡಾ. ಕೆ. ಗೋಕುಲನಾಥ, ಡಾ. ಕೆ. ಎಂ. ಕೃಷ್ಣರಾವ್, ಶ್ರೀ ಹಣಮಂತ ತಾಸಗಾಂವಕರ್, ಪ್ರೊ. ನಾ. ಗೀತಾಚಾರ್ಯ, ಡಾ. ಸ್ವಾಮಿರಾವ್ ಕುಲಕರ್ಣಿ, ಶ್ರೀ ಹನುಮನಗೌಡ, ಶ್ರೀ ಎ. ಎನ್. ಅನಂತಸ್ವಾಮಿರಾವ್, ಡಾ. ನಾರಾಯಣಾಚಾರ್ಯ ಧೂಳಖೇಡ, ಶ್ರೀ ಶಾಶ್ವತಸ್ವಾಮಿ ಮುಕ್ಕುಂದಿಮಠ, ಶ್ರೀ ಕೆ. ಎಸ್. ವೆಂಕಟೇಶ್ ಮತ್ತು ಶ್ರೀ ಎಚ್. ಎಸ್. ಶ್ರೀನಿವಾಸಮೂರ್ತಿ ಅವರುಗಳು ಹಾಗೂ ಶ್ರೀಮತಿಯರಾದ ನಳಿನಿ ವೆಂಕಟೇಶ್, ಮೀನಾರಾವ್, ಲೀಲಾವತಿ ಎಸ್. ರಾವ್, ಡಾ. ಜಯಲಕ್ಷ್ಮಿ ಮಂಗಳಮೂರ್ತಿ, ಡಾ. ಅಕ್ಕಮಹಾದೇವಿ, ಶೀಲಾ ದಾಸ್, ಡಾ. ರಮಾ ಕಲ್ಲೂರಕರ, ಡಾ. ಸೀತಾ ಗುಡೂರ ಕುಲಕರ್ಣಿ, ಹೆಚ್. ಎಸ್. ಪದ್ಮಾ ಮೂರ್ತಿ, ಮತ್ತು ಡಾ. ರುಕ್ಮಿಣಿ ಗಿರಿಮಾಜಿ ಅವರುಗಳು ತುಂಬ ಶ್ರಮವಹಿಸಿ ಸಂಪುಟಗಳನ್ನು ಸಿದ್ಧಪಡಿಸಿಕೊಟ್ಟಿದ್ದಾರೆ. ಅವರುಗಳಿಗೆ ಸಂಪಾದಕ ಮಂಡಳಿಯು ಕೃತಜ್ಞತೆಗಳನ್ನು ಸಲ್ಲಿಸುತ್ತದೆ. ಈ ಮಧ್ಯೆ ಸಂಪಾದಕ ಸಮಿತಿಯ ಸದಸ್ಯರಲ್ಲೊಬ್ಬರಾದ ಪ್ರೊ. ಎಂ. ರಾಜಗೋಪಾಲಾಚಾರ್ಯರು ಮತ್ತು ಡಾ. ಮಂದಾಕಿನಿ ಹಾಗೂ ಸಂಪುಟ ಸಂಪಾದಕರಲ್ಲಿ ಒಬ್ಬರಾದ ಶ್ರೀ ಎಚ್. ಎಸ್. ಶ್ರೀನಿವಾಸಮೂರ್ತಿ, ಡಾ. ಕೆ.ಎಂ. ಕೃಷ್ಣರಾವ್, ಶ್ರೀಮತಿ ಪದ್ಮಾ ಮೂರ್ತಿ ಹಾಗೂ ಶ್ರೀ ಹನುಮನಗೌಡ ಮಾನ್ವಿ ಅವರು ನಮ್ಮನ್ನು ಅಗಲಿದ್ದು ದುಃಖದ ವಿಷಯವಾಗಿದೆ.

ಆಯಾ ಕಾಲದಲ್ಲಿ ಈ ಯೋಜನೆಗೆ ಸಹಕರಿಸಿದ ಹಾಗೂ ಈ ಯೋಜನೆಯ ಪರಿಕಲ್ಪನೆ ಯಶಸ್ವಿಯಾಗಿ ಕಾರ್ಯಾನುಷ್ಠಾನಕ್ಕೆ ಬರುವ ದಿಸೆಯಲ್ಲಿ ಸಹಕರಿಸಿದ ಈ ಹಿಂದಿನ ಸರ್ಕಾರದ ಮಾನ್ಯ ಮುಖ್ಯಮಂತ್ರಿಗಳಿಗೆ ಹಾಗೂ ವಿಶೇಷವಾಗಿ ಇಂದಿನ ಮುಖ್ಯಮಂತ್ರಿಗಳಾದ ಸನ್ಮಾನ್ಯ ಶ್ರೀ ಎಸ್. ಎಂ. ಕೃಷ್ಣ ಅವರಿಗೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಚಿವೆ ಶ್ರೀಮತಿ ರಾಣಿ ಸತೀಶ್ ಅವರಿಗೆ, ಇಲಾಖೆಯ ಹಿಂದಿನ ಕಾರ್ಯದರ್ಶಿಗಳಾದ ಶ್ರೀ ಚಂದ್ರಹಾಸ ಗುಪ್ತ ಮತ್ತು ಈಗಿನ ಕಾರ್ಯದರ್ಶಿಗಳಾದ ಶ್ರೀ ಸಿ. ಎಸ್. ಕೇದಾರ್ ಅವರಿಗೆ ನಮ್ಮ ನಮನಗಳು ಸಲ್ಲುತ್ತವೆ. ಈ ಕಾರ್ಯದಲ್ಲಿ ಈ ಯೋಜನೆಗೆ ನೆರವಾದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಹಿಂದಿನ ನಿರ್ದೇಶಕರುಗಳು ಹಾಗೂ ಈಗಿನ ನಿರ್ದೇಶಕರಾದ ಶ್ರೀ ವೈ. ಕೆ. ಮುದ್ದುಕೃಷ್ಣ, ಜಂಟಿ ನಿರ್ದೇಶಕರಾದ ಶ್ರೀ ಕಾ. ತ. ಚಿಕ್ಕಣ್ಣ, ಸಹಾಯಕ ನಿರ್ದೇಶಕರಾದ ಶ್ರೀಮತಿ ವೈ.ಎಸ್. ವಿಜಯಲಕ್ಷ್ಮಿ ಮತ್ತು ಡಾ. ಮಂಜುಳಾ ಅವರಿಗೆ ನಮ್ಮ ವಂದನೆಗಳು ಸಲ್ಲುತ್ತವೆ. ಈ ಕಾರ್ಯದಲ್ಲಿ ನೆರವಾದ ಎಂ. ಎಸ್. ಐ. ಎಲ್. ಸಂಸ್ಥೆಯ ಅಧಿಕಾರಿ ಹಾಗೂ ಸಿಬ್ಬಂದಿವರ್ಗಕ್ಕೆ, ವಿಶೇಷವಾಗಿ ಶ್ರೀ ಎಂ. ರವಿಶಂಕರ್, ವಿಶೇಷಾಧಿಕಾರಿ, ಅವರಿಗೆ ನಮ್ಮ ವಂದನೆಗಳು ಸಲ್ಲುತ್ತವೆ.

ಇದು ಒಂದು ದೊಡ್ಡ ಯೋಜನೆ. ಇದರ ಸಂಪಾದನೆಯ ಸಮಸ್ಯೆಗಳು ದೊಡ್ಡವು. ಪಾಠಾಂತರ, ರೂಪಾಂತರ, ಪ್ರಕ್ಷಿಪ್ತತೆ ಇತ್ಯಾದಿಗಳ ಗೊಂದಲಕ್ಕೆ ಗುರಿಯಾಗುತ್ತ ಬಂದ ವ್ಯಾಪಕ ಪ್ರಮಾಣದ ಈ ದಾಸಸಾಹಿತ್ಯವನ್ನು ಒಂದೆಡೆ ಸಂಗ್ರಹಿಸುವುದು, ಪುನರುಕ್ತಿಗಳನ್ನು ಗುರುತಿಸುವುದು, ಅಂಕಿತ ಪಲ್ಲಟಗಳನ್ನು ಸರಿಪಡಿಸುವುದು, ಪ್ರಕ್ಷಿಪ್ತಗಳನ್ನು ದೂರೀಕರಿಸುವುದು, ಕೊನೆಯದಾಗಿ ಕೀರ್ತನೆಗಳನ್ನು ಶುದ್ಧೀಕರಿಸುವುದು ಎಂಥವರನ್ನೂ ಧೈರ್ಯಗೆಡಿಸುವ ಕೆಲಸ. ಹೀಗಿದ್ದೂ ದಾಸಸಾಹಿತ್ಯದ ಮೇಲಿನ ಗೌರವ ಪ್ರೀತಿಗಳು ನಮ್ಮಿಂದ ಈ ಕೆಲಸ ಮಾಡಿಸಿವೆ. ನಮ್ಮ ಶಕ್ತಿಗೆ ಮೀರಿ ಉಳಿದಿರಬಹುದಾದ ದೋಷಗಳನ್ನು ಮನ್ನಿಸಬೇಕೆಂದು ಕೋರುತ್ತೇವೆ. ಈ ಮೂವತ್ತೈದು ಸಂಪುಟಗಳನ್ನು ಸಹೃದಯ ಲೋಕಕ್ಕೆ ಅರ್ಪಿಸುತ್ತಿದ್ದೇವೆ. ಸಮಗ್ರ ದಾಸಸಾಹಿತ್ಯವು ಸುಲಭ ಬೆಲೆಯಲ್ಲಿ ಕನ್ನಡಿಗರ ಮನೆ-ಮನಗಳಲ್ಲಿ ಬೆಳಗಲೆಂದು ಹಾರೈಸುತ್ತೇವೆ.

ಸಂಪಾದಕ ಮಂಡಳಿ

# ಪರಿವಿಡಿ

# ಪ್ರಸ್ತಾವನೆ

## ಉರಗಾದ್ರಿವಾಸ ವಿಠಲದಾಸರು (೧೮೭೧-೧೯೬೪)

ಲೋಕದಲ್ಲಿ ಮಹಾತ್ಮರ ಜೀವನಕ್ರಮ, ನಡೆನುಡಿಗಳು ಹಾಗೂ ಆಚಾರ-ವ್ಯವಹಾರಗಳು ಪಾಮರರಾದ ಇತರ ಜನರ ಮನಸ್ಸು ಹಾಗೂ ಜೀವನದ ಮೇಲೆ ಮಹತ್ಪರಿಣಾಮಗಳನ್ನುಂಟುಮಾಡುವುದು. ಅಂತಹ ಏಕಾಂತಭಕ್ತರು 'ಸತ್ಯಸಂಕಲ್ಪನು ಏನಿತ್ತುದೇ ಪರಮ ಪುರುಷಾರ್ಥ' ವೆಂದರಿತು ಯದೃಚ್ಛಾಲಾಭಸಂತುಷ್ಟರಾಗಿ ಲೋಕದ ವೈಭವ ಕೀರ್ತಿಗಳನ್ನು ಸ್ವಪ್ನದಲ್ಲೂ ಬಯಸದೆ ಏಕಾಂತಭಕ್ತರಾಗಿ ಗುಪ್ತಸಾಧನವನ್ನೇ ತಮ್ಮಬಾಳಿನ ಏಕೈಕ ಗುರಿಯಾಗಿಟ್ಟುಕೊಂಡಿರುತ್ತಾರೆ. ಕೇವಲ ಜ್ಞಾನ ಭಕ್ತಿ, ವೈರಾಗ್ಯಗಳನ್ನೇ ದೈವೀ ಸಂಪತ್ತೆಂದು ಭಾವಿಸಿ ಎಲೆಮರೆ ಕಾಯಿಯಂತೆ ಶ್ರೇಷ್ಟಮಟ್ಟದ ಸಾತ್ವಿಕ ಹಾಗೂ ನಿಷ್ಕಾಮ ಜೀವನವನ್ನು ನಡೆಸುತ್ತಾ, ಕೇವಲ ಜ್ಞಾನಾರ್ಥಿಗಳಾಗಿ ತಮ್ಮಲ್ಲಿ ಬರುವ ಸತ್ಪಾತ್ರರ ಆತ್ಮೋಧ್ಧಾರದಲ್ಲಿ ನಿರತರಾದವರು ಇವರು. ಇಂಥಹ ಏಕಾಂತಭಕ್ತರಾದ ಹರಿದಾಸರ ಶ್ರೇಣಿಗೆ ಸೇರಿದವರಲ್ಲಿ ಶ್ರೀ ಉರಗಾದ್ರಿವಾಸ ವಿಠಲಾಂಕಿತ ದಾಸವರ್ಯರು ಒಬ್ಬರು ಎಂದರೆ ತಪ್ಪಾಗಲಾರದು.

ದಾಸವರ್ಯರ ಜನ್ಮನಾಮ ಶ್ರೀ ಎಂ. ಶ್ರೀನಿವಾಸರಾಯರು. ಮಳವಳ್ಳಿ ಮನೆತನಕ್ಕೆ ಸೇರಿದವರು. ಮಳವಳ್ಳಿ ಪುರುಷೋತ್ತಮರಾಯರ ಏಕಮಾತ್ರ ಪುತ್ರರು ಶ್ರೀ ಕೃಷ್ಣರಾಯರು. ಇವರ ಮಕ್ಕಳೇ ಎಂ. ಸ್ವಾಮಿರಾಯರು. ಇವರ ಧರ್ಮಪತ್ನಿ ಶ್ರೀಮತಿ ರಾಧಾಬಾಯಿಯವರು. ಈ ದಂಪತಿಗಳ ಮೂರನೇ ಮಗನಾಗಿ ಶ್ರೀನಿವಾಸರಾಯರು ಜನಿಸಿದ್ದು ಯುವನಾಮ ಸಂವತ್ಸರದ ಮಾಘ ಶುದ್ಧ ಏಕಾದಶೀ ಸ್ಥಿರವಾರದಂದು ಅಂದರೆ ಕ್ರಿ.ಶ.೧೮೭೧ ನೇ ಇಸವಿ ಫೆಬ್ರವರಿ ತಿಂಗಳ ೬ನೇ ತೇದಿ. ಇವರ ತಂದೆ ಶ್ರೀ ಸ್ವಾಮಿರಾಯರು ಎ.ವಿ. ಸ್ಕೂಲಿನಲ್ಲಿ ಉಪಾಧ್ಯಾಯರಾಗಿದ್ದರು.

ಶ್ರೀ ಸ್ವಾಮಿರಾಯರಿಗೆ, ಶ್ರೀ ರಾಘವೇಂದ್ರರಾಯರು, ಶ್ರೀರಾಮರಾಯರು ಶ್ರೀ ಶ್ರೀನಿವಾಸರಾಯರು, ಮತ್ತು ಶ್ರೀಧರ ರಾಯರು ಎಂಬ ನಾಲ್ಕು ಜನ ಪುತ್ರರು, ಮತ್ತು ಶ್ರೀಮತಿ ಕೃಷ್ಣಮ್ಮ, ಜೀವುಬಾಯಿ ಎಂಬ ಇಬ್ಬರು ಪುತ್ರಿಯರು ಜನಿಸಿದರು. ಶ್ರೀನಿವಾಸರಾಯರ ಜನ್ಮಸ್ಥಳ ಶಿವಮೊಗ್ಗ ಜಿಲ್ಲೆಯ ಹೊಳೆಹೊನ್ನೂರು. ವರಹಜೆಯತೀರದಲ್ಲಿನ ಈ ಕ್ಷೇತ್ರ ಪರಮ ಪವಿತ್ರವಾದದ್ದು ಮತ್ತು ಪುಣ್ಯಕ್ಷೇತ್ರ. ಶ್ರೀಮದುತ್ತರಾದಿಮಠದ ಪೀಳಿಗೆಯಲ್ಲಿ ವಿರಾಜಮಾನರಾಗಿದ್ದ ಶ್ರೀ ಸತ್ಯಧರ್ಮತೀರ್ಥರ ವೃಂದಾವನವು ಹೊಳೆಹೊನ್ನೂರಿನಲ್ಲಿದೆ. ಇಂಥಹ ಪುಣ್ಯಕ್ಷೇತ್ರದ ಪರಿಸರದಲ್ಲಿ ಜನ್ಮಪಡೆದ ಈ ಮಹನೀಯರು ತಮ್ಮ ಬಾಳಿನುದ್ದಕ್ಕೂ ಸತ್ಸಾಧನೆಯ ಮಾರ್ಗದಲ್ಲಿ ನಡೆದು ಜೀವನ ಸಾರ್ಥಕ್ಯವನ್ನು ಪಡೆದರು. ಇವರ ಅಂಗಸೌಷ್ಠವ ಮತ್ತು ಕಾರ್ಯಚಟುವಟಿಕೆಗಳು ಎಲ್ಲರ ಮನಸ್ಸನ್ನು ಸೂರೆಗೊಂಡವು. ಒಂಭತ್ತು ವರುಷಗಳವರೆಗೆ ವಿಧ್ಯಾಭ್ಯಾಸ ಪ್ರಾರಂಭವಾಗಲಿಲ್ಲ. ಮಗುವಿನ ಮೇಲಿನ ಅಪಾರ ಪ್ರೇಮದಿಂದಾಗಿ ಶಾಲೆಗೆ ಹಾಕದೆ, ಹತ್ತನೇ ವಯಸ್ಸಿನಲ್ಲಿ ವಿದ್ಯಾಭ್ಯಾಸ ಪ್ರಾರಂಭ ಮಾಡಿದರು. ಕುಟುಂಬದಲ್ಲಿ ಬಂದೊದಗುತ್ತಿದ್ದ ತೊಂದರೆಗಳಿಂದಾಗಿ ಆಗಾಗ್ಗೆ ವಿದ್ಯಾಭ್ಯಾಸಕ್ಕೆ ತೊಂದರೆಯುಂಟಾಗುತ್ತಿತ್ತು. ಈ ಮಧ್ಯೆ ಕೇವಲ ೧೪ವರುಷದ ಬಾಲಕನಿದ್ದಾನಲೇ ತಂದೆಯವರು ಹಾಸಿಗೆಹಿಡಿದು ತಮ್ಮ ಅಸುವನ್ನು ನೀಗಿದರು. ಎಳೆವಯಸ್ಸಿನಲ್ಲೇ ಕುಟುಂಬದ ಆರ್ಥಿಕ ಪರಿಸ್ಥಿತಿಗಳು ಇವರ ಮನಸ್ಸಿನಮೇಲೆ ಮಹತ್ಪರಿಣಾಮವನ್ನುಂಟು ಮಾಡಿದವು. ಕೆಲವು ದಿನಗಳ ನಂತರ ಮೈಸೂರಿಗೆ ಬಂದು ಅಲ್ಲಿ ಲೋಯರ್ ಸೆಕೆಂಡರಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ನಾರ್ಮಲ್ ಸ್ಕೂಲಿನಲ್ಲಿ ಹೆಚ್ಚಿನ ತರಬೇತಿ ಪಡೆದರು. ಕೆಲವೇ ದಿನಗಳಲ್ಲಿ ಹೊಸನಗರ ತಾಲೂಕಿನ ಕಳೂರು ಕಟ್ಟೆ ಎಂಬ ಸ್ಥಳದಲ್ಲಿ ಪ್ರಾಥಮಿಕ ಶಾಲೆಯಲ್ಲಿ ಮಾಹಿಯಾನ ಏಳು ರೂಪಾಯಿ ಸಂಬಳದ ಮೇಲೆ ಅಧ್ಯಾಪಕ ವೃತ್ತಿ ದೊರೆಯಿತು. ನಂತರ ಅಪ್ಪರ್ ಸೆಕೆಂಡರಿ ವಿದ್ಯಾಭ್ಯಾಸಕ್ಕಾಗಿ ಆರಿಸಲ್ಪಟ್ಟು ಮೈಸೂರಿಗೆ ಹೋಗಿ ಅಲ್ಲಿ ಮುಖ್ಯೋಪಾಧ್ಯಾಯರಾಗಿದ್ದ ಶ್ರೀ ನಾರಾಯಣಯ್ಯಂಗಾರ್ ಎಂಬ ಶ್ರೇಷ್ಠ ಮಟ್ಟದ ಅಧ್ಯಾಪಕರ ನೇತೃತ್ವದಲ್ಲಿ ಉತ್ತಮ ಶಿಕ್ಷಣ ಹೊಂದುವ ಅವಕಾಶದೊರೆಯಿತು. ಅಲ್ಲಿಂದ ಮದ್ರಾಸ್‌ಪ್ರಾಂತ್ಯದ ಅಪ್ಪರ್‌ಸೆಕೆಂಡರಿ ಪರೀಕ್ಷಾಮಂಡಲಿಯವರಿಂದ ನಿಯಮಿತವಾದ ಡ್ರಾಯಿಂಗ್ ವಿಷಯದ ಪರೀಕ್ಷೆಯಲ್ಲಿ ಉತ್ತಮ ಶ್ರೇಣಿಯಲ್ಲಿ

ತೇರ್ಗಡೆ ಹೊಂದಿದರು. ನಂತರ ಕಳೂರು ಕಟ್ಟೆಗೆ ಹಿಂತಿರುಗಿ ೧೫ರೂ. ಸಂಬಳದ ಮೇಲೆ ಸರ್ಕಾರಿ ಪ್ರಾಥಮಿಕ ಶಾಲೆಯ ಮುಖ್ಯೋಪಾಧ್ಯಾಯರಾಗಿ ನೇಮಿತರಾದರು. ಅಲ್ಲಿ ಅಡಿಕೆ ಸುಂಕದ ಕಟ್ಟೆ ಮಣೇಗಾರರಾಗಿದ್ದ ಸೂರಪ್ಪ ಎಂಬ ಗೃಹಸ್ಥರ ಪರಿಚಯವಾಯಿತು. ಅವರಿಂದ ವೇದಾಂತದ ವಿಷಯಗಳು ಸ್ವಲ್ಪ ಮಟ್ಟಿಗೆ ತಿಳಿದರೂ ಅಷ್ಟಾಗಿ ಮನಸ್ಸಿಗೆ ಹಿಡಿಸಲಿಲ್ಲ. ಶ್ರೀಕೃಷ್ಣರಾಯರ ಸಹವಾಸದಿಂದಾಗಿ ಶ್ರೀ ಮಧ್ವಾಚಾರ್ಯರಿಂದ ಪ್ರಣೀತವಾದ ತತ್ವಗಳ ಕಡೆ ಮನಸ್ಸು ಹರಿದು ಚಿತ್ತಶಾಂತಿ ದೊರೆಯಿತು. ತತ್ವ ವಿಷಯಗಳ ಬಗ್ಗೆ ಹೆಚ್ಚಿನ ಆಸಕ್ತಿಮೂಡಿ ಅಧ್ಯಯನ ಮಾಡಿ ಎಲ್ಲರ ಪ್ರೀತಿಗೆ ಪಾತ್ರರಾದರು.

ಶ್ರೀನಿವಾಸರಾಯರ ಅಕ್ಕ ಶ್ರೀಮತಿ ಜೀವುಬಾಯಿಯವರು. ಶ್ರೀ ಸ್ವಾಮಿರಾಯರ ಎರಡನೇಮಗಳು. ಅವರ ಪತಿ ಶ್ರೀಧನ್ವಂತ್ರಿ ಹನುಮಂತರಾಯರು ಶಾಲಾಧ್ಯಾಪಕರಾಗಿದ್ದರು. ಈ ದಂಪತಿಗಳಿಗೆ ಮೂವರು ಹೆಣ್ಣುಮಕ್ಕಳು ತುಂಗಾಬಾಯಿ, ಗಂಗಾಬಾಯಿ ಮತ್ತು ಯಮುನಾಬಾಯಿ. ಅಕ್ಕನ ಮಗಳಾದ ತುಂಗಾಬಾಯಿಯೊಂದಿಗೆ ಶ್ರೀನಿವಾಸರಾಯರ ವಿವಾಹವಾಯಿತು. ಇವರಿಗೆ ಗಂಡುಸಂತಾನವಾಗಲಿಲ್ಲ. ಪದ್ಮಾವತಿಬಾಯಿ, ಕಮಲಾಬಾಯಿ ಮತ್ತು ವನಜಾಬಾಯಿ ಎಂಬ ಮೂರು ಮಂದಿ ಹೆಣ್ಣು ಮಕ್ಕಳು ಜನಿಸಿದರು.

ಅಧ್ಯಾಪಕ ವೃತ್ತಿಯಿಂದ ಬರುವ ಅಲ್ಪ ವರಮಾನದಲ್ಲೇ ತೃಪ್ತರಾಗಿ ಇತರರನ್ನು ಯಾವ ಸಂಧರ್ಭದಲ್ಲೂ ಯಾಚಿಸದೆ ಕೇವಲ ವೈರಾಗ್ಯಭಾವದಿಂದ 'ಹೆಂಡಿರು ಮಕ್ಕಳು ನಿನ್ನ ತೊಂಡರೆಂಬೊರೋ'ಎಂಬ ಉತ್ತಮ ಅನುಸಂಧಾನದಿಂದ ಸಂಸಾರ ನೌಕೆಯನ್ನು ನಡೆಸುತ್ತಿದ್ದರು. ಅವರು ಕಳೂರುಕಟ್ಟೆಯಲ್ಲಿದ್ದಾಗಲೇ ಅವರ ಅಜ್ಜಿ ದೈವಾಧೀನರಾದರು. ಬಾಲ್ಯದಿಂದಲು ಕಾವ್ಯಾಭ್ಯಾಸ ಗ್ರಂಥಾವಲೋಕನದಿಂದ ವಿಷಯಸಂಪತ್ತು ಅವರಲ್ಲಿ ವಿಶೇಷವಾಗಿ ಗರ್ಭೀಕೃತವಾಗಿತ್ತು. ತಾವು ಆಳವಾಗಿ ಅಧ್ಯಯನ ಮಾಡಿದ ವಿಷಯಗಳನ್ನು ತಮ್ಮ ನಿತ್ಯಜೀವನದ ಒರೆಗಲ್ಲಿಗೆ ತಿಕ್ಕಿ ಅನುಭವ ಜನ್ಯವಾದ ಜ್ಞಾನವನ್ನು ಪಡೆದು ತಮ್ಮ ನಡೆಯಲ್ಲಿ ಅನುಷ್ಠಾನಕ್ಕೆ ತಂದರು. ಆ ಅನುಭವ ಸಿದ್ಧವಾದ ಜ್ಞಾನವು ಕವಿತ್ವದ ಮೂಲಕ ಹೊರಹೊಮ್ಮಿತು. ಪ್ರಾರಂಭದಲ್ಲಿ

ಕೆಲವು ನಾಟಕಗಳನ್ನು ಬರೆದರು. ಅವರ ಅಂತಃಸ್ಫೂರ್ತಿಯಿಂದ ಹರಿದು ಬಂದ 'ಶಾಕುಂತಲಾ' ಮತ್ತು ಇತರ ಎರಡು ನಾಟಕಗಳು ರಂಗಸ್ಥಳದಮೇಲೆ ಅಭಿನಯಿಸಲ್ಪಟ್ಟು ಯಶಸ್ವಿಯಾಗಿ ಜನಪ್ರಿಯವಾದುವು.

ನಂತರ ಅವರಿಗೆ ಶಿವಮೊಗ್ಗಾ ಜಿಲ್ಲೆಯ ಶಿಕಾರಿಪುರಕ್ಕೆ ವರ್ಗವಾಯಿತು. ಕನ್ನಡ ಮಾಧ್ಯಮಿಕ ಶಾಲೆಯ ಮುಖ್ಯೋಪಾಧ್ಯಾಯರಾಗಿ ಕೆಲಸಮಾಡುತ್ತಿದ್ದರು. ಮನೆಯಲ್ಲಿ ಒಂದು ಗೋವನ್ನು ಸಾಕಿ ಅದರ ಕ್ಷೀರವನ್ನು ದೇವರಿಗೆ ಅಭಿಷೇಕ ಮಾಡುತ್ತಿದ್ದರು. ಕೆಲವು ಕಾಲಾನಂತರ ಗೋವು ಅಸುನೀಗಿತು. ಖಿನ್ನ ಮನಸ್ಕರಾಗಿ ಇನ್ನೂ ಹೆಚ್ಚು ವೈರಾಗ್ಯ ಉಂಟಾಗಿ ಆಧ್ಯಾತ್ಮವಿಷಯ ಚಿಂತನೆಯಲ್ಲಿ ಮನಸ್ಸು ಸ್ಥಾಯಿಭಾವವನ್ನು ಹೊಂದಿತು. ಹೃದಯಾಂತರಾಳದಿಂದ ಕವಿತಾ ಸಾಮರ್ಥ್ಯವು ಪುನಃ ಪುಟಿದೆದ್ದು ಕೀರ್ತನೆಯ ರೂಪದಲ್ಲಿ ಪ್ರವಹಿಸಲಾರಂಭಿಸಿತು. ಶ್ರೀ ವಿಜಯದಾಸವರ್ಯರಿಂದ ಸ್ವಪ್ನದತ್ತವಾದ 'ಶ್ರೀವೆಂಕಟೇಶ' ಎಂಬ ನಾಮದಿಂದ ತಮ್ಮ ಕುಲದೈವನಾದ ಶ್ರೀನಿವಾಸನ ಪ್ರೀತ್ಯರ್ಥ ಅನೇಕ ಕೀರ್ತನೆಗಳನ್ನು ರಚಿಸಿದರು. ಶಿಕಾರಿಪುರದ ಸುಪ್ರಸಿದ್ಧ ಶ್ರೀ ಪ್ರಾಣದೇವರ (ಹುಚ್ಚೂರಾಯ) ಪೂರ್ಣಕೃಪೆಗೆ ಪಾತ್ರರಾದರು.

ಶ್ರೀನಿವಾಸರಾಯರು ಕವಿತಾರಚನಾಕೌಶಲ್ಯದ ಜೊತೆಗೆ ಆಗಾಗ್ಗೆ ವೀಣೆ-ಪಿಟೀಲು, ತಬಲ, ಹಾರ್ಮೋನಿಯಂ ವಾದ್ಯಗಳನ್ನು ನುಡಿಸುವ ಅಭ್ಯಾಸ ಇಟ್ಟುಕೊಂಡಿದ್ದರು. ಜೀವನದುದ್ದಕ್ಕು ಕಷ್ಟಗಳೇ ಬಂದಾಗ್ಯೂ, ಸಹಿಸಿಕೊಂಡು ಜೀವನವನ್ನು ನಡೆಸುತ್ತಿದ್ದ ಸರಳ ವ್ಯಕ್ತಿಯಾಗಿದ್ದರು. ಶಿಕಾರಿಪುರದಿಂದ ಕೋಲಾರ ಜಿಲ್ಲೆಯ ಬಾಗೇಪಲ್ಲಿಗೆ ವರ್ಗವಾಯಿತು. ಅಲ್ಲಿ ತಮಗೆ ಕರಗತವಾಗಿ ಬಂದಿದ್ದ ಚಿತ್ರಕಲೆಯನ್ನು ರೂಢಿಸಿಕೊಂಡು ತಾತ್ವಿಕ ವಿಷಯಗಳನ್ನು ಪ್ರತಿಬಿಂಬಿಸುವ ಅನೇಕ ಚಿತ್ರಗಳನ್ನು ಬರೆದರು. ದಶಾವತಾರ, ಕೇಶವಾದಿ ಚತುರ್ವಿಂಶತಿ ಭಗವದ್ರೂಪಗಳು-ವಿಶ್ವಾದಿ ಅಷ್ಟಮೂರ್ತಿಗಳು, ಬ್ರಹ್ಮಾಂಡಾಂತರ್ಗತ ಲೋಕಗಳು, ಶ್ರೀ ವಾಯುದೇವರ ಮೂರು ಅವತಾರಗಳು, ವಾಯುದೇವರ ಶರೀರಗತ ಭಗವದ್ರೂಪಗಳು ಇವೇ ಮೊದಲಾದುವುಗಳನ್ನು ಚಿತ್ರಿಸಿದ್ದರು. ಬಾಗೇಪಲ್ಲಿಗೆ ಬಂದಮೇಲೆ ಜನರ

ಸಂಪರ್ಕದಿಂದ ದೂರವಿದ್ದು ಉಪಾಸನೆ-ಅಧ್ಯಯನ ಧ್ಯಾನ-ನಿತ್ಯಕರ್ಮದಲ್ಲಿ ಹೆಚ್ಚುಕಾಲ ನಿರತರಾಗಿರುತ್ತಿದ್ದರು.

ಬಾಗೇಪಲ್ಲಿಯಿಂದ ಬೌರಿಂಗ್ ಪೇಟೆಗೆ ವರ್ಗಾವಣೆಯಾಯಿತು. ಆಗ ಮುಳುಬಾಗಿಲು ಕ್ಷೇತ್ರ ಸಮೀಪವಾಗಿದ್ದ ಕಾರಣ ಅಲ್ಲಿನ ಮಠದ ಪಂಡಿತೋತ್ತಮರಾದ ಶ್ರೀ ತೀರ್ಥಾಚಾರ್ಯರೊಡನೆ ಸಮಾಗಮ, ಸಂಭಾಷಣೆಗಳ ಪ್ರಸಂಗ ದೈವಯೋಗದಿಂದ ದೊರೆಯಿತು. ಅದರಿಂದಾಗಿ ಜ್ಞಾನ ಪ್ರತಿಭೆ ಅಭಿವೃದ್ಧಿ-ಯಾಯಿತು. ಕೆಲಕಾಲದನಂತರ ಅವರಿಗೆ ಬಡ್ತಿ ದೊರೆತು ಚಿತ್ರದುರ್ಗಕ್ಕೆ ವರ್ಗವಾಯಿತು.

ದಾಸವರ್ಯರು ಚಿತ್ರದುರ್ಗದಲ್ಲಿ ಕಳೆದ ಕಾಲ ಚಿರಸ್ಮರಣೀಯ. ವಿದ್ಯಾ ಇಲಾಖೆಯಲ್ಲಿ ಎಲ್ಲರ ಮನ್ನಣೆಗೆ ಪಾತ್ರರಾಗಿ ಶ್ರೇಷ್ಠಮಟ್ಟದ ಅಧ್ಯಾಪಕರೆಂದು ಪ್ರಸಿದ್ಧರಾದರು. ಚಿತ್ರದುರ್ಗದ ಕೋಟೆಪ್ರಾಣದೇವರ ದೇವಸ್ಥಾನದ ಬಳಿ ಬ್ರಾಹ್ಮಣಕೇರಿಯಲ್ಲಿ ಸಣ್ಣದಾದ ಒಂದು ಮನೆಯಲ್ಲಿ ವಾಸವಾಗಿದ್ದರು. ಪ್ರಾಣದೇವರ ಗುಡಿಯಲ್ಲಿ ಹರಿಕಥಾಮೃತಸಾರ ಮತ್ತು ಪುರಾಣ ಪ್ರವಚನಗಳನ್ನು ನಡೆಸುತ್ತ ಆಧ್ಯಾತ್ಮ ಚಿಂತನೆಯಲ್ಲಿ ಕಾಲಕಳೆಯುತ್ತಿದ್ದರು. ೧೨ವರುಷಗಳಕಾಲ ಅಲ್ಲಿ ವಾಸವಾಗಿದ್ದು ಪ್ರಾಣದೇವರಿಗೆ ಕಿರೀಟ, ಕವಚ ಮುಂತಾದುವುಗಳನ್ನು ಹಿತ್ತಾಳೆ ತಗಡಿನಲ್ಲಿ ಮಾಡಿಸಿಕೊಟ್ಟರು. ಕ್ರಿ.ಶ.೧೯೨೫ನೇ ಇಸವಿ ಮಾರ್ಗಶಿರಮಾಸ ಶುದ್ಧ ಪ್ರತಿಪದೆ ದಿನದಂದು ಅವರ ತಾಯಿ ನಿಧನರಾದರು. ಅವೆಲ್ಲವೂ ಹರಿಮಾಡಿದ ಮರ್ಯಾದೆಯೆಂದು ಭಾವಿಸಿ ಮಾತೃವಿಯೋಗದಿಂದ ಒದಗಿದ ದುಃಖವನ್ನು ಸಹಿಸಿಕೊಂಡು 'ಸುಖವಾಗಲಿ ದುಃಖವಾಗಲಿ ಸಖನೀನಾಗಿರೋ ಪಾಂಡುರಂಗ' ಎಂಬ ದಾಸರರಾಯರ ವಚನದಂತೆ ದ್ವಂದ್ವಾತೀತರಾಗಿ ಮಾತೃಋಣವನ್ನು ಶ್ರದ್ಧಾಭಕ್ತಿಯಿಂದ ಮಾಡಿ ಕೃತಕೃತ್ಯರಾದರು.

ಸ್ವಲ್ಪ ಕಾಲದಲ್ಲೇ ಜ್ಯೇಷ್ಠಪುತ್ರಿ ಪದ್ಮಾವತಿಬಾಯಿಯವರು ತೀರಿಕೊಂಡರು. ತದನಂತರ ಸದಾಕಾಲ ಭಜನೆ-ಕೃತಿರಚನೆ ಇತ್ಯಾದಿ ಹವ್ಯಾಸಗಳಲ್ಲಿ

ನಿರತರಾಗಿರುತ್ತಿದ್ದರು. ಇವರಿಗೆ 'ಭಜನೆ ಶ್ರೀನಿವಾಸರಾಯ'ರೆಂದೇ ಹೆಸರುಂಟಾಯಿತು. ಮನೆಯ ಸಮೀಪದಲ್ಲಿದ್ದ ಶ್ರೀ ಪುಟ್ಟಾಚಾರ್ಯರೆಂಬುವರು ಇವರಿಗೆ ಅಚ್ಚುಮೆಚ್ಚಿನ ಸ್ನೇಹಿತರು. ಅವರು ಸಹ ಶ್ರೀ ತಂದೆ ಮುದ್ದುಮೋಹನದಾಸರಿಂದಲೇ ಅಂಕಿತಪಡೆದ ವ್ಯಕ್ತಿ. ಸ್ವಪ್ನ ಸೂಚ್ಯವಾದ 'ಶ್ರೀ ವೆಂಕಟೇಶ' ಎಂಬ ಅಂಕಿತ ದೊರೆತಿದ್ದರೂ ನೀತಗುರುಗಳ ಸಮಾಗಮ ಮತ್ತು ದರ್ಶನ ದೊರೆಯಲಿಲ್ಲವಲ್ಲಾ ಎಂಬ ಕಳಕಳಿ ಮನಸ್ಸಿನಲ್ಲಿ ಇದ್ದೇ ಇತ್ತು. ದೊಡ್ಡಬಳ್ಳಾಪುರದ ಶ್ರೀ ಮುದ್ದು ಮೋಹನ ದಾಸರ ಶಿಷ್ಯರಲ್ಲಿ ಒಬ್ಬರಾದ ಶ್ರೀ ಪರಮಪ್ರಿಯ ಸುಬ್ಬರಾಯದಾಸರು (ತಂದೆ ಮುದ್ದು-ಮೋಹನ ವಿಠಲಾಂಕಿತರು) ಚಿತ್ರದುರ್ಗಕ್ಕೆ ಆಗಮಿಸಿದರು. ಅವರಿಬ್ಬರ ಸಮಾಗಮವಾದರೂ ಸ್ವಪ್ನ ಸೂಚನೆಯಾಗುವವರೆಗೂ ಅಂಕಿತ ಪಡೆಯಲು ಇಷ್ಟವಿರಲಿಲ್ಲ–ಇದು ಸ್ಪಷ್ಟವಾಗಿ ತಿಳಿದ ದಾಸರು ಆ ಸುಯೋಗಕ್ಕಾಗಿ ಕಾದು ಸೂಚನೆಯಾದ ನಂತರ ಕುಲದೇವರಾದ ವೇಂಕಟೇಶನ ಆರಾಧಕರಾದ ಇವರಿಗೆ 'ಶ್ರೀಉರಗಾದ್ರಿವಾಸವಿಠಲ' ಎಂಬ ಅಂಕಿತ ದೊರೆಯಿತು. ಆ ಅಂಕಿತ ಪದ ಹೀಗಿದೆ:

ಶ್ರೀ ಉರಗಾದ್ರಿವಾಸವಿಠಲ ನೀನಿವನ
ಪರಮಾದರದಿ ಕಾಪಾಡೊ ಹರಿಯೇ ಪ

ಗುರುಕರುಣವನು ಪಡೆದು ಹರಿವಾಯು
ಗುರುಗಳ ಸೇವೆಯನೆಇತ್ತು ಕಾಪಾಡೊ ಹರಿಯೇ ಅ.ಪ

ಗುರುಕರುಣವನು ಪಡೆಯದೆ ಸುರನರಾದ್ಯರಿಗೆ
ಹರಿಕರುಣ ದೊರೆಯದೆಂಬುದು ಸಿದ್ಧ
ನಿರುತ ದೃಢಮನವ ನೀನಿತ್ತು ಕಾಪಾಡೊ ಹರಿಯೇ
ಹರಿನಿನ್ನ ದಾಸರಾದಾಸ್ಯವನು ಇತ್ತು ಸತತ ಕಾಪಾಡೊ ಹರಿಯೆ
ಪರಮ ಭಾಗವತರ ಸಂಗವನು ಇತ್ತು ಪರಮ
ಕೃಪೆಯಿಂದ ರಕ್ಷಿಸೊ ಹರಿಯೆ ೧

ಪಂಚ ರೂಪಾತ್ಮಕನ ಪಂಚಭೇದವನರುಹಿ ।
ಸಂಚಿತಾಗಾಮಿ ಗಳ ಹರಿಸಿ
ಮಿಂಚಿನಂದದಿ ಪೊಳೆಯೊ ಹರಿಯೇ
ಗುರು ಶಿಷ್ಯ ಬಿಂಬೈಕ್ಯ ಚಿಂತನೆಯಿಂದ
ಹರಿವಾಯು ಮತದಲ್ಲಿ ನಿರುತಕಾಪಾಡೊ ಹರಿಯೆ ೨

ಪರಮ ಭಾಗವತರನು ಹಿಂದೆ ರಕ್ಷಿಸಿದಂತೆ ನೀನಿವನ
ನಿರುತ ಕಾಪಾಡೊ ಹರಿಯೇ
ಪರಮ ಭಾಗವತರ 'ತಂದೆ ಮುದ್ದು ಮೋಹನವಿಠಲ' ಇನ್ನಿ
ವನಲಿ ಒಂದಂಶದಲಿ ಇದ್ದು ಹೃದಯಾಂಬರದಿ
ನಿನ್ನ ಬಿಂಬರೂಪವ ತೋರಿ ಕಾಪಾಡೊ ಹರಿಯೇ ೩

ಉರಗಾದ್ರಿವಾಸವಿಠಲರು ರಚಿಸಿದ ದೇವರನಾಮಗಳು ೫೦೦ಕ್ಕಿಂತ ಹೆಚ್ಚು ಎಂದು ತಿಳಿದು ಬಂದಿದೆ. ಒಮ್ಮೆ ಎಡತೊರೆಗೆ ಹೋಗಿ ಬರುವಾಗ ಮಾರ್ಗದಲ್ಲಿ ನದೀ ಪ್ರವಾಹದಲ್ಲಿ ಸಿಕ್ಕಿಕೊಂಡಾಗ ಪೆಟ್ಟಿಗೆ ನೀರಿನಲ್ಲಿ ಮುಳುಗಿ ಕೆಲವು ಕೃತಿಗಳು ನೀರಿನಲ್ಲಿ ಕೊಚ್ಚಿಹೋದ ಪ್ರಸಂಗ ಅವರಿಗೆ ಭಾರಿ ನೋವನ್ನುಂಟು ಮಾಡಿತು.

ತಮ್ಮಲ್ಲಿಗೆ ಬಂದ ಶಿಷ್ಯರನ್ನು ಪರಿಗ್ರಹಿಸಿ ತಮ್ಮ ಉಪದೇಶಾಮೃತದಿಂದ ಅವರ ಉದ್ಧಾರಗೈದು ಸತ್ ಸಾಧನೆಯಮಾರ್ಗದಲ್ಲಿ ಪ್ರವರ್ತಕರನ್ನಾಗಿ ಮಾಡಿದ ಮಹನೀಯರಿವರು. (೨೦೦ಕ್ಕೂ ಹೆಚ್ಚಿನ ಶಿಷ್ಯರಿಗೆ ಅಂಕಿತವನ್ನು ನೀಡಿದ್ದಾರೆ. ಅಂಕಿತಗಳ ಪಟ್ಟಿಯನ್ನು ಅನುಬಂಧದಲ್ಲಿ ಕಾಣಬಹುದು.)

ಇವರ ಜೀವನ ಇತರರಿಗೆ ಮಾರ್ಗದರ್ಶಕವಾಗಿತ್ತು. ಶ್ರೀ ವಿಜಯ ದಾಸವರೇಣ್ಯರು ರಚಿಸಿರುವ ಕಂಕಣಾಕಾರ ಸುಳಾದಿಯ ಅಂತರಾರ್ಥವನ್ನು ಸೂಕ್ಷ್ಮವಾಗಿ ಗ್ರಹಿಸಿ ಅದರಂತೆ ವಿಧ್ಯುಕ್ತವಾಗಿ ಹೃದಯಾಬ್ಜಚಕ್ರದ ಚಿಂತನೆಗೈಯುತ್ತ ಬಿಂಬೋಪಾಸನ ಕ್ರಮದಿಂದ ಅವರು ಆಚರಿಸುತ್ತಿದ್ದ ಪ್ರತಿಮಾ ಪೂಜೆಯು ಅನುಷ್ಠೇಯವಾಗಿತ್ತು.

(ತೊಂಭತ್ತುಮೂರು ವರ್ಷಗಳ (೧೮೭೧-೧೯೬೪) ತುಂಬುಜೀವನದ ಸಾಫಲ್ಯವನ್ನು ಕಂಡ ಪೂಜ್ಯ ಗುರುವರ್ಯರು ಶ್ರೀ ಕ್ರೋಧಿನಾಮ ಸಂವತ್ಸರದ ಕಾರ್ತೀಕ ಬಹುಳ ದ್ವಾದಶಿ ಸೋಮವಾರ ದಿನದಂದು (೩೦-೧೧-೧೯೬೪) ದೇಹಬಿಟ್ಟರು.)

## ಕೃತಜ್ಞತೆಗಳು

ಶ್ರೀ ಉರಗಾದ್ರಿವಾಸವಿಠ್ಠಲದಾಸರಿಂದ ರಚಿತವಾಗಿರುವ ಕೀರ್ತನೆಗಳ ಸಮಗ್ರ ಸಂಗ್ರಹವು ನಮಗೆ ಈಗ ಲಭ್ಯವಿಲ್ಲದಿರುವುದು ನಮ್ಮ ದುರದೃಷ್ಟ. ಇಲ್ಲಿಯವರೆಗೆ ಸುಮಾರು ೧೦೦ ರವಳಗೆ ಕೀರ್ತನೆಗಳು ಲಭ್ಯವಾಗಿರಬಹುದು. ಗುರುಪತ್ನಿಯವರು ಬರೆದಿಟ್ಟಿದ್ದ ಹಸ್ತಪ್ರತಿಯಿಂದ ಇದನ್ನು ಸಂಗ್ರಹಿಸಲಾಯಿತು. ಇದನ್ನು ನನಗೆ ಒದಗಿಸಿಕೊಟ್ಟ ಅವರ ಮೂರನೇ ಮಗಳು ಶ್ರೀಮತಿ ವನಜಾಬಾಯಿಯವರಿಗೆ ನನ್ನ ಹೃತ್ಪೂರ್ವಕ ನಮಸ್ಕಾರಗಳು. ಅನೇಕ ಕೀರ್ತನೆಗಳಿಗೆ ರಾಗ-ತಾಳ ಸೂಚಿಸಿಲ್ಲ. ಅನೇಕ ಕೀರ್ತನೆಗಳಿಗೆ ತಾವೇ ರಾಗ ಹಾಕಿ ಹಾಡಿ ಹೇಳಿಕೊಡುತ್ತಿದ್ದರು. ಕೀರ್ತಿಶೇಷ ಶ್ರೀ ಹೆಚ್. ಶಾಮರಾಯರು ಇವರ ಪ್ರಥಮ ಶಿಷ್ಯರು (ಇವರ ಅಂಕಿತನಾಮ ಅಂತರಾತ್ಮವಿಠಲ). ದಾಸವರ್ಯರಿಂದ ರಚಿತವಾದ ಅನೇಕ ಕೃತಿಗಳನ್ನು ಅವರೇ ಬರೆದಿಟ್ಟಿದ್ದ ವಹಿಯಿಂದ ಈ ಸಂಗ್ರಹಕ್ಕೆ ನನಗೆ ಅನುಕೂಲವಾಯಿತು. ಅವರಿಗೆ ನನ್ನ ಸಾಷ್ಟಾಂಗ ಪ್ರಣಾಮಗಳು. ದಾಸವರೇಣ್ಯರ ಶಿಷ್ಯರಲ್ಲಿ ಮುಕುಟ ಪ್ರಾಯರಾಗಿ ಎಲ್ಲರಿಗೂ ಮಾರ್ಗದರ್ಶಕರಾಗಿದ್ದವರೆಂದರೆ ಶ್ರೀ ತಂದೆ ವೆಂಕಟೇಶವಿಠಲಾಂಕಿತರಾದ ಗುರುಗಳ ಅಚ್ಚುಮೆಚ್ಚಿನ ಶಿಷ್ಯರಲ್ಲಿ ಮೂರನೆಯವರಾದ ಶ್ರೀ ಆರ್. ರಾಮಚಂದ್ರರಾಯರು. ನಮಗೆ ಸಮಯೋಚಿತ ಸಲಹೆಗಳನ್ನು ಆಗಿಂದಾಗ್ಗೆ ತಿಳಿಸಿ ನಮ್ಮ ಕಾರ್ಯಪಥದಲ್ಲಿ ನೆರವಾಗಿದ್ದಾರೆ. ಅವರಿಗೆ ನಮ್ಮ ಭಕ್ತಿಪೂರ್ವಕ ನಮನಗಳನ್ನು ಅರ್ಪಿಸುತ್ತೇನೆ. ಲೇಖನದ ಕೊನೆಯಲ್ಲಿ ಉಲ್ಲೇಖವಾಗಿರುವ ವಿಷಯಗಳಿಗೆ ಸಂಬಂಧಿಸಿದಂತೆ ಮೈಸೂರಿನ ಶ್ರೀ.ಎಂ.ಆರ್. ಗೋವಿಂದರಾಯರು ಸಂಪರ್ಕ, ಅನುಭವ ವಿಶೇಷಗಳನ್ನು ನನಗೆ ಒದಗಿಸಿರುತ್ತಾರೆ. ನಮ್ಮ ಗುರುಗಳ ಜೊತೆ ಒಡನಾಡಿ ಅವರಿಗಿದ್ದ ಅನುಭವಗಳನ್ನು ನನಗೆ ಎಷ್ಟೋಬಾರಿ ತಿಳಿಯಪಡಿಸಿದ್ದಾರೆ.

ಅವರಿಗೆ ನನ್ನ ಅನಂತಾನಂತ ಪ್ರಣಾಮಗಳು.

ನನಗೆ ಅಂಕಿತಮಾಲೆ ಹಾಗೂ ಗುರುಗಳಿಂದ ರಚಿಸಿದ ಕೆಲವು ಹಳೆಯ ಕೃತಿಗಳನ್ನು ಸಂಗ್ರಹಿಸಿಕೊಟ್ಟ ಶ್ರೀಮತಿ ಕಮಲಾಬಾಯಿ (ಸುಜ್ಞಾನ ವಿಠಲಾಂಕಿತರು), ಶ್ರೀ ಕೃಷ್ಣರಾಯರು (ರಮಾಕಾಂತವಿಠಲರು), ಶ್ರೀ ವಿ. ಶ್ರೀನಿವಾಸಮೂರ್ತಿ (ಸೀತಾರಾಮ ವಿಠಲದಾಸರು), ಶ್ರೀಮತಿ ಕಮಲಾಬಾಯಿ (ಆನಂದಮಯವಿಠಲ) ಮತ್ತು ಗುರುವರ್ಯರಜೊತೆಯಿದ್ದು ಅಂಕಿತಪಡೆದಿದ್ದ ಅವರ ಶಿಷ್ಯೆ ಶ್ರೀಮತಿ ಜೀವುಬಾಯಿ (ಕಮಲನಾಭವಿಠಲಾಂಕಿತರು) ಇವರುಗಳಿಗೆ ನಾನು ಚಿರಋಣಿ, ಮತ್ತೆ ಈ ಹೊತ್ತಿಗೆಯು ಹೊರಬರಲು ಸಹಾಯ ಮಾಡಿ ಈ ಕಾರ್ಯ ಯಶಸ್ವಿಯಾಗಲು ಸಹಕರಿಸುತ್ತಿರುವ ಇತರರೆಲ್ಲರಿಗೂ ನಮ್ಮ ಹೃತ್ಪೂರ್ವಕ ವಂದನೆಗಳು.

ಸಂಪುಟ ಸಂಪಾದಕರಾಗಿ ಅನಂತರ ನೇಮಕಗೊಂಡ ನನ್ನ ಆಪ್ತ ಮಿತ್ರರಾದ ಶ್ರೀ ಎ. ಎನ್. ಅನಂತಸ್ವಾಮಿ ರಾವ್ ಅವರು ಸಹ ಈ ಭಾಗದ ಸಂಪಾದನೆ ಕಾರ್ಯದಲ್ಲಿ ಭಾಗಿಗಳಾಗಿದ್ದಾರೆ.

ಈ ಸಂಪುಟವನ್ನು ಸಿದ್ಧಪಡಿಸುವ ಕಾರ್ಯದಲ್ಲಿ ನಮ್ಮನ್ನು ಆಯ್ಕೆ ಮಾಡಿರುವ ಇಲಾಖೆಯ ನಿರ್ದೇಶಕರಾದ ಸನ್ಮಾನ್ಯ ಶ್ರೀ ಮುದ್ದು ಕೃಷ್ಣ ಅವರಿಗೂ, ಡಾ. ಶ್ರೀನಿವಾಸ ಹಾವನೂರ ಅವರಿಗೂ ಮತ್ತು ಡಾ. ಟಿ. ಎನ್. ನಾಗರತ್ನ ಅವರಿಗೂ ನನ್ನ ಹೃತ್ಪೂರ್ವಕ ವಂದನೆಗಳು.

ಉರಗಾದ್ರಿವಾಸ ವಿಠಲ ದಾಸರ ಕೀರ್ತನೆಗಳ ಕರಡು ಪ್ರತಿಗಳನ್ನು ತಯಾರಿಸುವುದರಲ್ಲಿ ನೆರವಾದ ಶ್ರೀ ಹೆಚ್. ವಿ. ಗೋಪಾಲ ರಾವ್ (ದಾಸರ ಮೊಮ್ಮಗ), ಅವರ ಪತ್ನಿ ಶ್ರೀಮತಿ ಸುಧಾಬಾಯಿ ಮತ್ತು ಅವರ ಪುತ್ರಿಯರು ಶ್ರೀಮತಿಯರಾದ ರಂಜನಿ ಮತ್ತು ವರ್ಧಿನಿ ಹಾಗೂ ಶ್ರೀ ಹೆಚ್. ಎಸ್. ರಘುನಾಥ ಇವರಿಗೂ, ಅನುಬಂಧಗಳನ್ನು ಸಿದ್ಧಪಡಿಸುವುದರಲ್ಲಿ ನೆರವಾದ ಶ್ರೀಮತಿಯರಾದ ಚಿತ್ರಾ ಆನಂದರಾವ್ ಮತ್ತು ವಿಜಯಕುಮಾರಿ ಅರವಿಂದರಾವ್ ಇವರುಗಳಿಗೂ ನಮ್ಮ ಹೃತ್ಪೂರ್ವಕವಾದ ವಂದನೆಗಳು.

ವಚನ ಸಾಹಿತ್ಯದಂತೆಯೇ ಧಾರ್ಮಿಕ ವಿಚಾರಗಳ ಚಿಂತನ ಮಂಥನ, ದೈವಭಕ್ತಿ ಮುಂತಾದ ನೀತಿಗಳ ನೆಲೆಗಲ್ಲಿನ ಮೇಲೆ ಹರಿದಾಸರುಗಳಿಂದ ನಿರ್ಮಾಣವಾಗಿರುವ ಈ ಸಮಗ್ರ ಹರಿದಾಸ ವಾಙ್ಮಯವು ಪೂರ್ಣ ಪ್ರಮಾಣದಲ್ಲಿ ಪ್ರಕಟವಾಗಿ ಕನ್ನಡ ಜನತೆಯ ಕೈ ಸೇರಲೆಂದು ಹಾರೈಸುತ್ತೇವೆ.

ಹೆಚ್.ಎಸ್. ಶ್ರೀನಿವಾಸಮೂರ್ತಿ

# ಕೀರ್ತನೆಗಳ ಕ್ರಮಸೂಚಿ

ಲಕ್ಷ್ಮೀದೇವಿ

| ಕೀರ್ತನೆ ಸಂಖ್ಯೆ | ಕೀರ್ತನೆಯ ಮೊದಲ ಸಾಲು | ಪುಟ ಸಂಖ್ಯೆ |
|---|---|---|

ಶ್ರೀ ಜಯತೀರ್ಥರು



ರಾಘವೇಂದ್ರಸ್ವಾಮಿಗಳು



ಪ್ರಜ್ಞಾನಿಧಿತೀರ್ಥರು



ವಿಜಯದಾಸರು



ಜಗನ್ನಾಥದಾಸರು



ತಂದೆ ಮುದ್ದುಮೋಹನ ದಾಸರು



ಆತ್ಮನಿವೇದನೆ

**ಪುರಾಣ ವಿಷಯ**

## ೧

## ಗಣೇಶ ಪ್ರಾರ್ಥನೆ

ಭುಜಗಭೂಷಣ ಕರುಣಾ ಗಜಾನನಾ ಪ

ಅಂಬರಕಭಿಮಾನಿ ಶಂಭುದೇವನ ಸುತ
ಇಂಬು ತೋರಿಸೊ ನೀ ವಿಶ್ವಂಭರನ ಸ್ಮರಣೆಗೆ ೧

ದಾಸವರ್ಯನೆ ವೇದವ್ಯಾಸರಿಗತಿಪ್ರಿಯ
ದಾಸನೆಂದೆನಿಸೆನ್ನ ಶೇಷಮೂರುತಿಯೆ ೨

ಮತಿಯ ಪಾಲಿಸು ಶ್ರೀಪತಿಯ ಸ್ತುತಿಗೆ ವಿಘ್ನ
ತತಿಯ ತಾರದೆ ಶುಭಮತಿ ಇತ್ತು ಸಲಹೊ ೩

ತತುವರೊಳಗೆ ಅತುಳ ಮಹಿಮನೆಂದು
ಪ್ರಥಮ ಕಾರ್ಯದಿ ನಿನ್ನ ನುತಿಸಿ ಬೇಡುವರೊ ೪

ಶ್ರುತಿಪ್ರತಿಪಾದ್ಯ ಶ್ರೀ ವೆಂಕಟೇಶನ ದೂತ
ಹಿತರೆನಗಿಲ್ಲ ನೀ ಗತಿ ಎಂದು ನಂಬಿದೆ ೫

## ಶ್ರೀಹರಿ ಸಂಕೀರ್ತನೆ

## ೨

ಆರಿಗೆ ಆರಾಗರಯ್ಯ-ಶ್ರೀ ವಾಸುದೇವ ನೀನೊಬ್ಬನಲ್ಲದೇ ಪ

ಮಾತೆ ಇದ್ದರು ದೃಢವ್ರತನಾದ ಧ್ರುವಗೆ ಶ್ರೀ-
ಪತಿ ನೀನೆ ಗತಿಯಾದೆ ಆರಾದರಯ್ಯ
ಪಿತನು ಹಿತನೆನ್ನೆ ಪ್ರಹ್ಲಾದಗಾದಂಥ
ಗತಿ ನೋಡಿ ನರಹರಿ ಗತಿ ಪ್ರದ ನೀನಾದೆ ೧

ಭ್ರಾತರಾವಣನ ಸಹಜಾತ ವಿಭೀಷಣನ ನಿ-
ರ್ಭೀತನ ಮಾಡಿ ಕಾಯ್ದವರಾರಯ್ಯ
ಪತಿಗಳೈವರು ಸತಿಯಾ ಅತಿ ಖೇದ ಹರಿಸಿದರೆ
ಸಂತೈಸಿದಾನಾಥ ರಕ್ಷಕ ಹರಿಯಲ್ಲವೇ ೨

ಬಂಧುಗಳಿರೆ ಗಜರಾಜನ ನಕ್ರವು
ಬಂದು ಬಾಧಿಸೆ ಬಂಧ ಬಂದು ಹರಿಸಿದರ್ಯಾರೋ
ಅಂದು ಇಂದು ಎಂದನಿಮಿತ್ತ ಬಂಧು ನೀ
ಬಂಧುವಲ್ಲದೆ ಎಲ್ಲರು ಬಂಧಕರಯ್ಯಾ ೩

ಸತಿಯಿಂದ ದಶರಥಪತಿಯು ಸುತನನಟ್ಟಿ
ಗತಿಕಾಣದೆ ತಾನೇನಾದನೋ – ಸತತ ಕುರುಪತಿ
ಅತಿಹಿತನಾದನೆ ಭೀಷ್ಮಗೆ
ಪತಿತಪಾವನ ನೀ ಅಂತ್ಯಕಾಲಕ್ಕಾದೆ ೪

ಸುತರು ರಕ್ಷಕರೇನೊ – ಶತಸೂನುಗಳಿಗೆ ಪಿತ
ಧೃತರಾಷ್ಟ್ರಗೆ ಕೊನೆಗಾರಾದರಯ್ಯ
ಇತರರ ಪಾಡೇನೊ ಶ್ರೀ ವೇಂಕಟೇಶನೆ
ಗತಿ ಎಮಗೆ ಉರಗಾದ್ರಿವಾಸ ವಿಠಲನಲ್ಲವೆ ೫

•

## ೩

ಇಂದಿರಾರಾಧ್ಯನೆ ಬಂದು ನಿಲ್ಲೊ ಪ

ಇಂದೆನ್ನ ಸಲಹೊ ಮಂದನಾನೊಂದನರಿಯೆ ಏ-
ನೆಂದು ಕರೆಯಲೋ ಗೋವಿಂದ ಅ.ಪ

ಜಲದೊಳಾಡುವ–ಕಲ್ಲಹೊರುವ
ಎಲ್ಲಕಾಡಿನೊಳಾಡುವ ಭಳಿರೆ ಎರಡಂಗವ ತಳೆವ
ಇಳೆಯನಳೆಯುವ ಭಾರ್ಗವ ಖಳಕುಲ
ವನಳಿವಗೋವನೆ ಕಾಯ್ದ

ಲಲನೆಯರವ್ರತವನಳಿವ ಅಶ್ವವ ನೇರಿ
ಮರೆವ ನಿನ್ನಯ ರೂಪವಾ
ಸಲಿಲ ಹೊಕ್ಕು ಅಸುರನ ಸಂಹರಿಸಿ
ಕಲಕಿಶರಧಿಯ ಸುಧೆಯನು ತರಿಸಿ
ನೆಲಗಳ್ಳನ ಮದವನೆ ಮರ್ದಿಸಿ
ಚೆಲುವಚೆಳ್ಳುಗುರಿನಿಂದುದರವ ಭೇದಿಸಿ
ಸುಲಭದಿಂದ ಶುಕ್ರನ ಕಣ್ಮರಿಸಿ
ಬಲುಕೊಬ್ಬಿದ ಕ್ಷತ್ರಿಯರನೊರೆಸಿ
ಶಿಲೆಯ ಮೆಟ್ಟಿ ಮುನಿಸತಿಯರನುದ್ಧರಿಸಿ
ಲೀಲೆಯಿಂದ ವ್ರಜನಾರಿಯರೊಲಿಸಿ
ಸಲೆದಿಗಂಬರರೂಪವ ಧರಿಸಿ
ಇಳೆಯೊಳು ರಾವುತನಾಗಿ ಮೆರೆವ–ನಿನ್ನಯ
ರೂಪವ ಬಲ್ಲವರಾರೊ ಮಾಧವ ೧

ಜಲದೊಳು ನಿಂದು ಕಣ್ಣಬಿಡುವ ಶೈಲವ ತಳೆವಾ
ಕಲಕೀ ಮಣ್ಣ ಮೆಲುವ ಕಲ್ಲಕಂಭವ ಒಡೆವಾ
ಬಲಿಯನೆ ಬೇಡುವ ಪರಶುವ ತೊಳೆದು ವನವನಗಳ ಚರಿಸುವ
ಬಾಲೆಯರನಾಳ್ವ ಎಲ್ಲನಾಚಿಕೆಯ ಬಿಡುವ
ಸಲ್ಲುವಹಯವೇರಿ ಮೆರೆವಾ ನಿನ್ನಯ ರೂಪವಾ
ಎಲ್ಲವೇದವನುದ್ಧರಿಸಿ ವಾರಿಧಿಯಲಿ
ತಳೆದು ಅಮೃತಮಥನಕೆ ಶಿಲೆಯ
ಝಲಿಸಿ ನಿಲಸಿದೆ ನಿಜಕೆ ಧರಣಿಯ
ಬಲ್ಲಿದ ಬಲಿಯ ಬಂಧಿಸಿ ಭಕ್ತಿಯ
ಸಲ್ಲಿಸಿದೆ ಪಿತ ಪೇಳ್ದ ಆಜ್ಞೆಯ
ಬಿಲ್ಲನೆತ್ತಿ ವರಿಸಿದೆ ಸೀತೆಯ
ಮಲ್ಲರ ಮಡುಹಿ ತೋರಿದೆ ಚರಿಯ
ಜಳ್ಳುಮಾಡಿತೋರ್ದೆ ಧರ್ಮಕೆ ಮಾಯ

ಹಲ್ಲುಣಿಸುವ ಹಯವೇರಿ ಮೆರೆದ ಶ್ರೀ
ವಲ್ಲಭ ನಿನ್ನಯ ರೂಪವ ಸೊಲ್ಲಿಪರಾರೋ ಶ್ರೀಧರ ೨

ನಿಗಮತಂದಿತ್ತೆ ನಗವಾನೆ ನೆಗವಾ
ಮೊಗದೊಳು ಭೂಮಿಯ ಬಗೆವಾ ಉಗುರಿಂದುದರವ ಸೀಳ್ವ
ತ್ಯಾಗಿಯನ್ಯಾಚಿಸುವ ಭೃಗುವಿಗೆ ಮುದವ ತೋರ್ವ
ಸಾಗರಕೆ ಸೇತುಕಟ್ಟುವ ನೆನೆದಮೃತವ ಮೆಲುವ
ನಿಗಮ ಮೋಹಿಸಿ ತೋರ್ವ ಜಗದಿ ಕಲ್ಕಿ
ಎಂದೆನಿಸಿ ಮೆರೆವ ನಿನ್ನಯ ರೂಪವಾ
ಪೊಗಲಳವೇ ಭೂಧವ
ನಿಗಮಕಾಗಿ ನೀ ತಮನ ಮರ್ದಿಸಿ
ನಗವ ಬೆನ್ನಲಿ ಪೊತ್ತು ಸುಧೆಯನು ಸಾಧಿಸಿ
ಹಗೆಯ ಹಿರಣ್ಯನ ಅಸುವನೆ ಹರಿಸಿ
ಮಗುವಿನ ಭಕ್ತಿಗೆ ವ್ಯಾಪ್ತಿಯ ತೋರಿಸಿ
ಬಾಗಿಲ ಕಾಯ್ದು ನೀ ಬಲಿಯ ರಕ್ಷಿಸಿ
ಆ ಗರ್ವಿಸಿದರಸರ ಪರಶುವಿಂದ ವರೆಸಿ
ಯಾಗರಕ್ಷಣೆಗೆ ನೀ ರಕ್ಷಕನೆನಿಸಿ
ನೀಗಲು ಕುರುಕುಲ ಕಲಹವೆಬ್ಬಿಸಿ
ಆಗಮ ಶಾಸ್ತ್ರಕೆ ಮಾಯವ ಕಲ್ಪಿಸಿ
ಬೇಗ ಬಂದು ಹಯವೇರಿ ಮೆರೆವ–
ಶ್ರೀ ವೆಂಕಟೇಶ ನಿನ್ನಯ ರೂಪವ
ಬೇಗದಿ ತೋರೋ ಶ್ರೀಪಾದವಾ ೩

೪

ಈ ಭಾಗ್ಯವೆ ನಿನ್ನದೊ ವರ ಭೋಗಿಶಯನಾ ಪ

ಸೌಭಾಗ್ಯವೇ ನಿನ್ನ ಮಹಿಮೆ ತಿಳಿಯುವ ಯೋಗ ಅ.ಪ

ನೀನಿಲ್ಲದಾಸ್ಥಾನ ಈ ನಳಿನಜಾಂಡದೊಳಿಲ್ಲ
ನೀನೆಲ್ಲವನು ಬಲ್ಲೆ ನಿನ್ನತಿಳಿಯಗೊಡದೆ
ಹೀನಮಾನವ ನಾನು ನಿನ್ನನವರತ ಮರೆತರು ನೀ
ಎನ್ನ ಮರೆಯದಲೆ ಎನ್ನೊಳಗೆ ಇಹೆ ಎಂಬ ೧

ನಿಲ್ಲಿಸಲು ನಿಲ್ಲುವೆನು ಮಲಗಿಸಲು ಮಲಗುವೆನು
ತಿಳಿಸಿದರೆ ನಾ ತಿಳಿವೆ ತಿಳುವಳಿಕೆ ನೀನೆ
ತಿಳಿಯಗೊಡಿಸೋಎನ್ನಕ್ರಿಯೆಗಳನು ದೇಹದ
ನೆಳಲಂತೆ ನಿನಗೆ ನಾನಿಹೆನಯ್ಯ ದೇವಾ ೨

ಈ ಜಗತ್ತಿನೊಳಗೆಲ್ಲ ಪೂಜ್ಯಪೂಜಕ ಪೂಜ್ಯ
ಪೂಜೋಪಕರಣದೊಳು ನೀನೆ ನಿಂತು
ಮೂರ್ಜಗತ್ಪತಿಯೆ ನಿನ್ನನರ್ಚಿಸುವ ಭಜಕರಿಗೆ
ನೈಜಸುಖ ವ್ಯಕ್ತಿಯನು ಮಾಡುತಲಿ ಪೊರೆವೇ ೩

ನೀರು ತೃಣವನು ಕೊಡಲು ಹರುಷದಿಂದಲಿ ಗೋವು
ಕ್ಷೀರವನು ಕರೆದು ಜನರ ಪೊರೆವಂತೆ
ಸೂರಿಗಳು ಮಾಳ್ಪ ಅಪರಾಧಗಳೆಣಿಸದಲೆ
ಕರುಣದಿಂದಲಿ ಅವರ ಪೊರೆವ ಶ್ರೀಹರಿಯೆ ೪

ಪನ್ನಗಾಚಲನಿಲಯ ನೀನೆ ಎನ್ನೊಳಗಿರಲು
ಬನ್ನಪಡಲ್ಯಾತಕೆ ಚಿನ್ಮಯರೂಪ
ಎನ್ನಂಥಜೀವರಿನ್ನೆಷ್ಟೋ ಬ್ರಹ್ಮಾಂಡದೊಳು
ಘನ್ನಭಕುತಿಯನೀಡೋ ಶ್ರೀಉರಗಾದ್ರಿವಾಸವಿಠಲ ೫

## ೫

ಎಲ್ಲಿಗ್ಹೋಗುವೆ ಎಲೊ ಹರಿಯೇ ಮನದಲ್ಲಿ
ನಿಲ್ಲೋ ಒಂದರಘಳಿಗೆ ಹೇ ಧೊರೆಯೆ ಪ

ವಾರಿವಿಹಾರದಿ ನಿಂದು–ಗಿರಿಭಾರ ಕಳೆದು ನೀನಡಗಿದೆ ಅಂದು
ಧಾರುಣಿಯನೆ ಬಗೆದು ನಿಂದು–ಧೀರ ಪೋರನ
ಮಾತನ ಸಲಹಬೇಕೆಂದು ೧

ವರವಟುವೇಷವ ಧರಿಸಿ–ದುಷ್ಟನೃಪರಕುಲಗೇಡಿಗನೆಂದೆನಿಸಿ
ನಾರಿಯನಟವಿಯೊಳರಸಿ–ಪುರನಾರಿಯರ
ಮನವನ್ನೆಲಪಹರಿಸಿ ೨

ವರವಸನವ ಬಿಟ್ಟು ನಿಂದು–ಘೋರತುರಗವನೇರಿ
ಓಡುವೆಯೊಮುಂದು
ಧೊರೆ ಶ್ರೀ ವೆಂಕಟೇಶನೆಂದೂ–ನೀನೆ
ಉರಗಾದ್ರಿವಾಸ ವಿಠಲ ದಯಾಸಿಂಧು ೩

## ೬

ಕಂಡೆ ನಾ ಕಣ್ಣೆದುರಲಿ ಕೃಷ್ಣನಾ ಪ

ಕಂಡೆ ನಾನೀಗ ಬ್ರಹ್ಮಾಂಡದೊಡೆಯ ತಾ
ತಾಂಡವಾಡಿ ಭೂಖಂಡದಿ ಮೆರೆದನ ಅ.ಪ

ಜಯಮುನಿಹೃತ್ಕುಮುದಾಲಯದಿ ಸುಲೀ–
ಲೆಯಾಡುತಿಹ ವಾಯ್ವಂತರ್ಗತ ಕೃಷ್ಣ
ಜಯಜಯಜಯ ಶ್ರೀ ವಿಜಯಸಾರಥಿ ಭವ–
ಭಯಹಾರಿ ಭಕ್ತರಭಯಪ್ರದಾಯಕ
ದಯವನಧಿಯೆ ಮನದಾಮಯ ಕಳೆದು ನಿ–
ರ್ಭಯ ದೊಳು ಕಾಯುವ ಜಗದೊಡೆಯಾ
ಧೇಯವು ನಿನಗಿದು ಸದ್ಧಕುತರಾಶ್ರಯ
ತಟಿತಕೋಟಿ ನಿಭಕಾಯ ಶ್ರೀಭೂಕಾಂತ
ದೈತ್ಯಕೃತಾಂತ ಜಗದಾದ್ಯಂತ
ನಿಂತು ಜೀವರಾದ್ಯಂತ ಕೃತ್ಯಗಳ್
ಸಂತತನಡೆಸುವ ಕಂತುಪಿತನ ನಾ ೧

ಶ್ರೀಕಳತ್ರ ಪರಲೋಕೈಕನಾಥ ಜಗ-
ದೇಕವಂದ್ಯನೆ ನರಲೋಕದ ಕ್ರೀಡೆಯೊಳ್
ಭೀಕರಿಲ್ಲದೆ ಬಕಶಕಟಾಕಂಸಾದಿಗಳ
ಏಕಘಳಿಗೆ ಯೊಳು ನೀ ಕೊಂದು ನಲಿದು ನಿಂದೆ
ಪಾಕಶಾಸನ ದಿವೌಕಸವಂದ್ಯನೆ
ಪ್ರಕಟನಹುದೊ ನಿಪ್ಕುಟಿಲರಿಗೆ
ದಿಟ್ಟತನದಿ ಹೃತ್ತಟದಲಿ ಧೇನಿಸೆ
ತಟಿತದಂದದಲಿ ಒಳಗೇ ಭಟಜನರುಗಳಾ
ಕಂಟಕದೆಡರಾಕಟಕಪರಿಹರ
ವಿಟ್ಟು ಕರುಣಾಕಟಾಕ್ಷದಿಂದ ಸಂತ
ವಿಟ್ಟು ನಟಿಸುವಾ ಸೃಷ್ಟಿಕರ್ತನ ನಾ ೨

ರಂಗಾ ನಿನ್ನವರುಗಳಿಂಗಿತದಂತೆ ಮಾ-
ತಂಗವರನ ನಿನ್ಹಾಂಗೆನಡೆಸಿ ಶುಭಾಂಗ ಸದ್ಭಕ್ತಕೃ-
ಪಾಂಗ ಮಂಗಳಾಂಗ ತುಂಗಮಹಿಮ ಸ-
ಪ್ತಾಂಗ ಏಕೋನವಿಂಶತಿ ಮಂಗಳವಿಶ್ವನೆ
ಕಂಗಳಲಿದ್ದು ಜಗಂಗಳ ಕಾರ್ಯಂಗಳಿಗೀವೆ
ಹಿಂಗಿಸಿ ಅಂಗದ ಕಾರ್ಯವ ನೀ ಮನ
ಕಂಗಳಿಗಿತ್ತು ಎಂದಿಗು ಪೊರೆವಾ
ಮಂಗಳ ಪ್ರಾಜ್ಞಭೋಗಂಗಳ ಪ್ರಜ್ಞ ಆಗದುಸೂಜ್ಞ
ರಂಗನಾಥ ಹೃದ್ರಂಗದಿ ನಲಿಯುತ
ಹಾಂಗೆ ನಿಂದಿಹ ಈ ಶ್ರೀವೇಂಕಟೇಶನ ನಾ ೩

## ೭

ಕಂಡೆ ನಾ ಬ್ರಹ್ಮಾಂಡಯೊಡೆಯ ಶ್ರೀ ವೆಂಕಟೇಶನ ಪ

ಕಂಡೆ ನಾ ಭಕುತರ ಹಿಂಡುಗಳು ನೆರೆ
ಕೊಂಡಾಡುತಲಿದೆ ಪದಪುಂಡರೀಕವ ನಾ ಅ.ಪ

ತುಂಗ ಮಹಿಮ ಸತ್ಸಂಗವಿತ್ತು ಮನದಂತರ ವರಿ-
ತಾಂಗೀರಸದೀ ಮಂಗಳ ಪೌರ್ಣಿಮೆಭಾರ್ಗವವಾಸರದಿ
ಭಾರ್ಗವಿಪತಿ ನಿನ್ನನು ಗ್ರಹದಿ ನಗದೊಡೆಯ ಭಕ್ತ-
ರಘಹರಿಸುತ ಪನ್ನಗಗಿರಿಯೊಡೆಯ ನಿನ್ನಯ ಗುಡಿಯನ್ನು
ಬಗೆ ಬಗೆ ಸುತ್ತಿಪರ ಹಿಂಡನ್ನು ನಾ ಕಂಡೆನೋ
ಜಾಗು ಮಾಡದೆ ಬಾಯಿಬೀಗವ ಕೈಕೊಂಡು
ಸಾಗಿ ಕಾಸಾರದಿ ಸ್ನಾನ ಮಾಡಿಕೊಂಡು
ಬಾಗಿ ವರಾಹದೇವರ ವಂದಿಸಿ
ಬೇಗದಿ ಹರಕೆ ಕೈಕೊಂಡಿಹ ದೇವನ ೧

ಮುಕ್ತರೊಡೆಯ ಪುರುಷೋತ್ತಮ ನಿನ್ನಯ
ಭಕ್ತರ ವಿಪತ್ತುಗಳೆಲ್ಲ ಹರಿಸಿಶಕ್ತ್ಯಾನುಸಾರ ತ್ವ-
ದ್ಭಕ್ತರೆಸಗುವ ಅತ್ಯಲ್ಪಭಕ್ತಿಯ ಸ್ವೀಕರಿಸಿ
ಭಕ್ತಿಯಿಂದ ಪ್ರಾಕಾರದಿ ಸುತ್ತಲು ಹೊತ್ತಗಂಡದೀಪಸಾರುತಲಿ
ನಿತ್ಯನೂತನ ನಿನ್ನ ಸ್ತುತಿಸುತಲೀ ಮತ್ತೆ ಉರುಳುತಲೀ
ಉತ್ತಮಗತಿಪ್ರದ ವ್ಯಕ್ತನಹುದೊ ತ್ವ-
ದ್ಭಕ್ತರ ಮನೋರಥ ಪೂರ್ತಿಮಾಡುವ
ಭಕ್ತವತ್ಸಲನೆಂಬ ಬಿರುದು ಪೊತ್ತ ಸ-
ರ್ವೋತ್ತಮ ಶ್ರೀ ಪುರುಷೋತ್ತಮ ನಿನ್ನನು ೨

ಬೊಮ್ಮಜನಕ ಪರಬೊಮ್ಮನೆ ನಿನ್ನಯ
ಸನ್ಮಹಿಮೆಯ ನಾ ಒಮ್ಮನದೀ
ಒಮ್ಮೆಯಾದರು ಮನ್ಮನದಲಿ ನಿನ್ನಯ
ಸನ್ಮಂಗಳರೂಪವ ನಿಲ್ಲಿಸದೆ ಸುಮ್ಮನೆಕುಳಿತು
ಇಮ್ಮನನಾಗಿರೆ ಘಮ್ಮನೆ ಎನ್ನನು ಒಳಕ್ವೈದೆ
ಕಣ್ಮನದೆದುರಲಿ ನೀ ನಿಂದೆ ನೀನೆನ್ನಯ ತಂದೆ ಸನ್ಮುದದಿಂದೆ
ಪಾಮರನೆಂದೆನ್ನ ಪ್ರೇಮದಿ ಕರುಣಿಸಿ
ಸನ್ಮಹಿಮೆಯ ತೋರ್ದೆ ಜಗದೀಶ
ಕಾಮಿತಜನರ ಕಲ್ಪದ್ರುಮ ನೀನೆಲೊ
ಈ ಮೇಲುಗಿರೀಶ ಶ್ರೀ ವೆಂಕಟೇಶಾ ನಿನ್ನ ೩

## ೮

ಕಷ್ಟಹರಿಸೊ ಪರಮೇಷ್ಟಿಪಿತನೆ ನೀ ಕೈ
ಬಿಟ್ಟರೆ ಸೃಷ್ಟಿಯೊಳು ಪಾರುಗಾಣುವುದೆಂತೂ ಪ

ಇಷ್ಟದಿಂದಲೋ ಅನಿಷ್ಟದಿಂದಲೋ ನಾನೇ
ಹುಟ್ಟಿಬಂದೆನೆ ದೇವ-ನಿನ್ನಿಷ್ಟದಿಂದಲ್ಲವೇ ಅ.ಪ

ಬಿಂಬನೆನಿಸಿದೆ ಎನಗೆ ಪ್ರತಿಬಿಂಬ ನಾ ನಿನಗೆ
ಬಿಂಬ ಪ್ರತಿಬಿಂಬಕೆ ಉಪಾಧಿಯು ನಿತ್ಯ-
ವೆಂಬನ್ವಯಕೆ ಗುಣತ್ರಯಬದ್ಧವೇ ಕಾರಣ-
ವೆಂಬ ಗುಣಜೀವಸ್ವರೂಪೋಪಾಧಿಯು
ಬೆಂಬಲನೀನಿದ್ದೂ ಗುಣಕಾರ್ಯಕನುವಾಗಿ
ಇಂಬುಕೊಡುವೆ ಫಲಭೋಗಿಸಲೀವೇ
ಎಂಬನುಡಿ ಶ್ರುತಿಶಾಸ್ತ್ರಸಿದ್ಧವು
ನಂಬಿಹುದು ಜಗವೆಲ್ಲ ಸತ್ಯವು
ಶಂಬರಾಂತಕ ಪಿತನೆ ಎನ್ನ ಹೃದ-
ಯಾಂಬರದಿ ನಿನ್ನ ಬಿಂಬ ತೋರೈ ೧

ಕಾಲಕರ್ಮಾದೃಷ್ಟಗುಣಗಳೆಲ್ಲವು ನಿಜ-
ವೆಲ್ಲಜಡಗಳು ಮತ್ತು ಅಚೇತನಂಗಳೈ
ಶೀಲ ಮೂರುತಿ ನೀ ಪರಮ ಚೇತನನಾಗಿ
ಎಲ್ಲ ಕಾಲದಿ ನಿನ್ನ ನಿಯಮನಂಗಳೈ
ಕಾಲಕರ್ಮಗುಣಂಗಳೇನಿಹುದೆಲ್ಲ
ಫಲಪ್ರದಾನವ ಮಾಡೆ ಶಕ್ತಿ ಜಡಕೆಂತಿಹುದಯ್ಯ
ಕಾಲನಾಮಕ ನೀನೆ ಸರ್ವ
ಕಾಲದಲಿ ಸ್ವಾತಂತ್ರ್ಯ ನಿನ್ನದೋ
ಇಲ್ಲ ಘನ ಸಮರಿಲ್ಲ ಸರ್ವಕರ್ಮ
ಫಲವೆಲ್ಲ ನೀನೆ ದಾತೃವೋ ೨

ಮರ್ಮವರಿಯೆನೊ ದೇವ ಧರ್ಮಭ್ರಷ್ಟನಾದೆ
ಕರ್ಮಫಲಾನುಭವಮಾಡಿ ಬೆಂಡಾದೆನು
ಸ್ವರ್ಣಸ್ತೇಯದ ಕರ್ಮ ತಾ ಶಿಕ್ಷಿಸಲರಿಯದು ನ್ಯಾಯ
ಧರ್ಮಾಧಿಪತಿ ಭೀಕರ ಫಲಕೊಟ್ಟು ಶಿಕ್ಷಿಪಂತೆ
ಧರ್ಮಮೂರುತಿ ಶುದ್ಧನಿಷಿದ್ಧಕರ್ಮಂಗಳಿಗೆ
ಪೂರ್ಣಫಲವಿತ್ತು ಸಮನೆಂದೆನಿಸಿರುವೆ
ಕರ್ಮಮೋಚಕ ನೀನೆ ಸಕಲ
ಕರ್ಮಪ್ರದನೆಂದೆನಿಸಿ ಪೂರ್ವ-
ಕರ್ಮಫಲ ಭೋಗಿಸಲು ಜನ್ಮವನಿತ್ತು
ಕರ್ಮಪ್ರವಹದೊಳಿಡುವೇ ೩

ವಿಮುಖನಾಗಿಹೆ ಶ್ರುತಿಸ್ಮೃತಿಶಾಸ್ತ್ರಧರ್ಮಕೆ
ಪ್ರಮುಖನಾಗಿಹೆ ದುಷ್ಕರ್ಮ ಮಾರ್ಗದಲ್ಲಿ
ಕರ್ಮಕಲಾಪದ ಧರ್ಮ ಮರ್ಮವನರಿಯೆ
ಹೆಮ್ಮೆಯಿಂದಲಿ ನಾನಾ ಕರ್ಮಕೂಪದಲಿರುವೆ
ಪೆರ್ಮೆಗೋಸುಗ ಅಧರ್ಮವೆಷ್ಟೋ ಮಾಡ್ದೆ
ಒಮ್ಮೆಗಾದರು ಸದ್ಧರ್ಮಾಚರಿಸಲಿಲ್ಲ
ಕರ್ಮ ಅಕರ್ಮ ವಿಕರ್ಮ ಪರಿಚಯವಿಲ್ಲ ಜನ್ಮಕೆ
ಧರ್ಮಪುತ್ರನೆ ದ್ವಂದ್ವಕರ್ಮಸಮರ್ಪಿಸಲು
ಸನ್ಮತಿಯ ಕೊಟ್ಟಿನ್ನು ೪

ಬೆಟ್ಟದೊಡೆಯನೆ ಶ್ರೀ ವೇಂಕಟೇಶ ನೀ
ತುಷ್ಟಿಯಾದರೆ ನಿನ್ನಿಷ್ಟದಂತೆ ಫಲವು
ಸೃಷ್ಟಿಯೊಳು ಪುಟ್ಟಿಸಿ ದುಷ್ಟಕರ್ಮದ ಪಾಶ
ಕಟ್ಟಿನೊಳಿಟ್ಟೆನ್ನ ಕಷ್ಟಪಡಿಸುವರೇ
ಸೃಷ್ಟೀಶ ಉರಗಾದ್ರಿವಾಸ ವಿಠಲ ಎನ್ನ
ನೀನಿಟ್ಟಿರುವಷ್ಟುಕಾಲ ಧಿಟ್ಟಭಕುತಿಯ ಕೊಟ್ಟು
ದಿಟ್ಟ ರಕ್ಷಿಸು ಇಷ್ಟಮೂರುತಿಯೆ
ಇಷ್ಟದಾಯಕನೆಂದು ನಾನಿಷ್ಟು ನುಡಿದೆನೋ ನಿನ್ನ
ಎನ್ನ ಮನೋಭೀಷ್ಟೆ ಸಲಿಸೆ ನಿನ್ನಿಷ್ಟವಯ್ಯ ೫

೯

ಗುಂಜಾ ನರಸಿಂಹಾ-ಪಾಹಿ ಮಾಂ ಪಾಹಿ ಪ

ಅಜಭವ ಫಣಿ ದ್ವಿಜರಾಜ ಸುಪೂಜಿತ
ತ್ರಿಜಗದೊಡೆಯ ನರಹರಿಯೆ-ದುರಿತ ಹರಾ ಅ.ಪ

ಪಟುತರ ಭಾಧೆ ಸಂಕಟಪಡುತಲಿ ಸುರ-
ಕಟಕ ನುತಿಸಿ ಕೋಟಿತಟಿತ್ಕಾಯನೆ
ಕೋಟಿ ಖಳರೆದೆ ಕುಟ್ಟಿ ಯಮಪುರ
ಕಟ್ಟಿ ದಿಟ್ಟತನದಲಿ ನಿಶಾಚರನಳುಹಿದ ೧

ಸಿಡಿಲೋಪಮ ಘುಡು ಘುಡಿಸುತ ಕಿಡಿಯ
ಕಡೆಗಣ್ಣಿಂದಲಡಿಗಡಿಗುಗುಳುತ
ಕೂಡಿನಖಗಳ ನೀಡಿಶಿರವನ-
ಲ್ಲಾಡಿಸಿ ಜಡಜಂಗಮರ ನಡುಕ ಬಿಡಿಸಿದೆಯೊ ೨

ಅಡಿಗಡಿಗೆಡರನು ಪಡುತಿಹ ಹುಡುಗನ
ದೃಢತರ ಭಕುತಿಯ ನುಡಿಯುನು ಕೇಳುತ
ನೋಡಿ ಅಭಯವ ನೀಡಿ ನೀ ದಯ
ಮಾಡಿ ಬಿಡುಗಣ್ಣರನು ಬಿಡದೆ ಸಲಹಿದೆಯೊ ೩

ಕಾಳ ರಕ್ಕಸರ ಬಾಧೆಗಳಿಂದ
ಗೋಳಾಡುತ ನಿನ್ನಡಿಗಳ ಸ್ತುತಿಸೆ
ಕೇಳಿ-ಹರುಷವ ತಾಳಿ-ದನುಜರ
ಧೂಳೀಪಟಮಾಡಿ ನಲಿದು ನಿಂದಾಡಿದೆ ೪

ಸಿಂಧುಶಯನ ಭವಬಂಧವಿಮೋಚಕ
ಇಂದಿರೆಯರಸ ಶ್ರೀ ವೇಂಕಟೇಶ ನೀ
ಬಂದೂ ಸ್ತಂಭದಿ ನಿಂದೂ ಭಕುತರ
ಬಂಧೂ ಸುರವೃಂದಕೆ ಆನಂದವ ನೀಡಿದ ೫

ಕಡಲುಗಳೇಳಡಿಗಡಿಗುಕ್ಕುತ
ಉಡುಗಡಣಗಳು ಪಥ ತಪ್ಪಿ ಬೀಳುತಲಿರೆ
ದಾಡೆ ಕುಣಿದಾಡೀ ಸ್ಮಶ್ರುಗಳ
ತೀಡಿ ಬಡಬಾನಲಲ್ಲಾಡಿಸಿ ನಿಂದ ೬

ಪರಿಪರಿ ಸುರರವಯವಗಳನು ಧರಿಸಿ
ಉರುತರ ಕ್ರೀಡೆಯ ಮಾಡಿ ಪ್ರಳಯದಿ
ತೋರಿ ಧಿಕ್ಕರಿಸಿ ತಾಳಿ ಹರುಷದಿ
ಕೇಳಿಯೊಳು ಉರಗಾದ್ರಿವಾಸವಿಠಲ ನೀ ನಿಂದೆಯೊ ೭

## ೧೦

ಗೋವಿಂದ ನಿನ್ನಾನಂದದಲ್ಲಿಡೋ ಗೋವಿಂದ ಪ

ಗೋವಿಂದ ಹೃದಯಾರವಿಂದದಲ್ಲಿ
ಇಂದೂ ಮುಂದೂ ಚರಣಾರವಿಂದ ತೋರೊ ಅ.ಪ

ಬೆಟ್ಟದ ದರುಶನ ಲಾಭವು ಕಷ್ಟ
ಪಟ್ಟರು ದೊರೆಯಲಸಾಧ್ಯವು ನೋಡೆ
ಸುಟ್ಟು ಹೋಗುವುದಘರಾಶಿಯು
ಪಟ್ಟ ಶ್ರಮವು ಇಷ್ಟಾರ್ಥವು
ದಿಟ್ಟ ಮನವ ಕೊಟ್ಟು ಅಟ್ಟುರಿಯ ಕಳೆದು
ಮೆಟ್ಟು ಮೆಟ್ಟಲನೇರಿ ದಿಟ್ಟಿಪರೋ ನಿನ್ನ ೧

ಪದುಮಜಾಂಡ ಕೋಟಿ ನಾಯಕ ದೇವ
ಶ್ರೀದ ಸೃಷ್ಟಾದ್ಯಷ್ಟ ಕರ್ತೃ ನೀನೆ
ಆದ್ಯಂತ ಜಗದಾಧಾರಕ ಅಂತರಾತ್ಮಕ ವಿಶ್ವವ್ಯಾಪಕ
ಆದಿಮೂಲ ಚತುಷ್ಪಾದ ಎಂದೆನಿಸಿ ತ್ರಿ-
ಪಾದ ಊರ್ಧ್ವ ಒಂದು ಪಾದ ಇಳೆಯೊಳಿಟ್ಟೆ ೨

ಸದಮಲಾತ್ಮಕನೇ ದೇವ ಸರ್ವದಾ ಎಲ್ಲಾ
ಹದಿನಾಲ್ಕು ಲೋಕವ ಧರಿಸಿದೆ ದಿವ್ಯ
ಸುಂದರ ವಿರಾಟನೆನಿಸಿದೆ ಬಂದು
ನೆಲೆಸಿದೆ ಸರ್ವರ ಹೃದಯದ
ಪದುಮದಲಿ ಪೊಳೆದು ತ್ರಿಜಗವಂದಿತನಾಗಿ
ಮೇದಿನಿಯೊಳು ಮೆರೆಯುತಿಹೆ ೩

ಧ್ವಜವಜ್ರಾಂಕುಶಯುಕ್ತಲಾಂಛನ ದೇವ
ಅಬ್ಜಭವಾರಾಧ್ಯ ಚರಣದಿವ್ಯ-
ಅಬ್ಜಸಖಕೋಟಿಕಿರಣ
ಪಾದಾಭರಣದಿಂದ ಕಿರಣಾ
ತಾ ಝುಗಝುಗಿಸುತ್ತ ನೂಪುರ ಕಾಲಂದಿಗೆ
ಗೆಜ್ಜೆ ಸಜ್ಜುಗೊಂಡಿಹ ಮೂರ್ಜಗದೊಡೆಯನೆ ಹರಿ ೪

ತಟಿತಕೋಟಿನಿಭಸಮಕಾಯ
ಕಟಿಯ ದಿವ್ಯರತ್ನಖಚಿತದಟ್ಟಿಯಾ
ತೊಟ್ಟ ಪಟ್ಟೆಪೀತಾಂಬರ ಬಟ್ಟೆಯಾ
ಸೊಂಟಪಟ್ಟಿಯ ಇಟ್ಟ ಪರಿಯಾ
ಅಟ್ಟಹಾಸದಿ ನಿಂದ ಸೃಷ್ಟಿಗೊಡೆಯ ಮನೋ-
ಭೀಷ್ಟದಾಯಕ ಬೆಟ್ಟದೊಡೆಯನೆ ೫

ಕರಚತುಷ್ಟಯದಲ್ಲಿ ಮೆರಯುವಾ ಶ್ರೀ ಸು-
ದರ್ಶನ ಶಂಖದಿಂದಿರುವಾ ದೀನ
ಶರಣಜನರಿಗಭಯ ಹಸ್ತವಾ
ಕರೆದು ನೀಡುವ ಕಾಮಿತಾರ್ಥವ
ಪರಿಪರಿ ಭಾಪುರಿ ಭುಜಗಾಭರಣಾದಿಗಳ
ಧರಿಸಿರುತ ಭಕ್ತಜನರಘ ಹರಿಸುವಾ ೬

ವಕ್ಷಸ್ಥಳದಲ್ಲಿ ಶ್ರೀವತ್ಸವೂ ಕಂಠ
ದಕ್ಷಿಣದಲ್ಲಿ ತೋರ ನಕ್ಷತ್ರದಂತಿಹ ಹಾರವೂ
ಕುಕ್ಷಿ ಅಂದವೂ ಮೋಕ್ಷದಾತೃವು
ಅಕ್ಷರ ವಾಚ್ಯತ್ರ್ಯಕ್ಷಾದಿ ಸುರವಂದ್ಯ
ಈ ಕ್ಷಿತಿಗಿಳಿದು ಪ್ರತ್ಯಕ್ಷನಾಗಿ ನಿಂದೆ ೭

ಮಂದಹಾಸಮುಖ ಅರವಿಂದ ದಂತ
ಚಂದಕರ್ಣಕುಂಡಲದಿಂದ
ನಿಂದೆ ಕಸ್ತೂರಿ ತಿಲಕವು ಪಣೆಯಿಂದ
ಕೆಂದುಟಿಯಿಂದ ಒಪ್ಪುವ ಚೆಂದ
ಪೊಂದಿ ಮಕುಟ ಸರ್ವಾಲಂಕಾರ ಪರಿಪೂರ್ಣ
ಬಂಧ ಮೋಚನ ಹರಿ ಶ್ರೀ ವೇಂಕಟೇಶನೆ ೮

ಪರಿಪರಿ ಮುಕ್ತಜೀವರುಗಳು ಇಲ್ಲಿ
ಪರಿವಾರ ತರುಲತೆ ಶಿಲೆಗಳು ಇನ್ನು
ವಿರಜೆ ಮೊದಲಾದ ಸರ್ವತೀರ್ಥವು ಸ್ವಾಮಿ
ತೀರ್ಥವೂ ಮೋಕ್ಷದಾತೃವೂ
ಸಿರಿ ವಿರಂಚಿ ಈರ ಭವ ಶಕ್ರಾದಿನುತ
ಉರಗಾದ್ರಿವಾಸವಿಠಲ ಜಗದೀಶನೆ ೯

## ೧೧

ಜಯತೀರ್ಥ ಗುರು ಹೃದ್ಗುಹಾಂತರವಾಸ ಪ

ವಾಯುವಂತರ್ಗತ ಕೃಷ್ಣಯ್ಯ ಜೀಯ್ಯ ಅ.ಪ

ಕಾಯಯ್ಯ‌ಇವ ನಿನ್ನವನೆಂದು ಅನುದಿನ
ಕಾಯ ವಾಚದಲಿ ನಿನ್ನ ನೆನವಿರಲಿ
ಜೀಯ ಶ್ರೀ ವಿಜಯರಾಯರ ಸೇವಾ
ಕಾರ್ಯಗಳಿಗಭಯವ ನೀಡಯ್ಯ ೧

ಲೌಕಿಕದಲ್ಲಿಹನೆಂದು ನಿರಾಕರಿಸದಲೆ ನಿನ್ನ
ಏಕಾಂತ ಭಕ್ತಿಯನಿತ್ತು ಸಲಹೋ
ಶ್ರೀ ಕಳತ್ರನೆ ಇವನ ವ್ಯಾಕುಲವ ಹರಿಸಿ ಕೃ
ಪಾ ಕಟಾಕ್ಷದಿ ನೋಡಿ ಕಾಯಬೇಕಯ್ಯ ೨

ಭಕ್ತವತ್ಸಲ ನಿನ್ನ ಭಕ್ತನಿವನೆಂದೆನಿಸೊ
ಭಕ್ತಿಬಲಜ್ಞಾನ ಸಾಧನವನಿತ್ತು
ಭಕ್ತವತ್ಸಲನೆಂಬೊ ಬಿರುದು ನಿನ್ನೊಳು ಇರಲಿ
ಮುಕುತರೊಡೆಯ ದೇವಾ ಶ್ರೀ ವೇಂಕಟೇಶ ೩

೧೨

ನಾರಸಿಂಹ ಶ್ರೀ ನಾರಸಿಂಹ
ಪಾರುಗಾಣಿಸಿ ದುರಿತೌಘಹರಿಸಿ ಕಾಯೊ ಪ

ನರಹರಿ ಜ್ವರಹರ ಘೋರವ್ಯಾಧಿಯ
ಪರಿಹಾರಗೈಸಿ ಪರಿಪಾಲಿಸಬೇಕಯ್ಯಾ ಅ.ಪ

ಘುಡು ಘುಡಿಸುತ ಪಲ್ಕಡಿದು ಚೆಂಡಾಡುತ
ಮೃಡನೆ ಪರನು ಎಂದು ನುಡಿದ ಕಶಿಪುವಿನ
ಒಡನೆ ಕಂಭದಿ ಬಂದು ಒಡಲ ಬಗೆದು ನಿನ್ನ
ಧೃಡ ಭಕುತಗೆ ಬಂದೆಡರ ಬಿಡಿಸಿದೆ ೧

ತುಷ್ಟಿಪಡಿಸೊ ಪರಮೇಷ್ಟಿಯ ಪಿತ ನಿನ್ನ
ದೃಷ್ಟಿಯಿಂದ ಅನಿಷ್ಟ ನಿವಾರಣ
ಅಷ್ಟಕರ್ತೃತ್ವದ ಪ್ರಭೋಕಷ್ಟಹರಿಸಿಭಕ್ತ-
ರಿಷ್ಟ ಪಾಲಿಪ ಸರ್ವಸೃಷ್ಟಿಗೊಡೆಯ ದೇವ ೨

ಸಂಕಟ ಬಿಡಿಸೊ ಭವಸಂಕಟದಿಂದ ಶ್ರೀ
ವೇಂಕಟೇಶಾತ್ಮಕ ಭೀಕರ ರೂಪ
ಶಂಕರಾಂತರ್ಗತ ಸಂಕರುಷಣ ಮೂರ್ತೇ
ಮಂಕುಹರಿಸಿ ಪಾದಪಂಕಜ ತೋರಯ್ಯ ೩

## ೧೩

ನಾರಾಯಣ ಪರಿಪಾಹಿ–ನರಹರಿಯೆ ಪ

ನಿನ್ನೊಳು ನಿರುತನಾನಪರಾಧಿ ನಾರಾಯಣ ಅ.ಪ

ಹೇಸಿಕೆಯಿಂದ ಮನಕಾಸುವೀಸಕೆ ಸೋತು
ಮೋಸಹೋದೆ ನಿನ್ನ ನೆನೆಯದೆ ಕೇಶವ ೧

ನಿರುತ ನಿನ್ನಯ ನಾಮಸ್ಮರಣೆಯ ಬಿಟ್ಟು
ಘೋರನರಕಕ್ಕೆ ಗುರಿಯಾದೆ ಪೊರೆಯೊ ನಾರಾಯಣ ೨

ಮುದದಿಂದ ನಾ ಹದಿಬದೆಯರ ಮುಖನೋಡಿ
ಮದದಿಂದ ನಿನ್ನನು ಮರೆದೆನೊ ಮಾಧವಾ ೩

ಸವನತ್ರಯದಿ ಅವ್ಯವಹಿತ ಕಾರ್ಯವ
ಲವಲೇಶ ಬಿಡದೆ ನಾನೆಸಗಿದೆನೋ ಗೋವಿಂದ ೪

ಕ್ಷಣ ಬಿಡದಲೆ ದುಷ್ಕರ್ಮದಿಂದಲಿ ದಣಿದು
ತೃಣಕೆಣೆಯಾಗಿ ನಿರ್ವಿಣ್ಣನಾದೆ ಹೇವಿಷ್ಣು ೫

ಹೃದಯದೊಳಿಲ್ಲದ ಮಧುರ ನುಡಿಗಳ
ಮುದದಿ ನುಡಿದೆನೋ ಮಧುಸೂದನನೇ ೬

ಅವನಿಯೊಳಗೆ ಎನಗೆಣೆಯಿಲ್ಲವೆನುತ
ಅವಗುಣಪ್ರತಿಮೆ ನಾನಾದೆ ತ್ರಿವಿಕ್ರಮ ೭

ಸುಮನಸರುಗಳ ನಾ ಅನುದಿನ ನಿಂದಿಸಿ
ಯಮನ ಮಂದಿರದಿ ನಾ ನಿಂದೆನೊ ವಾಮನ ೮

ಬುಧನೆಂದು ಮೆರೆದು ನಾ ಅಧಮರಸೇವಿಸಿ
ಅಂಧತಮಕೆ ಗುರಿಯಾದೆನೋ ಶ್ರೀಧರ ೯

ವಿಷಯವೆ ಜೀವನದ ಕೃಷಿಯಾಯಿತೆನಗೆ
ತೃಷೆಯ ಮೀರದೆ ನಿನ್ನ ಮರೆದೆನೊ ಹೃಷಿಕೇಶನೆ ೧೦

ಉದುಭವಿಸಿದೆ ಈ ವಸುಧೆ ಭಾರಕ್ಕಾಗಿ
ಬಾಧಕನಾದೆನೊ ಪದುಮನಾಭನೆ ೧೧

ತಾಮಸಕೃತ್ಯದಿಂದುದರ ಪೋಷಣೆಗಾಗಿ
ಪ್ರೇಮದಿ ತಿರುಗಿದೆ ದಾಮೋದರ ದೇವ ೧೨

ಶಂಕೆಯಿಲ್ಲದ ದುರುಳಕಿಂಕರಸೇವೆಯಿಂದ
ಸಂಕಟಪಟ್ಟೆನೊ ಸಂಕುರುಷಣ ದೇವ ೧೩

ಕಾಸಿನಾಶೆಗೆ ನಾ ಹೇಸಿಕಿಲ್ಲದೆ ಮನ
ಹೇಸದೆ ಯಾಚಿಸಿದೆ ವಾಸುದೇವನೇ ೧೪

ಸದ್ಯಫಲವೆ ಮುಖ್ಯವು ಉದ್ಯೋಗವೆಂದು ಉಬ್ಬಿ
ಒದ್ದಾಡುತಿಹೆ ಪ್ರದ್ಯುಮ್ನದೇವನೆ ೧೫

ಅನುಜತನುಜರು ಸತಿ ಅನುಗಾಲ ಬಂಧು ಎಂದು
ಅನವರತ ನಂಬಿದೆನು ಅನಿರುದ್ಧದೇವನೆ ೧೬

ಪರಿಪರಿ ಕ್ರೀಡೆಯಿಂ ಪರಪೀಡಕನಾಗಿ
ಪರರನು ಸ್ತುತಿಸಿ ಬೆಳೆದೆ ಪುರುಷೋತ್ತಮ ೧೭

ಸಾಧು ಸಜ್ಜನರೊಳು ಭೇದ ವಂಚನೆ ಮಾಡಿ
ಖೇದಕ್ಕೆ ಒಳಗಾದೆ ಅಧೋಕ್ಷಜ ಮೂರ್ತೇ ೧೮

ಬಾರಿಬಾರಿಗೆ ಪರಾನ್ನವನುಂಡು ಘೋರ
ದುರಿತಕ್ಕೆ ಗುರಿಯಾದೆ ಶ್ರೀ ನರಸಿಂಹನೇ ೧೯

ಕೆಚ್ಚೆದೆಯಿಂದ ನಾನು ಸ್ವೇಚ್ಛೆಯಿಂದಲಿ ಚರಿಸಿ
ಹುಚ್ಚು ಹಿಡಿದಂತಾದೆ ಅಚ್ಯುತಮೂರ್ತೇ ೨೦

ಮಾನಿಗಳಿಗೆ ಅವಮಾನ ಮಾಡಿ ನಾ
ಜ್ಞಾನಿ ಎಂದೆನಿಸಿದೇ ಜನಾರ್ದನನೇ ಕಾಯೊ ೨೧

ಕೋಪತಾಪಗಳಿಂ ಪಾಪಕೃತ್ಯವೆಸಗಿ
ತಾಪ ಪಡುತಲಿಪ್ಪೆನಯ್ಯ ಉಪೇಂದ್ರನೆ ೨೨

ಕರಚರಣಗಳಿಂದ ಕಳ್ಳನಾಗಿಹೆನು ತೊರೆದೆನೊ
ಹರಿಗುರು ಯಾತ್ರೆಯ ಶ್ರೀಹರೇ ೨೩

ಶಿಷ್ಟರನ್ನೆಲ್ಲ ನಿಕೃಷ್ಟತನದಿ ನೋಡಿ
ಭ್ರಷ್ಟನಾಗೀಜಗದಿ ಮೆರೆದೆ ಶ್ರೀಕೃಷ್ಣನೇ ೨೪

ಸಂಕಟಪಡುತಿಹ ಕಿಂಕರನೊಳಿಹ
ಮಂಕು ಹರಿಸಿ ಕಾಯೋ ಶ್ರೀ ವೇಂಕಟೇಶನೇ ೨೫

## ೧೪

ಪನ್ನಗಾಚಲವಾಸ–ಪ್ರಪನ್ನರ ಪಾಲಕ ಶ್ರೀಶಾ–ಸರ್ವೇಶಾ
ಕನಕ ರತುನಮಯ ಮುಕುಟಾಧಾರ
ಘನ ನವಮಣಿಮಯ ಕುಂಡಲಧರ
ಇನಕೋಟಿಪ್ರಭಕೌಸ್ತುಭಹಾರ
ಮನಸಿಜಧನುಸಮ ಭ್ರೂಸಮಾಕಾರ
ಘನ ಚಂಪಕಗೆಣೆ ನಾಸ ಗಂಭೀರ
ವನಜದಳಾಯತೇಕ್ಷಣಾಕಾರ
ವನರುಹಾ ಘನ ಸ್ಮಿತ ಸುಗಂಭೀರ
ಮುನಿಮಾನಸಮಂದಿರ ಸುವಿಹಾರ
ಚಿನುಮಯ ಅಪ್ರಾಕೃತ ಶರೀರ
ತನುಮನ ವಚನದಿ ಅನವರತದಿ
ನಿನ್ನಡಿ ಬಿಡದಲೆ ಕಿನ್ನರ ಸುರಮುನಿಗಣ
ತನುಸದನದಿ ಹೃದ್ವನಜದಿ ಘನಪದ

ವನರುಹ ಧೇನಿಸಿ ದೃಢಸ್ನೇಹದಿಂದಿರುವ
ತನುಮನಧನ ಅರ್ಪಿಸುವ ದಿನದಿನ ಕರ್ಮ ಒಪ್ಪಿಸುವ
ಘನಮೋದದಿಂದಲಿರುವಾ ನುತಿಸುವಾ ಬೇಡುವಾ
ಜನುಮ ಸ್ಥಿತಿ ಮೃತಿಗೆ ಬೆದರದಿರುವಾ
ನಿನ್ನವರೊಳು ತನ್ನಿರವ ತೋರಿಸುಹ
ಘನ್ನಪಾತಕವ ಕಳೆದುನ್ನತ ಸಾಧನವನ್ನೆ ಕೊಟ್ಟು
ನನ್ನಿಯಿಂದಲೆ ಪೊರೆವಾ ತನ್ನಧಾಮದಿ ಕಾಪಿಡುವಾ ೧

ಉತ್ತಮ ಮೌಕ್ತಿಕ ಸರಿಗೆ ನ್ಯಾವಳ
ಒತ್ತೊತ್ತಾಗಿಹ ತ್ರಿವಳಿಯ ಮಾಲಾ
ರತುನ ಪದಕದಾ ಸರದ ವಿಹಾರ
ಅತಿಮನೋಹರ ಹೃದಯ ವಿಶಾಲ
ಸಲೆಸಿರಿವತ್ಸ ವಕ್ಷದಿ ಲೋಲ
ಸುತ್ತಿದ ಭಾಪುರಿ ಭುಜದ ವಿಸ್ತಾರ
ಸಿತಾನಿಸಿತ ಉಪವೀತದಿ ಲೊಲ
ದಾತಾಪಿತ ತವನಾಭಿಯ ಕಮಲ
ಉತ್ತಮಕಮಲ ಕಲ್ಹಾರದ ಮಾಲ
ಹಸ್ತಾಭರಣದಿ ಮೆರೆಯುತ ಪೊತ್ತಿಹ
ಚಕ್ರಾಧ್ಯಾಯುಧನೆತ್ತಿ ದುರುಳೊನ್ಮತ್ತರ ಸದೆದು
ತ್ವದ್ಭಕ್ತರ ಮನೋರಥ ಪೂರ್ತಿಗೈವ
ಪುರುಷೋತ್ತಮ ಭವಭಯಹಾರೀ
ನಿತ್ಯನೂತನವಿಹಾರೀ–ಪ್ರಣವಸ್ತನೆ ನೀ ಕಂಸಾರೀ
ಪೃಥಕ್ ಪೃಥಕ್ ತದಾಕಾರೀ–ನರಹರೀ–ಶ್ರೀಹರೀ
ಹೃತ್ಪುಷ್ಕರದಳ ವಿಹಾರೀ
ಭಕ್ತವತ್ಸಲ ಅವ್ಯಕ್ತನೆ ಜಗದುತ್ಪತ್ತಿ ಸ್ಥಿತಿಲಯ
ಕರ್ತ ವ್ಯಾಪ್ತ ನಿರ್ಲಿಪ್ತ ಸತ್ಯಸು–
ಹೃತ್ತಮ ನೀನೆ ಮುರಾರೀ ಉತ್ತಮ ಸಮರಹಿತ ಶೌರೀ ೨

ಪಕ್ಷಿಧ್ವಜ ಸುಖಭರಿತ ವಿಹಾರ
ಕುಕ್ಷಿಯೊಳು ಅಬ್ಜಾಂಡಕೋಟಿಗಾಧಾರ
ತ್ರಕ್ಷಾದ್ಯಮರನುತ ಗುಣಾಧಾರ
ಸಾಕ್ಷಿಮೂರುತಿ ಸರ್ವಕಾಲಾಧಾರ
ವಕ್ಷದೊಳು ಶ್ರೀವತ್ಸ ಗಂಭೀರಾ ಮು-
ಮುಕ್ಷುಗಳೊಡೆಯನೆ ವೈಕುಂಠಾಗಾರ
ಅಕ್ಷರಕ್ಷರರವಿಲಕ್ಷಣಧೀರ
ರಕ್ಷಕ ಭಕುತಜನರುದ್ಧಾರ
ದಕ್ಷಿಣಾಕ್ಷಿಕಂಠ ಹೃದಯವಿಹಾರ
ರಕ್ಷಕ ತ್ರಿಜಗದಾಧ್ಯಕ್ಷ ಕರುಣಕಟಾಕ್ಷದಿ ಈ ಜಗ
ವೃಕ್ಷದೊಳು ನಿರಪೇಕ್ಷನಾಗಿ ಫಲಭಕ್ಷಿಪ ಜೀವರ
ಲಕ್ಷಕೋಟಿ ನೀ ಸಾಕ್ಷಿಯಾಗಿಹೆ ನೀ ರಕ್ಷ ಕಮಲಾಕ್ಷ
ಪಕ್ಷಿವಾಹನನೆ ನಿನ್ನ ಪರೋಕ್ಷಾಪೇಕ್ಷಿಗಳಿಗೆ ನಿನ್ನ ಕ-
ಟಾಕ್ಷವೀಕ್ಷಣದಿಂದ ಪ್ರತ್ಯಕ್ಷ ರಿಪುಶಿಕ್ಷ ಅಧ್ಯಕ್ಷ
ಸಾಕ್ಷಿಯಾಗಿಹೆ ನೀ ರಕ್ಷಾ ಮೋಕ್ಷ ಜೀವರಿಗಪರೋಕ್ಷವನಿತ್ತು ನಿ-
ಷ್ಪಕ್ಷನಾಗಿ ಜಗರಕ್ಷಿಸುತ್ತ ಸುರಪ ದಕ್ಷ ಚತು-
ರಾಕ್ಷರಸ್ಥ-ನರಹರ್‍ಯಕ್ಷ ಶರಣಜನರ ಕಲ್ಪವೃಕ್ಷ ೩

ಪಟುತರಾಂಗ ಸುಕಟಿಯ ವಿಸ್ತಾರ
ತೊಟ್ಟಿಹರತುನದ ಪಟ್ಟವಿಹಾರ
ಉಟ್ಟಿಹ ಪಟ್ಟೆ ಪೀತಾಂಬರ ಧಾರಾ
ಬಟ್ಟ ಜಾನುದ್ವಯ ಜಂಘಾಶೂರ
ಇಟ್ಟಿಹ ಸಾಲಿಗ್ರಾಮದ ಹಾರ
ದಟ್ಟವಾಗಿಹ ಕಾಲಂದಿಗೆಯ ವಿಹಾರ
ಇಟ್ಟಿಹ ಬೆರಳಲಿ ರತ್ನದುಂಗುರ
ಶ್ರೇಷ್ಟಪದದಿ ಧ್ವಜಚಿಹ್ನಾಕಾರ
ದಿಟ್ಟ ನಖಾಗ್ರದಿ ತಟಿತ ಪ್ರಭಾಕರ
ಪಟುತರ ಕರಪಾದ ಚಟುಲರೂಪ ಮನ-
ತಟದಿ ಇಟ್ಟು ಲವತೃಟಿಯು ಬಿಡದೆ ಸುರ-

ಕಟಕ ನಿತ್ಯ ಕರಪುಟದಿ ನಮಿಸಿ ಉತ್ಕಟದಿ ಗುಣಗಳ
ಪಠಣದಿಂದಿರೆ ಮುದದಿ ಪಟುತರ ಭಕುತಿಯ ಭರದೀ
ನಟಿಸುತ ತನು ಮರೆದಾತುರದಿ ಉ-
ತ್ಕಟದಲಿ ನುತಿಸುತ ಭರದೀ
ನಟಿಸುವಾ ಸ್ಮರಿಸುವಾ ಭಕುತಜನರ ಕಂಟಕವಾ ಆ
ಧಿಟರು ನೀತ ಭಟರಂದು ನಿಜ ಜಠರಾಲಯದಿ ಇಂ-
ಬಿಟ್ಟು ಭಕುತರ ಕಟಕಪೊರೆದು ಭವಾಬ್ಧಿಯ
ದಾಟಿಸುವ ಅಧ್ಯಕ್ಷ ಕುಟಿಲರ ಕಂಟಕ ಜಗಶಿಕ್ಷಾ ೪

ಸ್ವಗತಭೇದವಿವರ್ಜಿತಶೂನ್ಯ
ನಿಗಮಾತೀತ ದೇವವರೇಣ್ಯ
ಬಗೆಬಗೆ ಸ್ವರ ಶಬ್ದವಾಚ್ಯವರೇಣ್ಯ
ಅಗಣಿತಗುಣಗಣಪೂರ್ಣ ಸಂಪೂರ್ಣ
ಯೋಗಿಗಳ್ ಪೊಗಳುವ ಸವಿತೃವರೇಣ್ಯ
ಬಗೆಗಾಣರೊ ಸಾಕಲ್ಯದಿ ನಿನ್ನ
ತ್ರಿಗುಣ ವಿರಹಿತನಾಗಿಹನ್ನ
ನಗಜಾಧವ ಪಿಕನುತಪಾವನ್ನ
ದುರ್ಗಾ ಶ್ರೀ ಭೂದೇವಿಯರಮಣ
ಯುಗ ಯುಗದೊಳು ಜಗಕಾರ್ಯದಿ ಧರ್ಮ ಪ್ರಘಟ-
ನೆಗೋಸುಗ ಸ್ವಗತರೂಪ ತಾ ನೆರಹಿ ಕ್ರೂರ ಪಾ-
ಪೌಘರ ಮಡುಹಿ ಜಗದೇಕ ವೀರ ಮಿಗೆ ಜನಿಸಿದೆ ಜಗದೀಶಾ
ಸುಗುಣ ಸಾಕಾರ ಸರ್ವೋತ್ತಮ ಶ್ರೀಶಾ
ಜಗಜ್ಜಾಲ ಲೀಲಾವಿಲಾಸ ಜಗವೆಲ್ಲಾ ಈಶಾವಾಸ್ಯ
ಸೃಜಿಸಿ ನೆಲೆಸೀ ಸ್ವಪ್ರಯೋಜನ ರಹಿತನೆನಿಸೀ
ಖಗವರೂಥ ಶ್ರೀ ವೇಂಕಟೇಶ ಪನ್ನಗಗಿರಿಯೊಳು ನೆಲೆಸಿ
ಜೀವರ ಯೋಗ್ಯಸಾಧನೆ ಇತ್ತು ಮನೋಭೀ-
ಷ್ಟವನ್ನೆ ಸಲಿಸಿ ಉರಗಾದ್ರಿವಾಸವಿಠಲನೆನಿಸೀ ೫

## ೧೫

ಪಾಲಿಸೊ ಶ್ರೀನಿವಾಸ ಜಗದೀಶ ಪ

ಮೇಲುಗಿರೀಶ ಹೃತ್ಕುಮುದನಿವಾಸ
ಸತೀಶ ನೀನೆ ಅವಿನಾಶನೆ ಅನಿಶ ಅ.ಪ

ಅನಿಮಿತ್ತ ಬಂಧು ನೀ ನಿನ್ಹೊರತು ಅನ್ಯರುಂಟೇ
ಅನಪೇಕ್ಷನು ನೀ ದೀನರಕ್ಷನೆ
ನಾನೇನರ್ಪಿಸಬಲ್ಲೆ ನೀ ಬಲ್ಲೆ ಅನುದಿನ
ಮನೋವಾಚಕಾಯದಿ ನಾನೆಸಗುವುದು ಬಲ್ಲೆ ಅಲ್ಲಲ್ಲೇ
ಘನಮಹಿಮನೆ ಎನ್ನ ಮನದಲ್ಲಿ ಅನುದಿನ
ನಿನ್ನ ನೆನೆಯುವುದನೆ ಇತ್ತು ಕೊನೆಗಾಣಿಸು ಇನ್ನು ೧

ಸತ್ಯಸಂಕಲ್ಪ ನೀ ನಿತ್ಯನೂತನಪ್ರಭುವೇ
ಅತ್ಯಧಿಕದಿ ಭಕ್ತೋತ್ತಮರು
ನಿತ್ಯ ಸೇವಿಸುತಿಹರೋ ಅವರ ಭೃತ್ಯನೆನಿಪ ಸಂ-
ಪತ್ತನಿತ್ತು ಆಪತ್ತು ಹರಿಸಿ ಭಕ್ತಿಯ ನೀಡಯ್ಯ
ಮತ್ತೆ ಕರ್ಮ ಬೆನ್ಹತ್ತಿ ಹತ್ತಿ ಆಸೆ
ಪೊತ್ತು ಕೊನೆಗೆ ನಾ ಉನ್ಮತ್ತನಾದೆ ೨

ಪ್ರಣವಸ್ತಗೆ ದೇವಾ ನೀ ಪ್ರಣತ ಕಾಮದ ಕಾವಾ
ಪ್ರಣತ ಜನರ ಮುಖ್ಯಪ್ರಾಣಾಂತರ್ಗತ
ಫಣಿರಾಜಶಯ್ಯ ಹೇ ಜೀಯ್ಯ ಗುಣಮಣಿ ಶ್ರೀ ವೇಂಕಟೇಶ ಕ-
ರುಣಾಕರ ಇನ್ನು ನಿನಗೆಣೆಯ ದೊರೆಯೆ
ಮಣಿದು ಬೇಡುವೆ ನಿನ್ನ ದಣಿಸಲಾಗದು ಇನ್ನೂ
ಧಣಿಯು ನೀ ಉರಗಾದ್ರಿವಾಸ ವಿಠಲ ೩

## ೧೬

ಪಾಲಿಸೋ ಪರಿಪಾಲಿಸೋ ಪ

ಪಾಲಿಸೋ ನೀ ಕಾಲನಾಮಕ-ಶ್ರೀಲೋಲ
ಕಾಲಕರ್ಮದಲೆನ್ನಕರುಣಿಸಿ ನೀನೀಗ ಅ.ಪ

ದುಷ್ಟಜನರ ಸಂಹಾರಕ-ಸರ್ವ
ಶಿಷ್ಟಜನರ ಪರಿಪಾಲಕ-ದೇವ
ಸೃಷ್ಟ್ಯಾದ್ಯಷ್ಟಕರ್ತೃಕ-ತ್ವದ್ಭಕ್ತರಾ-
ಭೀಷ್ಟದಾಯಕಾ ೧

ಜಗದ್ಭರಿತ ಜಗದಂತರ್ಯಾಮಿ-ಸರ್ವ
ಜಗದಾದ್ಯಂತ ಭಿನ್ನನೇಮಿ-ನೀನೆ
ಸ್ವಗತಭೇದಶೂನ್ಯಮಹಿಮಾ ಇನ್ನು
ಜಗದ್ಗುರು ಮಮಕುಲಸ್ವಾಮಿ ೨

ಪರಮೇಷ್ಟಿಭವಇಂದ್ರವಂದಿತ-ಕ್ಷರಾ-
ಕ್ಷರ ಪುರುಷ ಪೂಜಿತ-ಪಾದ
ನಿರವಧಿಕಗುಣಗಣಾನ್ವಿತ ನೀನೆ
ಜರಾಮರಣನಾಶ ವರ್ಜಿತ ೩

ಮುಕ್ತಾಮುಕ್ತಾಶ್ರಯದೇವನೆ-ಸರ್ವ
ಭಕ್ತಮುಕ್ತಿಪ್ರದಾತನೆ-ವ್ಯಕ್ತಾ
ವ್ಯಕ್ತಪುರುಷದೇವನೆ ಪುರುಷ-
ಸೂಕ್ತಸುಮೇಯ ಅಪ್ರಮೇಯನೆ ೪

ಸ್ವರವರ್ಣ ಶಬ್ದವಾಚ್ಯನೆ-ದೇವ
ಸುರಾಸುರಾರ್ಚಿತ ಪಾದನೆ ಓಂ-
ಕಾರ ಪ್ರಣವ ಪ್ರತಿಪಾದ್ಯನೆ ನಿತ್ಯ
ನಿಖಿಳಾಗಮದೊಳು ಸಂಚಾರನೆ ೫

ಅಚಿಂತ್ಯಾನಂತರೂಪಾತ್ಮಕ-ನಿನ್ನ
ಭಜಕರ ಭವಬಂಧ ಮೋಚಕ-ಸರ್ವ
ಅಬುಜಾಂಡ ಕೋಟಿನಾಯಕ ನೀನೆ
ಜಗದಾದ್ಯಂತ ವ್ಯಾಪಕ ೬

ವೇದ ವೇದಾಂತ ವೇದ್ಯನೆ-ನೀನೆ
ಆದಿಮಧ್ಯಾಂತದೊಳ್ ಖ್ಯಾತನೆ ಗುರು
ಮೋದತೀರ್ಥರ ಹೃತ್ಕಾಂತನೆ
ಶ್ರೀ ವೇಂಕಟೇಶ ಉರಗಾದ್ರಿವಾಸವಿಠಲನೆ ೭

## ೧೭

ಪಾಹಿ ಶ್ರೀ ಉರಗಾದ್ರಿವಾಸವಿಠಲನೇ
ಮಧ್ವಯರಾಂತರಾತ್ಮ ವಿಠಲನೇ ಸಲಹೊ ೧

ದೇಹದಲಿ ನಲಿವ ತಾಂಡವ ಕೃಷ್ಣವಿಠಲನೆ
ನಿನ್ನಿಷ್ಟ ಭಕುತರ ಮನೋಭೀಷ್ಟವನೆ ಸಲಿಸಯ್ಯ ೨

ವಂದಿಪೆ ತಂದೆ ವೇಂಕಟೇಶ ವಿಠಲ
ಬಂದು ದಯವೀಯೋ ಜಯಾಪತಿವಿಠಲ
ಬಂಧ ಮೋಚಕ ಶಾಂತೀಶ ವಿಠಲನೆ ನಿನ್ನ
ಸಂದ ಭಕುತರ ಕಾಯ್ವ ಗಜವರದವಿಠಲ ೩

ಶೇಷ ಶಯನ ವಿಠಲ ದೋಷರಾಶಿಯ ಕಳೆದು
ಮನದಾಶಯ ಸಲಿಸಯ್ಯ ಹರಿವಿಠಲ
ಶೈಶವದಿ ಕಾಯ್ದಂತೆ ಧೃವತವರದವಿಠಲನೆ
ಈಸಮಯದಲ್ಲೆ ಗುರುವಾಸುದೇವ ವಿಠಲ ೪

ವರದ ಲಕ್ಷ್ಮೀ ರಮಣವಿಠಲನೆ ಎನ್ನ
ಅವಿದ್ಯೆಯನೆ ಹರಿಸೊ ಪ್ರದ್ಯುಮ್ನವಿಠಲ
ಪರಮಪುರುಷಾ ವರದ ವೇಂಕಟೇಶ ವಿಠಲನೆ
ಪರಮ ಸಾಧನ ನೀಡೋ ಸುಜ್ಞಾನವಿಠಲ ೫

ಶ್ರೀನಾಥವಿಠಲನು ತೈಜಸನು ನೀನೆ
ದೀನರಕ್ಷಕ ಭಾರತೀಶಪ್ರಿಯ ವಿಠಲ
ಪರಮಪಾವನ ಕಾಯೊ ವರಹವಿಠಲ ಮೂರ್ತೆ
ವರಮತಿಯ ನೀಡೊ ಆನಂದಮಯವಿಠಲ ೬

ವಿಜ್ಞಾನಮಯ ಮನದ ಅಜ್ಞಾನವನು ಹರಿಸೊ ಸ-
ರ್ವಜ್ಞ ನೀನೇ ಶ್ರೀ ಪ್ರಾಜ್ಞವಿಠಲನೆ
ಯಜ್ಞ ಭುಗ್ಯಜ್ಞ ಸಾಧಕನು ನೀ
ಜಗದ್ಭರಿತ ವಿಠಲ ನೀನೆನ್ನ ಸಲಹೊ ೭

ಶುದ್ಧ ಮೂರುತಿ ಶ್ರೀ ವಿಜ್ಞಾನಮಯ ವಿಠಲ
ಸರ್ವಕಾರ್ಯದಿ ಮನಶುದ್ಧಿಯ ನೀಡೋ
ಮಧ್ವಗುರು ಶ್ರೀಕೃಷ್ಣ ದ್ವೈಪಾಯನ ವಿಠಲ
ಮದ್ಭಾರ ನಿಳುಹಿ ನೀ ಉದ್ಧಾರ ಮಾಡೊ ೮

ರಕ್ಷಿಸೊ ಲಕ್ಷ್ಮೀಶ ವಿಠಲನೆ ಎನ್ನ ಮನ
ದಕ್ಷಿಯೊಳು ನೆಲೆಸೊ ಶ್ರೀ ವೇಂಕಟೇಶವಿಠಲ
ಕುಕ್ಷಿಯೊಳು ಬ್ರಹ್ಮಾಂಡ ರಕ್ಷಿಪ ಶ್ರೀರಮಣ ವಿಠಲ
ನಿನ್ನದಾಸದಾಸ್ಯವ ದೇಹಿ ೯

ಶರಣ ಜನ ಪ್ರೀಯ ಶ್ರೀವರದ ವಿಠಲ ದೇವಾ
ದುರಿತಾರಿ ಪನ್ನಂಗಶಯನ ವಿಠಲ
ಪರಮೋದಾರ ದಾಮೋದರ ವಿಠಲನೆ
ಗುರೋರ್ಗುರುಗೋವಿಂದವಿಠಲ ಪಾಹಿ ೧೦

ವರ ತಂದೆ ಮುದ್ದು ಮೋಹನ ವಿಠಲಾತ್ಮಕ ಶ್ರೀ
ಉರಗಾದ್ರಿ ವಾಸವಿಠಲ ಸ್ವಾಮಿ
ಶರಣರಿಗೆ ಆಯುಜ್ರ್ಞಾನ ಸಂಪತ್
ಭಕ್ತಿಸಾಧನೆಗಳಿತ್ತು ಸಲಹೊ ೧೧

## ೧೮

ಬಂದು ನಿಲ್ಲೋ ಶ್ರೀಹರೇ-ಬಂದುನಿಲ್ಲೊ ಪ

ಇಂದು ಹಿಂದು ನೀನೆಂದಿಗು ತಂದೆ ಗೋ-
ವಿಂದ ಅನಿಮಿತ್ತಬಂಧು ಕಣ್ಣಮುಂದೆ ಅ.ಪ

ಸ್ವಾಂಶದಿಂದ ಅಭಿವ್ಯಕ್ತಿಯಾದೆ ಪಂ-
ಚಾಂಶತೋರಿ ಸರಸ ಜನನ ಮಾಡಿದೆ
ಸ್ವಾಂಶನಾಗಿ ಅವತರಿಸಿ ಮೆರೆವ ಸ-
ರ್ವಾಂಶದಿಂದಿಹ ತ್ರಿಂಶ ರೂಪನೇ ೧

ಸ್ವಗತಭೇದವಿವರ್ಜಿತನೆನಿಸಿ
ತ್ರಿಗುಣಮಯದಿ ಬ್ರಹ್ಮಾಂಡ ನಿರ್ಮಿಸಿ
ಅಗಣಿತಮಹಿಮಾಧಾರನಾಗಿ ನಿಂದು
ಮಿಗೆ ಶೋಭಿಸುವ ವಿರಾಟಮೂರುತಿಯೆ ೨

ಕಾರಣನೆನಿಸಿದ ಕರ್ಮನಿವೃತ್ತಿಗೆ
ಸಾರವಾದ ಜ್ಞಾನಯೋಗ ಮಾರ್ಗವ
ನಾರದಾದಿ ಮಹಾಮುನಿಗಳಿಗರುಹಿದ
ನರನಾರಾಯಣ ಬದರಿ ಆಶ್ರಯನೇ ೩

ಹಂಸಕಪಿಲ ದತ್ತಾತ್ರೇಯ ರೂಪನೆ
ಹಂಸರಹಸ್ಯಗಳೆಲ್ಲವ ಪೇಳಿ
ಸಂಶಯ ಬಿಡಿಸಿದೆ-ಜೀವಪರಮಾತ್ಮರ
ಅಂಶಗಳರುಹಿದ ಹಂಸಮೂರುತಿಯೆ ೪

ಅಜಪಿತ ನೀ ಗಜರಾಜನ ಸಲಹಿದೆ
ಭಜಿಸಿದ ವಾಲಖಿಲ್ಯರ ಕಾಯ್ದೆ
ಅಜಹತ್ಯವು ವೃತ್ರವಧೆಯಿಂದ ಕಾಯ್ದು ಬಿ-
ಡೌಜನ ಸಲಹಿದ ಗಜರಾಜ ವರದಾ ೫

ಪುರುಹೂತನ ಅಹಂಕಾರ ಖಂಡಿಸಿ
ಕಿರುಬೆರಳಲಿ ಗೋವರ್ಧನಗಿರಿ ಎತ್ತಿ
ಪರಿಪಾಲಿಸಿ ಗೋಬೃಂದವನೆಲ್ಲವ
ಸುರರಿಂದ ಪೊಗಳಿಸಿಕೊಂಡೆ ಗೋವಿಂದ ೬

ಬುಧರರಿಯುಲು ಆ ವೇದ ವಿಭಾಗಿಸೆ
ಸದಮಲ ಮೂರುತಿ ಸತ್ಯವತಿಯೊಳು
ಉದಯಿಸಿ ಮುದದಿಂದ ಬದರಿಯ
ಸದನದಿ ಬೋಧಿಸುತ್ತಲಿಹ ಬಾದರಾಯಣನೇ ೭

ಅಖಿಳಾಂಡಕೋಟಿಬ್ರಹ್ಮಾಂಡನಾಯಕ
ವಿಕುಂಠಳೆಂಬೊ ಉದರದಿ ಜನಿಸಿ
ಲಕುಮಿರೂಪಿಯಾದ ಸುಂದರಿಯ ಕೂಡ ಭೂ-
ವೈಕುಂಠ ನಿರ್ಮಿಸಿದ ವೈಕುಂಠಮೂರುತಿಯೆ ೮

ಸತ್ಯವ್ರತನೆಂಬೊ ಮನುವಿನುದ್ಧರಿಸಿ
ಉತ್ತಮ ಔಷಧಿಗಳೆಲ್ಲವ ಸಲಹಿದೆ
ದೈತ್ಯನಾದ ಉನ್ಮತ್ತನ ಕೊಂದು
ಶ್ರುತಿಯ ತಂದಿತ್ತ ಮತ್ಸ್ಯಮೂರುತಿಯೆ ೯

ಸುರಭಿನೆವನದಿ ಶರಧಿಮಥಿಸೆ ತಾ
ಭರದಿ ಬೆನ್ನೊಳು ಧರಿಸಿಹೆ ಮಂದರ
ಸುರರಿಗಭಯ ಕರುಣಿಸಿ ಸಲಹಿದ
ಗಿರಿಧರನೆನಿಸಿದೆ ಕಮಠರೂಪನೆ ೧೦

ಪ್ರಳಯ ಜಲಧಿಯೊಳು ಇಳೆಯನು ಕದ್ದಾ
ಖಳಹಿರಣ್ಯನಾ ಶಿರವ ಚೆಂಡಾಡಿ
ಜಲಧಿಯ ಶೋಧಿಸಿ ಇಳೆಯನು ತಂದು
ಜಲಜಸಂಭವಗಿತ್ತ ಕ್ರೋಢರೂಪನೆ ೧೧

ದುರುಳತನದಿ ತನ್ನ ತರಳನ ಬಾಧಿಪ
ಹಿರಣ್ಯಕಶಿಪುವಿನ ಉದರವ ಬಗೆದು
ಶರಣನಿಗಭಯವ ಕರುಣಿಸಿ ತೋರಿದ
ಸರ್ವವ್ಯಾಪ್ತನೆಂದರುಹಿದ ನರಹರಿಯೇ ೧೨

ಬಲಿಯಿಂದಪಹೃತವಾದ ಸಾಮ್ರಾಜ್ಯವ
ಸುಲಭದಿಂದಲಿ ಪುರಂದರಗಿತ್ತು
ಸಲಹಿದೆ ಒಲಿದು ಬಲಿಯ ಭಕ್ತಿಗೆ ನೀ ಬಾ-
ಗಿಲ ಕಾಯ್ದ ವಟು ವಾಮನನೆ ೧೩

ದುರುಳತನದಿ ಆ ಹೈಹಯರೆಂಬ
ನರಪರದುರ್ಮದ ಮರ್ದಿಸಲೋಸುಗ
ಪರಶು ಪಿಡಿದು ಕ್ರೂರ ನೃಪರ ಶಿರವನೆಲ್ಲ
ತರಿದು ನಿಗ್ರಹಿಸಿದ ಭಾರ್ಗವ ಮೂರ್ತೇ ೧೪

ಶರಧಿ ಬಂಧಿಸಿ ಸೇತುಕಟ್ಟಿ ಕಪಿ-
ವೀರರೊಡನೆ ಆ ರಾವಣನಡಗಿಸಿ ಭೂ
ಭಾರವನಿಳುಹಿಸಿ ಭೂಮಿಜೆಯನು ತಂದ ಅ-
ಸುರ ಮರ್ದನ ದಾಶರಥಿ ರಾಘವ ೧೫

ವಸುಮತಿಭಾರವನಿಳುಹಲೋಸುಗ
ವಸುದೇವಸುತ ಶ್ರೀಕೃಷ್ಣನೆನುತಲಿ
ಶಿಶುಪಾಲಾದಿಗಳಾಂತಕನೆನಿಸಿದ
ಶಶಿಮುಖಿರುಕ್ಮಿಣಿ ಸಹಿತ ಶ್ರೀಕೃಷ್ಣ ೧೬

ವೇದ ಕರ್ಮಗಳಿಗನರ್ಹರೆಲ್ಲರು
ಸಾದರದಿಂದಲಿ ಅಧಮರೆಸಗುತಿರೆ
ವೇದವಿರುದ್ಧವಾದಗಳಿಂದಲೇ
ಮೋಹವ ತೋರಿದೆ ಬುದ್ಧಸ್ವರೂಪನೆ ೧೭

ದುರುಳತನದಿ ಇಳೆಯಾಣ್ಮರುಗಳು
ಕ್ರೂರತನದಿ ಪರಪೀಡಕರಾಗಿರೆ
ಪರಿಹರಿಸಲು ಭೂಭಾರಕ್ಕಾಗಿ ಅವ-
ತರಿಸಿ ಮೆರೆಯುವ ಕಲ್ಕಿರೂಪನೆ ೧೮

ಏಕರೂಪ ಅನೇಕರೂಪನೆ
ಏಕಮೇವ ನೀ ಪ್ರಕಟ ಮಾಡುವೆ
ಶ್ರೀ ಕಮಲಭವ ಪಿನಾಕಿ ಪ್ರಮುಖರು
ಏಕದೇಶದಿ ಸಾಕಲ್ಯವ ತಿಳಿಯರೊ ೧೯

ದೋಷದೂರ ಶೇಷಾಚಲವಾಸ
ಪೋಷಿಸೊ ನಿನ್ನಯ ದಾಸಜನರ ಸರ್ವ
ದೋಷಕಳೆದು ಮನೋಕಾಶದಲಿ ನಿಲ್ಲೊ
ಶೇಷಗಿರೀಶ ಶ್ರೀ ವೆಂಕಟೇಶನೆ ೨೦

## ೧೯

ಬ್ರಹ್ಮಾದಿವಂದ್ಯ ಪರಬ್ರಹ್ಮನೆ ಕಾಯೊ
ಅಹಂಬ್ರಹ್ಮಭಾವವ ಬಿಡಿಸೋ ಪ

ಬ್ರಹ್ಮನ ಜನಕನೆ ಬ್ರಹ್ಮಾಂಡದೊಡೆಯ
ಬ್ರಹ್ಮಾಂಡಾಂತರ್ಯಾಮಿ ಸಲಹೋ ಅ.ಪ

ಸತ್ಯವ್ರತನೆ ನೀ ಸತ್ಯಪರನು ಜಗ ಸತ್ಯ ಸೃಜಿಸಿ ಪೊರೆವೇ
ಸತ್ಯಾತ್ಮಕನೆ ನೀ ತತ್ತದಾಕಾರದೊಳು ನಿತ್ಯ ನಿರ್ಲಿಪ್ತನಹುದೋ ೧

ಏಕರೂಪನೆ ಅನೇಕ ರೂಪದಿ ಎಲ್ಲಾ ಲೋಕಗಳೆಲ್ಲಾ ಪಾಲಿಪೆ
ಏಕಮೇವನೆ ಮೂಲವಾದ ಪ್ರಕೃತಿಯಿಂದ
ಲೋಕಗಳನೆಲ್ಲ ಮಾಳ್ಪೆ ೨

ನಿನ್ನಾಶ್ರೈಸಿದ ಭಿನ್ನಪ್ರಕೃತಿ ತ್ರಿಭಿನ್ನಗೈಸಿ ಅಂದು ಜಗದಾ
ಘನ್ನಾಖ್ಯವೃಕ್ಷದಿ ಬನ್ನ ಸುಖವು ಎಂಬ
ಪಣ್ಣನ್ನ ನಿರ್ಮಿಸಿದೆಯೋ ೩

ಮುನ್ನ ವೃಕ್ಷಕೆ ಬೇರು ಭಿನ್ನತ್ರಿಗುಣಗಳು
ಪಣ್ಣಿಗೆ ನಾಲ್ಕು ರಸವೋ
ಜ್ಞಾನಪಂಚಕ ಬಿಳಲು
ಘನ್ನಷಡೂರ್ಮಿಗಳನ್ನೆ ನಿರ್ಮಿಸಿ ಪೊರೆವೇ ೪

ಕೊಟ್ಟೆ ಸಪ್ತಧಾತು ಅಷ್ಟವಿಟಪಿಗಳನಿಟ್ಟೆ ನವಾಕ್ಷಪೊಟರೆ
ದಟ್ಟದಶಚ್ಛದ ಕೊಟ್ಟು ಜಗವೃಕ್ಷ ಸೃಷ್ಟಿಯ ಮಾಡಿ ಮೆರೆದೇ ೫

ಅಟ್ಟಹಾಸದಿ ಫಲಮುಟ್ಟದೆ ಇಹ ಖಗಶ್ರೇಷ್ಟನೆ ನೀ ತುಷ್ಟನೋ
ಕೊಟ್ಟ ಫಲವನುಂಡಷ್ಟೂ ಸುಖಿಪ ಜೀವರೆಷ್ಟೋ ಜಗವರಿಯೇ ೬

ವ್ಯಷ್ಟೀಸಮಷ್ಟಿಯ ಸೃಷ್ಟೀಯೊಳು ನೀನೆ ಶ್ರೇಷ್ಠನೇ ವ್ಯಾಪಿಸಿರುವೇ
ದೃಷ್ಟಿಗೋಚರವಲ್ಲ ಅಷ್ಟಕರ್ತೃ ಪರಮೇಷ್ಟೀಜನಕ ಸಲಹೋ ೭

ಅಪ್ರಾಪ್ಯಮನೋವಚ ತ್ವತ್ ಪ್ರಾಪ್ತಿಎಂತಯ್ಯ ತ್ವತ್ಪ್ರಸಾದವಿಲ್ಲದೇ
ಅಪ್ರಾಬುದ್ಧನು ನಾನು ಅಪ್ರಾಕೃತನೆ
ಎನ್ನ ಬಂಧಪ್ರಕೃತಿಯನೆ ಹರಿಸೋ ೮

ದುಷ್ಟರ ಶಿಕ್ಷಕ ಶಿಷ್ಟರ ಪಾಲಕ ನಿರ್ದುಷ್ಟಫಲದಾಯಕ
ಸೃಷ್ಟಿಯೊಳಗೆ ಸ್ವನಿಷ್ಠೆಯಿಂದಲೀ ಜಗದೃಷ್ಟೀಗೋಚರನಾಗುವೆ ೯

ಪಕ್ಷೀಂದ್ರವಾಹ ತವ ಸಾಕ್ಷಾತ್ ಸ್ವರೂಪ
ಮುಮುಕ್ಷುಗಳಿಗೆ ಸಾಕ್ಷಿ
ಚಕ್ಷುಗೋಚರನಲ್ಲ ಸಾಕ್ಷೀಮೂರುತಿ
ಮನದಕ್ಷಿಯೊಳು ಪೊಳೆವೇ ೧೦

ಭಕ್ತಿವಿರಹಿತ ದುರ್ಯುಕ್ತಕಾರ್ಯದಿ ಮನ ಸಕ್ತವಾಗಿಹುದು
ನಿತ್ಯಯುಕ್ತಿಯ ತೋರಿ ಭವಮುಕ್ತನಾಗಲು
ತ್ವಧ್ಭಕ್ತಿಯ ಕೊಡು ನಿತ್ಯ ೧೧

ಹತ್ತಿಬಹುದೂ ಬೆನ್ಹತ್ತಿಕರ್ಮವು ಮತ್ತೆ ಸುತ್ತೀಸುತ್ತುತ ಜನ್ಮವಾ
ತೆತ್ತುತೆತ್ತು ಬೇಸತ್ತುಹೋಯಿತು
ಎನಗೆ ಉತ್ತಮಗತಿ ತೋರದೇ ೧೨

ಘೋರದುರಿತ ಪರಿಹಾರ ಮಾಡಿ ಪೊರೆ ಮಾರಾರಿಪಿತವಂದ್ಯ
ಬಾರಿಬಾರಿಗೆ ನಿನ್ನ ಚಾರು
ಚರಣಸ್ಮರಣಾರಾಧನೆ (ಅದು) ಸಾಕೋ ೧೩

ಸಾರಿದೆನೋ ಶ್ರೀ ವೇಂಕಟೇಶಾಭಿನ್ನ ಉರಗಾದ್ರಿವಾಸ ವಿಠಲಾ
ದಾರಿ ತೋರದು ಸಂಸಾರಶರಧಿಯೊಳು
ಪಾರುಗಾಣಿಸಿ ಪೊರೆಯೋ ೧೪

## ೨೦

ಭಕುತವತ್ಸಲ ಶೀಲಾ–ಶೇಷಗಿರಿಯ ಲೋಲಾ ಪ

ನೀ ಕರುಣಿಸೊ ಎನ್ನಾ–ಕುಲಸ್ವಾಮಿ ಘನ್ನಾ ಅ.ಪ
ಮಂದಭಾಗ್ಯನು ನಾನು ವೃಂದಾರಕ ವಂದ್ಯ
ತಂದೆ ಎನಗೆಂದೆಂದು ಅನಿಮಿತ್ತಬಂಧೂ
ವಂದಿಪೆ ನಿನ್ನಯ ದ್ವಂದ್ವಪಾದದ ಧ್ಯಾನ ಅ–
ದೊಂದನಾದರು ಇತ್ತು ಬಂಧವ ಪರಿಹರಿಸೊ
ಹಿಂದೆ ನಿನ್ನಯ ನಾಮ ಒಂದೇ
ಬಂಧಹರಿಸಿತು ಭಕುತವೃಂದಕೆ
ಅಂದು ಅವರೇನೆಂದು ಕರೆದರೋ
ಮಂದರೋದ್ಧರ ಬಂಧಮೋಚಕ ೧

ಪಾಲಿಸೋ ಗೋಪಾಲ ಸೌಶೀಲ್ಯ ಗುಣಮಾಲಾಭರಿತ
ಓಲೈಪರೋ ಮುಕ್ತಜಾಲ ನಿನ್ನ
ಕಾಲನಾಮಕ ಆಪತ್ಕಾಲಬಾಂಧವನೆಂದು
ಕಾಲಿಗೆರಗುವೆ ಕೃಪಾಳು ನೀನಲ್ಲವೆ

ಸೊಲ್ಲಲಾಲಿಸೊ ಲಕುಮಿನಲ್ಲ ನೀ
ನಲ್ಲದಲೆ ಇನ್ನಿಲ್ಲವೆಂದಿಗೂ
ಬಲ್ಲಿದರಿಗತಿಬಲ್ಲಿದನು ಆ-
ವಲ್ಲಿ ನೆನೆದರೆ ಅಲ್ಲೇ ಪೊರೆವೆ ೨

ಪುರಾಣಪುರುಷನೆ ಪರಮ ಕರುಣಿ ಎಂದು
ಪುರಾಣದೊಳು ನೀನೆ ಪ್ರತಿಪಾದ್ಯನೊ
ಕರಿ ಧ್ರುವ ಭೃಗು ಭೀಷ್ಮರ ಚರಿತೆಯ ನೋಡಲು
ಹರಿ ನಿನ್ನ ಸರಿಯುಂಟೆ ದುರಿತಾಪಹಾರದಿ
ಸ್ಮರಿಪರಘ ಪರಿಹರಿಪ ಶ್ರೀಪ
ಸುರಪಹರಮುಖವಿಬುಧವಂದ್ಯ
ದರಸುದರ್ಶನಧಾರಿ ಶ್ರೀ ವೇಂಕಟೇಶ
ಉರುಗಾದ್ರಿವಾಸ ವಿಠಲಾ ೩

## ೨೧

ಭಕುತಿಯಾಬೇಡುವೆ ಪ

ಮುಕುತರೊಡೆಯ ನಿನ್ನಪದಪಂಕಜದೊಳು ಅ.ಪ

ಬಾರಿಬಾರಿಗೆ ನಿನ್ನ ನಾಮವ ನಾ।
ಸ್ಮರಿಸಲು ದಾರಿಯ ಕಾಣೆನೊ
ಮಾರಮಣನೆ ದಯತೋರದಿರಲು ಇ-
ನ್ಯಾರಿಗೆ ಮೊರೆಯಿಡಲಯ್ಯ ಶ್ರೀಹರೇ ೧

ಘನ್ನದುರಿತಗಳಿಂದ ಹಿಂದೆ ನಾ
ಬನ್ನಪಟ್ಟು ಬಹು ಖಿನ್ನನಾಗಿಹೆ
ಸನ್ನುತಾಂಗ ಶ್ರೀನಲ್ಲನೆ ನೀ
ಇನ್ನುಮನ್ನಿಸದಿರೆ ಇನ್ನಾರಿಗೆ ಪೇಳಲೊ ೨

ಮಂಕುಮತಿಯಾಗಿದ್ದರೆನ್ನ ಹೃ-
ತ್ಪಂಕಜದೊಳಗೆ ಅಕಳಂಕನಾಗಿಹೆ

ಶಂಕೆ ಏಕೋ ನಿನ್ನ ಕಿಂಕರನಲ್ಲವೇ
ಸಂಕಟ ಹರಿಸೋ ಶ್ರೀ ವೆಂಕಟೇಶನೆ ೩

## ೨೨

ಭಯಕೃದ್ಭಯನಾಶನ ಮಾಯಾರಮಣ
ಭವಭಯಹರಣ ಪ

ಜೀಯ ಕಾಯುವುದಯ್ಯ ಪರಿಹರಿಸಯ್ಯ ತಾಪ-
ತ್ರಯ ದಯೆತೋರಯ್ಯ ಎನ್ನೊಡೆಯಾ ಅ.ಪ

ನಾನರಿಯೆ ನಿನ್ನಯ ಗುಣಗಣಾದಿಗಳ
ಅನುದಿನದಿನಾ ಅನುಭವಿಸಿ ಭವಚಕ್ರದಾಟಗಳ
ಜನುಮ ಜನುಮಾಂತರದಿ ಬಂದ ವಾಸನಾದಿಗಳ
ದೀನವತ್ಸಲ ದೂರ ನೋಡುವೆಯ ನೀನರಿಯ
ಎನ್ನನು ಉಳುಹುವ ಪರಿಯ ಎನಗ್ಯಾರಿಹರೊ
ನಿನ್ನೊರತು ಪೊರೆವರಯ್ಯ ವನಜಸಂಭವನಯ್ಯ ಜೀಯ ೧

ಆ ಕರಿ ಮಕರಿ ಪಿಡಿಯಲು ಬಂದ ಪರಿಯೇನು
ನಿಖಿಳಖಳಕುಲವೈರಿ ಶ್ರೀಹರಿ ಸಿರಿಗೆ ಹೇಳದ್ದೇನು
ಭಕುತನಾರ್ತಧ್ವನಿಯ ಕೇಳಿ ಬಂದೆಯಾ ಏನು
ನಾನು ಆಸಾಧನವನರಿಯೇನು
ಘನ್ನಮಹಿಮ ನಿನ್ನಯ ಕೀರ್ತಿಯನು ಕೇಳಿ ಬಂದೆನು
ಇನ್ನೇನು ನಿನಗೆ ಏನು ತೋರಿದಂತೆ ಮಾಡಿನ್ನು
ಎನ್ನೊಡೆಯ ನೀನೆಂದಡಿಗೆ ಬಿದ್ದಿಹೆನೊ ಇನ್ನು ೨

ಈಸಲಾರೆನು ಸಾರಿ ಈ ಭವಸಾಗರದೊಳಗೆ
ಶ್ರೀಶ ನಿನಗತಿಶಯವೆ ಕರುಣವಿಲಾಸ ತೋರೆನಗೆ
ದಾಸದಾಸದಾಸರದಾಸ್ಯ ಕೊಡಿಸೆನಗೆ
ಶ್ರೀಶ ಎನ್ನಯ ಮನದ ಕ್ಲೇಶವನೂ

ನಾಶವಗೈಸು-ನಿರಾಶ್ರಯನಾಗಿಹೆನು
ಏಸುಬಲ್ಲೆನು ಕಾಸಿನವನು
ಬೇಸರಿಸದಿರು ಇನ್ನೂ-ಮುನ್ನೂ ೩

ತಾಪತ್ರಯಗಳಿಂದನುದಿನದಿ ನಾ ನೊಂದೆ
ಶ್ರೀಪತಿಯೆ ಹೃತ್ತಾಪಕಳೆದು ಪೊರೆಯಬೇಕೆಂದೆ
ಗೋಪನಿನ್ನಯ ಶ್ರೀಪಾದದೊಳು ಮನವ ನೀಡೆಂದೆ
ಕುಪಿತವೇ ನಿನ್ನವನು ನಾನೆಂದೆ
ಭೂಪ ಆಪತ್ತೋದ್ಧಾರಕನೆಂದೆ
ಪಾಪಿಮಾನವಜನುಮದಲಿ ಬಂದೆ
ಕಾಪಾಡುವುದು ಎಂದೇ-ತಂದೇ ೪

ಭೂಸ್ಥಳದಿ ನಿಂತ ಶ್ರೀ ವೇಂಕಟೇಶ ಹರೇ
ತ್ರಿಸ್ಥಳದೊಳು ಈ ಸ್ಥಳವೆ ವೈಕುಂಠ ದೊರೆಯೆ
ವಿಸ್ತರದಿ ಮಹಿಮೆಯ ಪಾಡಿ ಪೊಗಳಲು ನಾವು ಶಕ್ತರೆ
ಸ್ವಸ್ಥಚಿತ್ತವಿಲ್ಲ ಶ್ರೀಹರೇ
ಈ ಸ್ಥಿತಿಯಲ್ಲಿ ಎನ್ನ ನೋಡುವರೆ
ದುಸ್ಥಿತಿಯುಬಡವನಕೈಯ ಬಿಡುವರೆ-ಶೌರೆ ೫

## ೨೩

ಮಂದರೋದ್ಧರಾ-ಬಂದು ಕಣ್ಣಮುಂದೆ ನಿಲ್ಲೋ ಪ

ಬಡವರೊಡೆಯನೆಂದು ನಿನ್ನ ಅಡಿಯ ಬಿಡದೆ
ನಂಬಿದೆನೋ ಕಡುದಯಾನಿಧೆ ಬಡಕುಚೇಲನ
ಪಿಡಿಯವಲಿಗೆ ಒಲಿದು ಪೊರೆದೆ ೧

ಸರ್ವಸಾರಭೋಕ್ತ ನೀನೆ ತೋರ್ವುದಿಲ್ಲ
ಕೊಡಲು ನಿನಗೆ ಸರ್ವದೇವಸಾರ್ವಭೌಮನೀ
ನೋರ್ವ ವ್ಯಾಪ್ತನಿರ್ಲಿಪ್ತ ೨

ಪ್ರಣತಕಾಮದನೆಂದು ಅಂದು ಅಣುಗಧ್ರುವನಾಕ್ಷಣದಿ
ಪೊರೆದೆ ಪ್ರಣತಾರ್ಥಿಹರನೆಂದು ನಂಬಿದೆ
ದಣಿಸಲಾಗದೋ ದೀನರಕ್ಷಕ ೩

ಮುಕುತರೊಡೆಯ ಭಕುತವತ್ಸಲ ಯುಕುತಿತೋರದೊ
ನಿನ್ನ ಧ್ಯಾನಕೇ ಶಕುತಿಯಿತ್ತು ಸಲಹೊ ಎನ್ನನು
ಸಕಲಲೋಕೋದ್ಧಾರ ಧೀರ ೪

ಎಲ್ಲಜನರ ಪೊರೆಯಲು ಶ್ರೀನಲ್ಲ ನಿಂತೆಯೊ ಶೇಷಶೈಲದಿ
ವಲ್ಲಭಾ ಶ್ರೀ ವೆಂಕಟೇಶ ನೀ-
ನೆಲ್ಲಬಲ್ಲೆನ್ನ ಸೊಲ್ಲ ಲಾಲಿಸೊ ೫

## ೨೪

ಮುನಿಯುವರೇ ಕೃಷ್ಣಾ ಮುನಿಯುವರೆ ಪ

ಮುನಿಗಳೆಲ್ಲರು ನಿನ್ನಮನೆಯವರೇನೊ
ದಣಿಸಲಾಗದೊ ನಿನ್ನ ನೆನೆವ ಭಕುತರೊಳು ಅ.ಪ

ಮುನಿಗಳು ಮನದೊಳು ಕ್ಷಣಬಿಡದಲೆ ನಿನ್ನ
ದಣಿಸಿ ಕುಣಿಸುವರೊ ಮೌನದಿಂದಲಿ ನಾ
ಮಣಿದು ಬೇಡುವೆ ಬರಿದೆ ಹಣಿದು ಬಿಸುಡುವರೆ
ಕೆಣಕಿದವರ ನೀ ಕ್ಷಣದಿ ಕಾಪಾಡಿದೆ ೧

ಬಲಿಯ ಯಾಚಿಸಿ ಭಕ್ತಿಬಲೆಗೆ ನೀ ಸಿಲುಕಿದೆ
ಶಿಲೆಯನೊತ್ತಿ ಸುಶೀಲೆಯ ಪೊರೆದೆ
ಜಲಧಿಶಯನಾ ನೀ ರಥಕೆ ಸಾರಥಿಯಾದೆ
ಛಲವೇತಕೆನ್ನೊಳು ನೀನೆ ಗತಿ ಎಂದರೆ ೨

ಎಂಜಲಾಸೆಗೆ ಸೋತು ಶಬರಿಯ ಪೊರೆದೆ
ಸಂಜೆ ಹಗಲೆನ್ನದೆ ಎಂಜಲ ಬಳಿದೆ

ಅಂಜದೆ ಅಜಾಮಿಳಗೊಲಿದೆಯೋದೇವ
ಅಂಜೆನೊ ಎಂದಿಗೂ ಕುಂಜರವರದಾ ೩

ಶಪಥಮಾಡಿ ನಿನ್ನ ಪಂಥವ ಕೆಡಿಸಲು
ಕುಪಿತನಾಗಲಿಲ್ಲ ಕುರುಪಿತಾಮಹನೊಳು
ಆಪ್ತನಿಮಿತ್ತಬಾಂಧವನೆಂದು ನಿನ್ನ
ಪ್ರಾಪ್ತಿಯ ಬೇಡಲು ಬಂದುದಕೆ ಈಗ ೪

ಶಂಕಿಸಿ ಈ ಪರಿ ಅಂಕಿತ ಪೇಳದೆ
ಬಿಂಕತನದಲಿ ಕಾಲವ ಕಳೆದೆ
ಶಂಕರನುತ ಶ್ರೀ ವೇಂಕಟೇಶ ನಿನ್ನ
ಕಿಂಕರನೆನಿಸೆನ್ನ ಸಂಕಟ ಹರಿಸೂ ೫

## ೨೫

ರಮೆಯರಸ ರಕ್ಷಿಸೋ
ನಮಿತಜನರ ಕಲ್ಪದ್ರುಮ ಸುಮನೋಹರ ಪ

ಅಮಿತ ಸುಗುಣ ಪೂರ್ಣ-ಶಮಲವರ್ಜಿತ ಹೃ-
ತ್ಕಮಲ ದ್ಯುಮಣಿ ನಿಸ್ಸೀಮಮಹಿಮ ಸಂಪೂರ್ಣಕಾಮ ಹರಿ ೧

ಸೃಷ್ಟಿಗೊಡೆಯ ಪರಮೇಷ್ಟಿಜನಕ ನಿನ್ನಿಷ್ಟರ ಅಘ ಸಂ-
ಕಷ್ಟಹರಿಸಿ ಸಂತುಷ್ಟಿಯನೀವ ನಿರ್ದುಷ್ಟಫಲಪ್ರದ ೨

ಉರಗಾದ್ರಿವಾಸವಿಠಲ ದೇವ ಹರೇ ಕರೆ ನಿನ್ನ ಬಳಿ
ಸಿರಿ ವೆಂಕಟೇಶನೆ ದೊರೆ-ಪೊರೆ ನಿನ್ಹೊರತು ನಾನರಿಯೆ ೩

## ೨೬

ವೆಂಕಟಾಚಲ ನಿವಾಸಾ-ಜಗದೀಶ
ಸಂಕಟ ಹರಿಸೋ ಶ್ರೀಶಾ ಪ

ಪಂಕಜಾಸನ ಪ್ರಮುಖ ಶಶಾಂಕಸುರವರಪೂಜಿತ
ಅಕಳಂಕಮಹಿಮ ಖಗಾಂಕ ಚಕ್ರಗದಾ
ಶಂಖಶ್ರೀಕರಕಂಜಧರಪಾಣೀ ಅ.ಪ

ಲೋಕನಾಥ ಲೋಕಬಂಧು-ದಯಾಸಿಂಧು
ಭಕುತರನಿಮಿತ್ತಬಂಧು-ಎಂದೆಂದೂ
ಭಕುತರ ಬೆಂಬಲನು ಎಂದೂ-ಇಂತೆಂದೂ
ಪಾಕಶಾಸನಪೂಜ್ಯ ಪಿನಾಕಿಪಿತ ಸುರಜೇಷ್ಠವಂದ್ಯ
ಏಕಮೇವ ನೀ ಕೈಬಿಡದೆ ಕರ್ಮ-
ಪಾಕಮಾಡಿಸೋ-ಕಾಲನಾಮಕ ೧

ಬಂಧಕಗಳ ತಂದೊಡ್ಡೀ-ಭಕುತರ ಮನ
ಒಂದೊಂದು ಪರಿ ಧೃಢಮಾಡಿ-ಪರಿಯುನೋಡಿ
ಬಂದ ಬಂಧವ ಹರಿಸಿ-ಹೃದ್ವಾಸೀ
ಹಿಂದುಮುಂದೂಕಾಣದ ಮಹ-
ಅಂಧಕಾರಣ್ಯದಲಿ ಸಲಹಿದೆ
ಬಂಧ ಮೋಚಕನಹುದೋ ಅನಾಥ
ಬಂಧು ನೀನೆಂದು ನಂಬಿದೇ ೨

ಕರುಣಾಸಾಗರನೇ ನಿನ್ನಾ-ನಾ ನಂಬಿದೆ
ಸ್ಮರಣೆಯೊಂದನೆ ಪಾಲಿಸೋ ಈ ಜನುಮದೀ
ಪರಮಸಾಧನ ಕಾಣದೇ-ಪರಿತಪಿಸುವೇ
ನಿರುತ ಭವಸಂಕೋಲೆಯಾ ಕಡಿದು
ಪೊರೆಯುವುದೋ ಶ್ರೀ ವೆಂಕಟೇಶನೆ
ಸ್ಮರಿಪರಘ ಪರಿಹರಿಪ ಶ್ರೀ-
ಉರಗಾದ್ರಿವಾಸವಿಠಲ ಪ್ರಭೋ ೩

## ೨೭

ಶರಣರ ಶರಣ್ಯ ನಾರಾಯಣ
ಭಕುತರ ಸಂರಕ್ಷಣಾ ನಾರಾಯಣ ಪ

ಖಗಪನ ಸ್ಕಂದರೋಹ ಅಘದೂರ ಅಭಯಹಸ್ತ
ಸ್ವಗತಭೇದಶೂನ್ಯ ಸರ್ವಾವಸ್ಥೆಯೊಳೆನ್ನ
ವಿಗತಕ್ಲೇಶನ ಮಾಡಿ ಸತತಕಾಪಾಡಲಿ
ನಿಗಮವಿನುತ ಜಗದಾದಿ ವಂದ್ಯನೆ ದೇವಾ ೧

ವರುಣಪಾಶಗಳಿಂ ಜಲಚರಜಂತುಗಳಿಂ ಮತ್ಸ್ಯ
ಮೂರುತಿ ತಾ ರಕ್ಷಕನಾಗಿರಲಿ
ಧಾರುಣಿ ನೆಲದೊಳು ಶ್ರೀ ವಾಮನ ಕಾಯಲಿ
ಸರ್ವಾಕಾಶದೊಳು ತ್ರಿವಿಕ್ರಮ ಕಾಯಲಿ ೨

ದುರ್ಗರಣಾಗ್ರವನ ಅರಿವರ್ಗಗಳಲಿ
ನರಹರಿದೇವ ಸಂರಕ್ಷಕನಾಗಿರಲಿ
ಮಾರ್ಗಗಳಲ್ಲಿ ಹಿರಣ್ಯಾಕ್ಷ ವೈರಿಯು ಕಾಯಲಿ
ದುರ್ಗಮಶೈಲದೊಳು ಶ್ರೀ ಭಾರ್ಗವ ರಕ್ಷಿಸಲಿ ೩

ದಾಶರಥಿ ಪ್ರವಾಸದಲಿ ನಿತ್ಯ
ದೇಶಾಂತರಗಳಲ್ಲಿದ್ದರು ಕಾಯಲಿ
ಈಶ ಶ್ರೀಮನ್ನಾರಾಯಣ ಎನ್ನ
ಕ್ರೂರ ಕರ್ಮಗಳಿಂದ ರಕ್ಷಿಸಲನುದಿನ
ನರಾವತಾರ ಎನ್ನ ಗರುವಿನಿಂ ರಕ್ಷಿಸಲಿ ೪

ವಿರೋಧಿವರ್ಗದಿ ದತ್ತಾತ್ರೇಯ ಕಾಯಲಿ
ಸರ್ವಕರ್ಮಬಂಧಜ್ಞಾನದಿಂದ ಕಪಿಲಾ
ಮೂರುತಿ ರಕ್ಷಿಸಲಿ ಅನುದಿನದಲಿ ಎನ್ನ ಸನತ್ಕೂ-
ಮಾರನು ಎನ್ನ ಕಾಯಲಿ ಕಾಮದಲ್ಲಿ ೫

ದಾನವ ಮಧುಕೈಟಭ ಹರೆ ಹಯವದನ
ಘನ್ನಪರಾಧದಿ ರಕ್ಷಕನಾಗಿರಲಿ
ಮನ್ನಿಸಿ ದೇವತೆಗಳು ಸಾಧನವೀಯಲಿ
ಸನ್ನುತಾಂಗ ಧನ್ವಂತ್ರಿಮೂರುತಿ ಹರಿ
ಎನ್ನ ರಕ್ಷಕನಾಗಿರಲಿ ರುಜೆಯೊಳು ೬

ಜ್ಞಾನರೂಪಿ ವೃಷಭ ಸೀತಾತಪದಿಂದ ಎ-
ನ್ನನುದಿನ ಈ ದ್ವಂದ್ವದಿ ಕಾಯಲಿ
ಯಜ್ಞಮೂರುತಿ ಲೋಕಾಪವಾದದಿ ಕಾಯಲಿ
ಸುಜ್ಞಬಲರಾಮನು ದುರ್ಜನರ ಭಯದಿಂ
ಅಜ್ಞಾನಿಯೆಂದೆನ್ನ ಅನುದಿನ ರಕ್ಷಿಸಲಿ ೭

ಘನ್ನಮಹಿಮ ಶೇಷ ಸರ್ಪಬಾಧೆಗಳಿಂದ
ಜ್ಞಾನದಾತೃ ಹರಿಸೇವೆಗೆ ಬರುತಿಹ ನಾನಾ
ವಿಘ್ನಗಳಿಂದ ರಕ್ಷಿಸುತಿರಲಿ ಘನ್ನ ಮ-
ಹಾ ನರಕ ಬಾಧೆಯಿಂ ತಪ್ಪಿಸಲಿ ಕೂರ್ಮಮೂರುತಿ
ಕಾಪಾಡಲಿ ನಿತ್ಯದಿ ೮

ವೇದವ್ಯಾಸನು ಶುಧ್ಧಜ್ಞಾನವನೀಯಲಿ
ಬುಧ್ಧಿಮೋಹದಿಂದ ಬುದ್ಧನುದ್ಧರಿಸಲಿ
ಹೃದಯದ ಕಲಿಭಾಧೆ ಕಲ್ಕಿ ತಾ ಹರಿಸಲಿ ೯

ಉದಯಕಾಲದಿ ಶ್ರೀ ಕೇಶವ ರಕ್ಷಿಸಲಿ ವೇಣು
ಹಸ್ತ ಗೋವಿಂದ ಸಂಗಮದಲ್ಲಿ ಪೂರ್ಣಕರುಣೆ
ಯಿಂದ ಎನ್ನ ಕಾಪಾಡಲಿ ಪೂರ್ವಾಹ್ನದಲಿ
ನಾರಾಯಣ ರಕ್ಷಿಸಲಿ ೧೦

ವಿಷ್ಣುಮೂರುತಿ ಮಧ್ಯಾಹ್ನದಿ ಕಾಯಲಿ ಮಾಧವ ಅಪ
ರಾಹ್ನದಲೆನ್ನ ರಕ್ಷಿಸಲಿ ಬಾಧೆಯಿಂ ಸಾಯಂಕಾಲದಿ
ರಕ್ಷಿಸಲಿ ೧೧

ಪ್ರದೋಷದಲಿ ಹೃಷೀಕೇಶ ರಕ್ಷಿಸಲೆನ್ನ
ಪದುಮನಾಭ ಅರ್ಧರಾತ್ರಿಯಲಿ ಸಲಹಲಿ
ಶ್ರೀಧರನೆನ್ನಪರಾತ್ರಿಯಲಿ ಸಲಹಲಿ ೧೨

ಜನಾರ್ದನನು ಎನ್ನನು ಉಷಃಕಾಲದಲಿ
ಸಂಧ್ಯಾಕಾಲದಿ ದಾಮೋದರ ರಕ್ಷಿಸಲಿ
ಕಾಲನಾಮಕ ಬೆಳಗಿನಝಾವದಿ ಕಾಯಲಿ ೧೩

ನಕ್ರನ ಹರಿಸಿದ ಚಕ್ರಾಯುಧವು ಎನ್ನ
ಶತ್ರುಬಾಧೆಗಳಿಂದ ರಕ್ಷಿಸುತಿರಲಿ
ವಿಕ್ರಮಗದೆಯು ಆಶ್ರಿತರುಪದ್ರದು-
ರಾಗ್ರಹ ನಿಗ್ರಹ ಮಾಡಲಿ ಅನುದಿನ ೧೪

ಪ್ರಮಥ ಭೂತ ಪಿಶಾಚ ಪ್ರೇತ ಭಯದಿ
ಪಾಂಚಜನ್ಯ ಶಂಖರಾಜ ರಕ್ಷಿಸಲಿ
ದುರ್ಮ್ಮನ ಶತ್ರು ಬಾಧೆಗಳಿಂದ ಖಡ್ಗವು
ಖೇಟವು ಸರ್ವ ಅನಿಷ್ಟದಿಂ ರಕ್ಷಿಸಲಿ ೧೫

ಅವನ ನಾಮರೂಪ ದಿವ್ಯಾಯುಧದ ಸ್ಮರಣೆ
ಸರ್ವ ಬಂಧಗಳೆಲ್ಲ ತಕ್ಷಣದಲ್ಲಿ ನಿವಾರಣೆಯಾಗಿ
ನಿವೃತ್ತಿಮಾರ್ಗಕ್ಕೆ ಶುಧ್ಧಭಾವ ಭಕುತಿಗೆ ಕಾರಣವು ಸತ್ಯ
ಗರುಡ ವಿಷ್ವಕ್ಸೇನ ಕಷ್ಟದಿಂದ ರಕ್ಷಿಸಲಿ ೧೬

ಹರಿಯ ವಾಹನಾದಿಗಳು ವಿಪತ್ತುಗಳ ಹರಿಸಲಿ
ಸರ್ವರಂತರ್ಯಾಮಿ ನಿನ್ನ ನಂಬಿರಲು
ಸರ್ವಭಾಧೆಗಳಲ್ಲ ಪರಿಹಾರವಾಗಲಿ ೧೭

ಸರ್ವದೇಶ ಕಾಲ ಸರ್ವಾವಸ್ಥೆಯೊಳೆನ್ನ
ಸರ್ವೋತ್ತಮ ದೇವ ಸರ್ವದಾ ರಕ್ಷಿಸಲಿ
ಸರ್ವರೊಡೆಯ ಶ್ರೀಮನ್ನಾರಾಯಣ ನಿನ್ನ
ಕರುಣ ಕವಚವು ಎನಗಿರಲನುದಿನ ೧೮

ಬಹಿರಾಂತರದಿ ಮೇಲ್ ಕೆಳಗು ಮಧ್ಯದಲ್ಲಿ ದಿಕ್ಕುವಿದಿಕ್ಕಿನೊಳು
ನಿರುತ ರಕ್ಷಕ ನರಹರಿಯೆ ನೀ ಪೊರೆ ಶ್ರೀ ವೇಂಕಟೇಶಾಭಿನ್ನ
ಉರಗಾದ್ರಿವಾಸವಿಠಲ ಸ್ವಾಮಿ ೧೯

## ೨೮

ಶರಣಾಗತರಕ್ಷಕ ಬೇಗದಿ ಬಂದು
ಮನಮಂದಿರದಿ ನಿಲ್ಲೋ ಪ

ಈ ಕರೆಕರೆ ಸಂಸಾರಶರಧಿಯೊಳು ನಿಂದೆ
ಹರಿಯೆ ನಿಲ್ಲೊಂದರಘಳಿಗೆಯಾದರೂ ಮನದಿ ಅ.ಪ

ತೋಯಜಾಂಬಕ ನಿನ್ನ ನಾನೆಂದಿಗೆ
ಕಾಯದೊಳು ಕಾಂಬೆನೊ
ಮಾಯಾರಮಣನೆ ನೀ ಮಾಯವ ಹರಿಸಯ್ಯ
ಆಯಾಸಗೊಳಿಸದೆ ಕಾಯುವುದೀಗಲೆ ೧

ನಾನಾಯೋನಿಗಳಲ್ಲಿ ನಾ ಬರಲಂಜೆನೋ
ಶ್ವಾನಸೂಕರ ಜನ್ಮದಿ ನೀನಿಟ್ಟರಾದರು
ಶ್ರೀನಿಧಿಯೆ ನಿನ್ನಯ ಸ್ಮ-
ರಣೆ ಒಂದಿದ್ದರೆ ನಾ ಧನ್ಯ ಧನ್ಯನೋ ೨

ಲೋಕಾಲೋಕೋದ್ಧಾರನೆ ನಿನ್ನಾಜ್ಞೆಯಿಂ
ಏಕಾದಶೇಂದ್ರಿಯದಿ ನಾಕೇಶ ಮೊದಲಾದ ಪಿ-
ನಾಕಿ ಪ್ರಮುಖರು ಅನೇಕ ಕಾರ್ಯವೆಸಗಿ
ಶೋಕಪಡಿಸುವರಯ್ಯ ೩

ದುರ್ಗಾಶ್ರೀರಮಣ ಎನ್ನ ಸಂಸೃತಿಯೆಲ್ಲ
ದುರ್ಗಮವಾಗಿಹುದೊ ಸ್ವರ್ಗ ಅಪ-
ವರ್ಗಪ್ರದನೆ ಎನ್ನಯ ಭವ-
ದುರ್ಗಕಡಿದು ಸನ್ಮಾರ್ಗ ಕರುಣಿಸೊ ೪

ಸ್ವಾಮಿತೀರ್ಥದಿವಾಸ ಶ್ರೀಜಗದೀಶ
ಸ್ವಾಮಿ ಶ್ರೀ ವೆಂಕಟೇಶ ಪಾಮರನಾದೆನ್ನ
ತಾಮಸ ಹರಿಸಿ ಹೃತ್ಕಮಲದಲಿ ನಿಲ್ಲೊ
ಕಮಲಾಪತಿಯೆ ದೇವ ೫

## ೨೯

ಶೇಷಾಚಲ ಮಂದಿರ-ಇಂದಿರೇಶ ಪ.

ಪೋಷಿಸೊ ನಿನ್ನಯ ಪಾದ ಸ್ಮರಣೆಯಿತ್ತು ಅ.ಪ

ಕರಣಕ್ರಿಯಕರ್ಮಂಗಳೆಲ್ಲವು ಜಡವು
ಕರಣಕ್ರಿಯ ಕರ್ಮ ನಿನ್ನ ನಿಯಮನವಿಹುದು
ನಿರುತ ಪರವಶನಾಗಿ ನಾ ಮಾಳ್ಪೆನೆಂಬ ಈ
ದುರಭಿಮಾನದಿ ನಾ ಭವಕೊಳಗಾದೆನೊ ೧

ವಿಷಯಂಗಳೆಲ್ಲ ಜ್ಞಾನಗೋಳಕದಿ ಬಂದು ಎನ್ನ
ವಿಷಮಗೊಳಿಸಿತು ಮನ ಅಭಿಮಾನದಿಂದಲಿ
ಹೃಷೀಕಪನೆ ಎನ್ನ ಮನವಿಷಮತೆಯ ಹರಿಸಿ
ಪೋಷಿಸೊ ನಿರುತ ಕೃಪಾಕರ ಮೂರುತೇ ೨

ಈಷಣತ್ರಯ ದೋಷಕ್ಲೇಶದಿ ನೊಂದು ನಿಂದೆ
ದೋಷದೂರನೆ ನಿನ್ನ ವಿಸ್ಮರಣೆಯಿಂದಲಿ
ವಾಸುಕೀಶಯನ ನೀ ಭೂತಾವಾಸ ನೀನಾಗಿರೆ
ಮೋಸಹೋದೆನ್ನನು ಪೋಷಿಸಬೇಕಯ್ಯ ೩

ಹಟದಿ ಕಪಟಾಚಾರದಿ ನಿಂದು ನಾ
ಕುಟಿಲ ಮನದಲಿ ನಿನ್ನ ಭಕುತನೆಂದೆನಿಸಿದೆ
ವಟಪತ್ರಶಾಯಿ ನೀ ಹಟ ಸಾಧನಕ್ಕೆ ಒಲಿಯೆ
ದಿಟಭಕುತಿಯ ಕೊಟ್ಟು ಕಡೆ ಹಾಯಿಸಯ್ಯ ೪

ತನುಛಾಯೆ ಕ್ರಿಯೆಯು ತನ್ನ
ತನುವನಾಶ್ರೈಸಿದಂತೆ ನಾ ನಿನ್ನ ಪ್ರತಿಬಿಂಬನಾಗಿರಲು ಸದಾ
ಎನ್ನ ಕ್ರಿಯೆಗಳೆಲ್ಲಾ ನಿನ್ನ ಆಣತಿಯಂತಿರೆ
ಘನಮಹಿಮನೆ ನಿನ್ನಾಕ್ರಿಯವನರಿಯದೆ ಹೋದೆ ೫

ಪನ್ನಗಾಚಲನಿಲಯ ಆಪನ್ನರಕ್ಷಕ ನೀನಿರೆ
ಬನ್ನಬಡಲ್ಯಾಕಯ್ಯ ಅನ್ಯರನಾಶ್ರಯಿಸಿ
ಮನೋವಾಕ್ಕಾಯ ಕರ್ಮವನರ್ಪಿಸಲು
ಸನ್ಮತಿಯನೆ ಇತ್ತು ಸತತ ಸಲಹಯ್ಯ ೬

ಸರ್ವಸತ್ತಾಪ್ರದನೆ ಸರ್ವಪ್ರವೃತ್ತಿಪ್ರದನೆ
ಸರ್ವರಂತರ್ಯಾಮಿ ಮಮಕುಲಸ್ವಾಮಿ
ಉರಗಾದ್ರಿವಾಸವಿಠಲ ನಿನ್ನಯ ದಿವ್ಯ
ಚರಣಸ್ಮರಣೆಯನಿತ್ತು ಕಾಯೊ ಕಮಲಾಕಾಂತ ೭

## ૩೦

ಶ್ರೀನಿವಾಸ-ಶ್ರೀನಿವಾಸ-ದೀನರಕ್ಷಕ
ದಾನಿ ನೀನೆಂದು ನಂಬಿದೆ ಪ

ಜ್ಞಾನಗಮ್ಯನೆ ವಾಙ್ಮನೋಮಯ
ಮಾನಿ ಮಾನಸರಾಜಹಂಸ ಅ.ಪ

ಲೋಕಭರಿತ ಶ್ರೀಕಳತ್ರ-ತ್ರಿಕಕುದ್ಧಾಮದಧಿನಾಥ
ಶ್ರೀಕಮಲಭವಾದಿವಂದಿತ
ಮುಕುತಾಮುಕುತಜನ ಸಂಸೇವಿತ
ಅಖಿಳಾಗಮಕೆ ಅತೀತ-ಶ್ರೀಕರಪಲ್ಲವಪೂಜಿತ
ಅಖಿಳಾಜಾಂಡದಿ ವ್ಯಾಪ್ತ-ಭಕುತರಗತಿಯಪ್ರದಾತ ೧

ನಿಗಮವಿತ್ತೆ ನಗವಪೊತ್ತೆ ಬಗೆದು ಬೇರ ನರ-
ಮೃಗಾಂಗನೇ ತ್ಯಾಗಿಯೊಳು ಪೋಗಿ ನೃಪರ
ನೀಗಿಸಿ ವನವನವಾ ಚರಿಸಿದೆ
ಬಗೆಬಗೆ ಆಟದಿ ಬಾಲ್ಯದಿ ಹಗೆಗಳ ಮಡುಹಿದೆ ಕಾರ್ಯದಿ
ಆಗಮಕರ್ಥಮೋಹಿಸಿ-ಜಗದೊಳುತುರಗವನೇರ್ದೆ ೨

ಅಂತರಾತ್ಮಪರಮಾತ್ಮ ಅನಂತಾನಂತರೂಪಾತ್ಮ
ಪ್ರಾಂತಕಾಣದೇ ನಿರಂತರದಿ ನಿಂತು
ಸಿರಿ ನಿತ್ಯಮುಕ್ತಳಾದಳೋ
ಕಂತುಪಿತ ಎನ್ನಂತರದಿ ನಿಂತಿಹೆ ನಿರಂತರದಿ
ಕಾಂತ ಶ್ರೀ ವೆಂಕಟೇಶನೆ-ಅಂತರ್ಬಹಿರದಿ ನಿಂತಿಹ ಪ್ರಭೊ ೩

ಅಪ್ರಮೇಯ ಸ್ವಪ್ರಕಾಶ ಅಪ್ರಾಕೃತಗುಣಗಣಾರ್ಣವ
ಸ್ವಪ್ರಯೋಜನರಹಿತ ಸತತ
ತ್ವತ್ಪ್ರಸಾದದಿಂದ ಜಗವು
ಕ್ಷಿಪ್ರದಿ ನೃಪಸಂಸ್ತುತಿಸೆ ವಿಪ್ರನಮನ ಸಂತೈಸಿದೆ
ಅಪ್ರತಿಹತಮಹಿಮನು ಸುಪ್ರೀತನು ಜನರ್ಗೆ ೪

ಪರಮ ಪುರುಷ ಪೂರ್ಣಾನಂದ ಪರಮಕರುಣಶರಧಿಯೆ
ಉರಗಾದ್ರಿವಾಸ ವಿಠ್ಠಲ ಕರಾವಲಂಬನವಿತ್ತು ಸಲಹೆಲೋ
ಪರಿಪರಿ ಎನ್ನಪರಾಧ ನೋಳ್ಪರೆ ಭೋ ಜಗದೊಡೆಯ
ಕರುಣವು ತೋರದೆ ನೀನಿರೆ ನರಪಶು ನಾನೆಂತು ಬಾಳ್ವೆನೋ ೫

## ೩೧

ಶ್ರೀ ವೇಣುಗೋಪಾಲಕೃಷ್ಣಮೂರ್ತೇ ಪ

ಕಾವುದೀತನ ನಿನ್ನ ದಾಸನೆಂದನವರತ ಅ.ಪ

ಕಾಯದಿಂದಲಿ ನಿನ್ನ ಚರಣಸೇವೆಯ ಮಾಡಿ
ತೋಯಜಾಂಬಕ ನಿನ್ನ ನಾಮ ವಾಚಿಸುತ
ಜೀಯ ನಿನ್ನಯ ಮೂರ್ತಿ ಮಾನಸದಿ ಧೇನಿಸುತ
ಈ ಉಪಾಸನೆಯನ್ನನವರತ ಕೊಡು ದೇವ ೧

ಲೌಕಿಕದಲ್ಲಿದ್ದರು ಲೋಕೈಕನಾಥನೆ
ಏಕಾಂತದಲಿ ನಿನ್ನ ನೆನಪು ಒಂದಿರಲಿ
ಮಾಕಳತ್ರನೆ ನಿನ್ನ ಸಕಲಮಂಗಳವಿತ್ತು
ಲೋಕದೊಳು ನಿನ್ನ ಭಕುತರೊಳಿಡು ಇನ್ನು ೨

ಪವನಾಂತರಾತ್ಮ ಶ್ರೀ ವೇಂಕಟೇಶಾತ್ಮಕ
ಶ್ರೀ ವೇಣುಗೋಪಾಲಕೃಷ್ಣಮೂರುತೇ
ಭಾವಶುದ್ಧನಮಾಡಿ ಶ್ರೀವರನ ದಾಸರ
ಸೇವೆಯನು ಕೊಟ್ಟು ಭವದುಃಖವನೆ ಹರಿಸೊ ೩

## ೩೨

ಸಚ್ಚಿದಾನಂದಾತ್ಮ ಪರಿಪಾಹಿ ಪಾಹಿ ಪರಮಾತ್ಮ ಪ

ಸಚ್ಚಿದಾನಂದಾತ್ಮ ಮುಕುಂದ
ಅಚ್ಯುತಾನಂತ ಗೋವಿಂದ ಆನಂದಾ ಅ.ಪ

ಧೀರಾ ಧೀರಾ ಧೀರಾ ಧೀರಾ ದೀನ
ಜನರುದ್ಧಾರ ನೀರಜಾಂಡ-
ಚರ ಬಾಹಿರಾಂತರ ನಿರುತ ಚರಾಚರದೊಳಗೆ ಸಂಚಾರಾ
ತತ್ತದಾಕಾರದಿಂದ ಸುವಿಹಾರ ಗಂಭೀರ
ಗಂಭೀರ ಗಂಭೀರ ಗಂಭೀರ
ವಾರಿವಿಹಾರ ಮಂದರೋದ್ಧಾರಾ
ಧರಣಿಸೂಕರ ನರಮೃಗಾಕಾರ ಯಾಚಕ ಧೀರ

ನರಪರ ಶಿರತರಿದೆತ್ತಿ ಬಿಲ್ಲನು ದಶಕತ್ತನು ಕ್ಷಣದೊಳು ಕ-
ತ್ತರಿಸಿ ತುರುಗಳ ಕಾಯ್ದು ಬತ್ತಲೆ ನಿಂದ
ತುರಗವ ಹತ್ತಿ ಮೆರೆದ ಆನಂದ ನಿಜಧಾಮ
ತೊರೆಯುತ ಬಂದ ಗೋವಿಂದಾ ಈ ಭೂ-
ಧರದೊಳು ನಲವಿಂದ ಕ್ರೀಡಿಪ ಪರಿಪರಿಯಿಂದ
ಸುರಮುನಿಗಣ ಸಂಸ್ತುತಿಯಿಂದ ಗೋವಿಂದ ಗೋವಿಂದ ೧

ಕಾಂತಾ ಕಾಂತಾ ಕಾಂತಾ ಕಾಂತಾ ಜಗದಾ-
ದ್ಯಂತ ನಿರುತ ನಿಶ್ಚಿಂತ ಗುಣಗಣಭರಿತ
ಸಂತತ ನಿನ್ನ ವಾಕ್ ತಂತಿನಾಮ ಧಾಮದಿ ಈ ಜಗ
ಬಂಧಿಸಿಹುದು ಆದ್ಯಂತ ಶ್ರೀಕಾಂತ ಶ್ರೀಕಾಂತ
ಶ್ರೀಕಾಂತ ಶ್ರೀಕಾಂತ
ಶ್ರೀಕಾಂತಾ ಶ್ರೀಕರಾರ್ಚಿತತ್ರಿಗುಣವರ್ಜಿತ
ಅನುಪಮಚರಿತ ಆದ್ಯಂತರಹಿತ
ಸ್ವರಸಸುಭೋಕ್ತ ಸ್ವಗತಭೇದವಿವರ್ಜಿತ
ಅಚ್ಯುತ ಮಚ್ಛಕಚ್ಛಪಾದ್ಯಜಿತಾದಿರೂಪನಿ-
ನ್ನಿಚ್ಛೆಯಂತೆ ಸಿರಿಮೆಚ್ಚಿಸಿ ನಿನ್ನ ವಿಚಿತ್ರಕರ್ಮಗಳ
ನಿಚ್ಚದಿ ನೋಡಿ ನಲವಿಂದ ಈ ಸೃಷ್ಟಿಲೀಲೆ-
ಯ ಚಂದಾ ಚತುಷ್ಟಾತು ನಿನ್ನಯ ದಯದಿಂದ
ಈ ಜಗಬಂಧಕ ಶಕುತಿ ನಿನ್ನಿಂದ ಗೋವಿಂದ ೨

ದೇವ ದೇವ ದೇವ ದೇವಾದಿವಿಜಯವಂದ್ಯಸ್ವಭಾವ
ದೇವ ನಿಜಸದ್ಭಾವ ಭಜಕರ ಕಾವ ಅಭಯವ-
ನೀವ ವಿಶ್ವಾದಿ ರೂಪದಿಂದ ಜೀವರ ಭೋ-
ಗಾವಸ್ಥಾತ್ರಯದಲಿ ನಡೆಸುತ್ತಿರುವ ಭೂ ದೇವ ಶ್ರೀ-
ದೇವ ಭೂದೇವ ದುರ್ಗಾಧವ-ದುರ್ಗಾಧವಾ
ನೀವ್ಯಾಪ್ತನು ಸರ್ವ-ತತುವರ ಕ್ರಿ-
ಯವಾ ಪ್ರೇರಿಸಿ ನಡೆವ ದೇವ ವ್ಯಾಪಾ
ರವ ಮಾಡಿ ಮಾಡಿಸಿ ಎತ್ತಲು ಚೇತನಚಿ-

ತ್ತವಿತ್ತು ಪ್ರವೃತ್ತಿಗೈಸಿ ಫಲವಿತ್ತು ಜನು-
ಮವ ಸುತ್ತಿಸುತ್ತಿಸಿತಂದಿತ್ತಪೆ ಶ್ರೀಪುರುಷೋತ್ತಮ
ನೀನಿರ್ಲಿಪ್ತ ನೀನಂಚಿತ್ಯ ಅನಂತ ಶ್ರೀ ವೇಂಕಟೇಶ
ನಿನ್ನಂಥ ಪೊರೆವರಕಾಣೆ ಉನ್ನಂತ ಉರಗಾದ್ರಿವಾಸವಿಠಲ
ಶಾಂತ ಮಹಂತ ೩

೩೩

ಹ್ಯಾಂಗಾದರ್‍ಹ್ಯಾಂಗಾಗಲಿ ಎ-
ನ್ನಿಂಗಿತವ ನೀ ಬಲ್ಲೆ ರಂಗಯ್ಯ ಪ

ರಂಗಾ ನಿನ್ನಂತರಂಗ ಏಕಾಂತ ಭಕುತರ ಸಂಗ
ಮಂಗಳಾಂಗ ನೀ ಕೊಟ್ಟು ಸಲಹೋ ಶುಭಾಂಗ ಅ-
ನಂಗಜನಕ ಭುಜಂಗಶಯನ ಮಾ-
ತಂಗವರದ ಶ್ರೀ ರಂಗನಾಥನೇ ೧

ದೇವಾ ನಾ ಸದ್ಭಾವದಲ್ಲಿ ನಿನ್ನ ಪಾದ
ಪದುಮ ನಿರುತ ಧೇನಿಸುವೆ ಪವಮಾನ
ಜೀವೋತ್ತಮ ನೀ ಧರ್ಮೋತ್ತಮನೆನ್ನುವ
ಭಾವ ಎನಗಾವಕಾಲದಿ ಇರಲಿ
ಬೇಡೆನು ಇತರ ಸಂಪದವಾ ೨

ಶ್ರೀಶಾ ಶ್ರೀ ವೆಂಕಟೇಶ ನಿರ್ದೋಷ ಗುಣ
ಸಂಪೂರ್ಣದಿಂದಿಹ ವೇಷ ಶೇಷಾದ್ರಿಮಂದಿರ
ವಾಸನೆ ನಿನ್ನ ದಾಸಜನಭವಪಾಶ ಕ್ಲೇಶ-
ನಾಶನವ ಗೈಸಿ ಸಲಹುವುದು ಶೇಷಶಯನ ಶ್ರೀ ರಂಗಶಾಯಿ ೩

## ಲಕ್ಷ್ಮೀದೇವಿ

### ೩೪

ಕಮಲೇ ಕಮಲಾಲಯೇ ಪ

ಕಮಲಭವಾದಿ ಸುರವಂದಿತಪದೆ ಅ.ಪ

ತ್ರಿಗುಣಾಭಿಮಾನಿಯೇ ನೀ-ಅಗಣಿತಗುಣಶ್ರೇಣಿಯೇ
ಖಗವಾಹನನರಾಣಿಯೇ
ಹಗಲು ಇರುಳು ಹರಿಪದಯುಗ ತೋರಿಸೇ ೧

ಲಿಂಗಶರೀರವ ಭಂಗವಗೈಯ್ಯಲು ನಿ
ನ್ನಂಗದಲ್ಲಿನಾ ಬೆವರಿನಾ
ಸಂಗವಾಗಲು ಭವಭಂಗ ಹಿಂಗುವುದು ೨

ಧಾಮತ್ರಯರೂಪಿಣೀ ಕಮಲಭವಾಂಡಕಾರಿಣೀ
ವಿಮಲಪದುಮ ಸರೋವಾಸಿನೀ
ಸ್ವಾಮಿತೀರ್ಥದಿ ನಿಂತ ಶ್ರೀ ವೆಂಕಟೇಶನ ರಾಣಿ ೩

### ೩೫

ಕ್ಷೀರಸಾಗರತನಯೆ ಮುರಹರಹರಿಯ
ಉರಮಂದಿರೆಯ ಇಂದಿರೆಯೆ ಪರಿಪಾಲಿಸನುದಿನ ಪ

ಸತ್ಯಶಾಶ್ವತನಚ್ಯುತನ ನೀ ನಿತ್ಯಸೇವಿಸಿ ಸ್ತುತ್ಯಳಾಗಿ
ನಿತ್ಯಪ್ರಕೃತಿಯ ಕೃತ್ಯನಡೆಸಿ ನಿರ್ಲಿಪ್ತಳಾಗಿಹೆ ನಿತ್ಯಮುಕ್ತಳೆ ೧

ಅಕ್ಷರಳೆ ಪಕ್ಷಿವಾಹನನ ವಕ್ಷದೊಳು ಕ್ಷಣಬಿಡದೆ ನಲಿದು
ಮೋಕ್ಷದನ ಗುಣ ಈಕ್ಷಿಪಳೆ ಜಗರಕ್ಷಕಳೆ ಕಮಲಾಕ್ಷನಾ ಪ್ರಿಯೆ ೨

ಭರದಿ ಕರವೀರಪುರದಿ ನಿಂದೆ ಉರಗಗಿರಿ ಶ್ರೀ ವೆಂಕಟೇಶನ
ಪರಮಪ್ರೀಯೆ ನಿತ್ಯಾವಿಯೋಗಿನಿ ಪದುಮಸರೋನಿವಾಸಿನಿ ೩

ಮುಕ್ತನಾಥಗೆ ಪ್ರೀಯೆ–ನೀ ಅವ್ಯಕ್ತತತ್ವಾಭಿಮಾನಿಯೇ ।
ವ್ಯಕ್ತಗೊಳಿಸೆನ್ನ ಚಿತ್ತದಲಿ ವೇದೋಕ್ತನ ನೀ ನಿತ್ಯದಲ್ಲಿ ೪

ಪುರುಷಸೂಕ್ತಸುಮೇಯ ಶ್ರೀ ಉರಗಾದ್ರಿವಾಸವಿಠಲನ
ನಿರುತ ಗುಣರೂಪಕ್ರಿಯಶರಧಿಯೊಳು
ಹರುಷದಲಿ ನಲಿದಾಡಿ ಸುಖಿಸುವ ೫

## ೩೬

ಸಹನೆ ಇನ್ನೆಷ್ಟಮ್ಮ ಶ್ರೀ ಭಾರ್ಗವಿ ಪ

ಮಹಾಲಕುಮಿ ಶ್ರೀಪತಿಗೆ ಸಮಾಸಮಳೆನಿಸಿರಲು ಅ.ಪ

ಮಡುವ ಸೇರಿದ ಒಡೆಯ ಬಿಡದೆ ಮಂದರಗಿರಿಯ
ಪೊಡವಿಬಗೆದು ಒಡೆದು ಕಡುಕ್ರೂರನಾದ
ಬಡವನಂತೆ ಬೇಡಿ ಕೊಡಲಿ ಪಿಡಿದಿಹ ಕೆಡುಕ
ಮಡದಿಯಾ ಕಳಕೊಂಡು ಕಡಹನೇರಿದ ಕ್ರಿಯಕೆ ೧

ಮುಗುಧರನ ಮಾಡಿದ ಶುದ್ಧಸ್ತ್ರೀಯರನೆಲ್ಲಾ
ಖಗಗಮನ ತಾ ತುರುಗವನು ಹತ್ತಿದಾಯೋಗ
ಭೃಗುಮುನಿಯ ಅಪಚಯಕೆ ಕರವೀರಪುರದಲಿರೆ
ನಾಗಗಿರಿಗಿಳಿದ ಪತಿಯ ಪರಿಣಯವನೆಸಗಿದೆ ೨

ನಾಗರಾಜನ ಕೂಗ ಕೇಳಿದಾಗ್ಹೇಳದಲೆ
ಬೇಗ ಸಾಗಿಬಂದಾ ಸರಸಿನಾ ಬಳಿಗೇ
ಅಂಗಜನ ವೈರಿಯ ಇಂಗಿತವನರಿತು
ಹೆಂಗಳಾರೂಪದಲಿ ಮೋಹಿಸಿದ ಮಾಯಕ್ಕೆ ೩

ಕ್ಷಮೆಯಸಾಗರಳೆ ನಿನ್ನ ಅನುಪಮ ಸನ್ಮಹಿಮೆ
ಅಮಿತವಾಗಿಹುದು ಜಗಕಾರ್ಯದಿ
ಅಮಮ ನೀನಿರಲು ನಾಭಿಕಮಲದಲಿ ಬ್ರಹ್ಮನ ಜ–
ನುಮ ತೋರಿದ ಹರಿಯ ಸ್ವರಮಣನ ಕಾರ್ಯಕೆ ೪

ಗುಣತ್ರಯಂಗಳಭಿಮಾನಿ ಶ್ರೀ ವೇಂಕಟೇಶನರಾಣಿ
ಎಣೆಯಂಟೆ ಹರಿಗುಣವನೆಣಿಸುವ ಪ್ರವೀಣೆ
ಘನ್ನ ಉರಗಾದ್ರಿವಾಸವಿಠಲನ ಕರುಣ
ಪೂರ್ಣಪಾತ್ರಳೆ ಹರಿಯ ವಕ್ಷಸ್ಥಳನಿವಾಸಿನಿಯೇ ೫

## ೩೭

## ಹನುಮ – ಭೀಮ – ಮಧ್ವರು

ಅಮಮ ಎನಿತದ್ಭುತಮಹಿಮೆ ಪೊಗಳಲನು
ಪಮ ದೇವ ಜೀವೋತ್ತಮ ಸುರಸಾರ್ವಭೌಮ ಹನುಮ ಪ

ಭೀಮ ರಿಪುಕುಲಧೂಮ ಯತಿಕುಲಸೋಮ
ಶ್ರೀಮದಾನಂದ ಮುನಿಮಹಿಮಾ ಅ.ಪ

ಜೀಯ ಈ ಪಯೋಜಾಂಡದೊಳಿನ್ನೆಣೆಯಿಲ್ಲ ಬಲದೊಳು
ಶೌರ್ಯ ಕಾಯನೋಡಲು ಆಖಣಾಶ್ಮಸಮನು
ನಿನ್ನೊಳು ಹರಿಯರೂಪಗಳೆನಿತು ಇಹುದಯ್ಯ
ಶ್ರೀಯರಸನ ಪೂರ್ಣಕರುಣಾಕಟಾಕ್ಷ
ನಿನ್ನಲ್ಲಿಹುದು ಇನ್ನೆಷ್ಟಯ್ಯ
ಶ್ರೀಯರಸ ಶ್ರೀ ಶಿಂಶುಮಾರನು ನಿನ್ನ ಮುಖಕಮಲದಲ್ಲಿಹನೂ
ವಾಯುಮೂರುತಿ ನಿನ್ನ ನಾಸಾಗ್ರದೊಳು ಶೋಭಿಪ
ಮತ್ಸ್ಯಮೂರುತಿಯು ಜೀಯ ನಿನ್ನಯ ನಾಸಪೃಷ್ಠದಿ
ಕೂರ್ಮ ಮೂರುತಿಯು ಅಲ್ಲಿ ನೆಲೆಸಿಹನು ನಯನದ್ವಯದಿ
ಕಪಿಲವಿಷ್ಣು ಶ್ರವಣದ್ವಯಗಳೊಳು ಕೃಷ್ಣರಾಮರು
ಆರ್ಯ ಧನ್ವಂತ್ರಿಯು ಗ್ರೀವಲಲಾಟದೊಳು
ನಾರಾಯಣ ಇಹನು ೧

ಅಹಹ ಬಾಹ ದುರಿತದ ರಾಶಿಗಳ ಕಾನನಕೆ ನೀನೆ ದಾವ
ಬಾಹುದ್ವಯಗಳೋಳ್ಕಲ್ಕಿ ಬುದ್ಧರೂಪಿರೆ
ಬಾಹುಬಲವಿನ್ನೆಷ್ಟಯ್ಯ ಅಹುದು ಪವನಹಸ್ತದೊಳ್

ಪಾವನ್ನ ಶ್ರೀ ಬಾದಾರಾಯಣ ಕಂಗೊಳಿಪನಯ್ಯ
ಪಾಹಿ ಪವನನೆ ಪಾದದ್ವಯದೊಳು ಹಂಸನಾಮಕ
ಶ್ರೀ ಹರಿಯು ನೆಲೆಸಿಹನು
ಅಹುದಹುದು ಕೇಶವ ನಿನ್ನ ಪಾದ
ಮಧ್ಯಸ್ಥಾನದಲಿ ಸಲೆ ಬೆಳಗುತಿಹನು
ಮಹಮಹಿಮ ನಿನ್ನಯ ಪಾದಪೃಷ್ಠದಿ
ಹೃಷೀಕೇಶ ಹರಿಯು ನಿಂತಿಹನು
ಇಹರಯ್ಯ ದಕ್ಷಿಣ ವಾಮಜಾನುಗಳಲಿ ಯಜ್ಞ ಶ್ರೀಧರರಿಹರು
ಮಹಿದಾಸವಾಮನ ಕಟಿ ಪ್ರದೇಶದಿ ದಿಟ್ಟರಾಗಿಹರು ೨

ಪ್ರಾಣ ನೀ ಜಗತ್ರಾಣ ವನಮಾಲಸ್ಕಂದನೊಳಿಂದ್ರ ಶೇಷರುಗಳ್
ಪ್ರಾಣವಾಯು ದಿಗ್ದೇವನೆ ನಿನ್ನ
ದಕ್ಷಿಣದಲ್ಲಿಹ ವನಮಾಲೆಯಲ್ಲಿಹರು
ಗುಣನಿಧಿಯೆ ತದುಪರಿ ಸೂರ್ಯವರುಣಅಶ್ವಿನಿಗಳೆಲ್ಲ
ನಿನ್ನಯ ವನಮಾಲೆಯಲಿಹರು
ಎಣಿಸೆ ದಕ್ಷಪ್ರಜಾಪತಿಯು ನಿನ್ನ
ವಾಮ ವನಮಾಲದೊಳಲ್ಲಿ ಇರುತಿಹನು
ಮಣಿದು ಸೇವಿಪ ಜಯಂತ ಮನುಯಮ
ತದನಂತರ ವನಮಾಲೆಯಲ್ಲಿಹರು
ಜಾಣ ಬೃಹಸ್ಪತಿ ದಕ್ಷಿಣ ವನಮಾಲದೊಳು
ಆಶ್ರಯಿಸಿ ತಾವಿಹರು
ಪ್ರಾಣ ಅಪಾನ ವ್ಯಾನೋದಾನ ಸಮಾನ
ವನಮಾಲದಲ್ಲಿಹರು ೩

ಬೋಧ ನಿನ್ನನಾಭೀಕಮಲದಿ
ಪದುಮನಾಭನು ಸಲೆ ಬೆಳಗುತಿಹನು
ಮಾಧವ ಮಧುಸೂದನರು ನಿನ್ನೊಳು
ವಾಮದಕ್ಷಿಣ ಕುಕ್ಷಿಯೊಳಿಹರು
ಹೃದಯಮಧ್ಯದಿ ಪ್ರಾಜ್ಞನಾಮಕ
ಹರಿಮೂರುತಿ ನಿನ್ನಾಂತರದಿಂದ ನಿಂತಿಹನು

ಪಾದಪಾರ್ಶ್ವಗಳಲ್ಲಿ ಋಷಭ ಗೋವಿಂದ ಮೂರುತಿ
ಅಲ್ಲೆ ಇರುತಿಹರು
ಮುದದಿ ನಿನ್ನಯ ವಕ್ಷದೊಳು ಶ್ರೀ ವರಹಮೂರುತಿ
ಅಲ್ಲೆ ನೆಲೆಸಿಹನು
ಎದುರಿಲ್ಲ ನಿನಗೆ ಕಪೋಲದೊಳು ಶ್ರೀ ವಾಸುದೇವನು ಇಹನು
ವಿಧಿವಾಯುಗಳು ನಿನ್ನಯ ವಾಮಭುಜದೊಳು
ಮುದದಿ ನಲಿಯುತಿಹರು
ವಿಧಿ ವಾಯುಸತಿಯರು ದಕ್ಷಿಣಭುಜದೊಳು ನುತಿಸುತಿಹರು ೪

ಪವನಶಕ್ತಿ ಹನ್ನೆರಡೆಲ್ಲ-ನಿನ್ನಯ ಹೃದಯದಾಭರಣ
ಪವನಿಸಿರ್ಪುದು ಕ್ರಮದಿ-ಶಕ್ತಿ ಪ್ರತಿಷ್ಠೆ ಸಂವಿತ್ ಸ್ಫೂರ್ತಿ
ಪ್ರವೃತ್ತಿ ಭವಹಾರಿ ನಿನಗೆ ಕಲಾವಿದ್ಯಾಮತಿ ನಿಯತಿ
ಮಾಯಾ ಕಾಲಪುರುಷ ಈ ಪರಿಯು
ಜೀವೇಶ ನಿನ್ನಯ ಮಹಿಮ ಗುಣಗಳ ಪೊಗಳಲಳವೇ
ಹರಮುಖಾದ್ಯರಿಗೆ ಜೀವರೆಸಗುವ ಕಾರ್ಯಗಳು
ಲವಲೇಶ ನಿನ್ನ ಬಿಟ್ಟು ನಡೆಯದೊ
ಪವಮಾನಮೂರುತಿ ಹರಿಯ ಕರುಣಾಕಟಾಕ್ಷ ನಿನ್ನೊಳು
ಇಟ್ಟುಇರುವುದು ಇನ್ನೆಷ್ಟೊ
ದೇವ ನಿನ್ನಯ ಖ್ಯಾತಿ ಎಷ್ಟೋ ಬಲದಿ ಶೇಷಶೈಲವ ತಂದೆ
ಕಾವುದಯ್ಯ ಶ್ರೀ ವೇಂಕಟೇಶನ ಪ್ರೇಮದ ದೂತ ೫

## ೩೮

ಪ(ಪಾ)ವನಾ ಗುರು ಪವಮಾನ ಪ

ಪಾವನ ಗುರು ಪವಮಾನ ದೇವ
ಜೀವಕೋಟಿಗಳಸಾಧನ ಆಹ
ಅವಾವಕಾಲದಿ ಸಲಹುವ ಕರುಣಿ ಕೃಪಾ
ವಲೋಕನದಿಂದ ಕಾವುದೆಮ್ಮನು ಗುರು ಅ.ಪ

ಪರಮ ಮಹಿಮ ಶ್ರೀ ಮುಕುಂದಾ ನಿಂದ
ಕರುಣಾದಿಂದ ಜನಿಸಿಬಂದ ಬಂದು
ಸರ್ವಜೀವರೊಳಾನಂದದಿಂದ
ಕರಣದೊಳು ನಿಂತಚಂದಾ ॥ಆಹ॥
ನಿರುತದಿ ಹರಿಪ್ರೇರಣೆಯಿಂದ ಕಾರ್ಯವ
ಪರಿಪರಿಮಾಡಿ ಶ್ರೀಹರಿಗರ್ಪಿಸುವ ದೇವ ೧

ತರುಚ್ಛಾಯೆಯಂತೆ ಶ್ರೀ ಹರಿಗೆ ನೀನೆ
ಪರಮ ಪ್ರತಿಬಿಂಬನಾಗೆ ಸರ್ವ
ಚರಾಚರಾದಿಗಳೊಳಗೆ ಅದರ
ದರಯೋಗ್ಯತೆಗನುವಾಗೇ ಆಹ
ನಿರುತಕಾರ್ಯವ ಮಾಳ್ವೆ ಅಣುಮಹದ್ರೂಪನೆ
ಪರಿಪರಿ ಪ್ರಾಣಾದಿಗಳ ಕಾರ್ಯ ನಿನ್ನಿಂದ ೨

ಚಕ್ರವರ್ತಿ ಆಜ್ಞೆಯಂತೇ ಪುರದ-
ಧಿಕಾರಿನಿಯಮದಂತೇ ಅದಕ-
ಧಿಕೃತರಿರುವರಂತೇ ಅಂತೆ ತ-
ತ್ವ ಕಾರ್ಯವು ನಿನ್ನಿಚ್ಛೆಯಂತೇ ॥ಆಹ॥
ಮಿಕ್ಕಾದ ತತ್ವರಿಗೆ ತಕ್ಕ ಕಾರ್ಯವನಿತ್ತು ನಿ-
ಯುಕ್ತರ ಮಾಡುವೆ ಹರಿಉಕ್ತಿಯ ಮೀರದೆ ೩

ಇಭರಾಜವರದನ ಪ್ರೀಯ ನೀನೆ
ಪ್ರಭುವಾಗಿರುವೆ ಸರ್ವಕಾಯದೊಳು
ಶುಭಾಶುಭಂಗಳ ಕಾರ್ಯ ನಿತ್ಯ
ನಿಬಿಡ ನಿನ್ನಿಂದಲೆ ಜೀಯಾ ॥ಆಹ॥
ಅಬುಜಾಂಡದೊಳಗೆಲ್ಲ ಪ್ರಬಲ ನಿನ್ನಯ ಶೌರ್ಯ
ಅಬುಜಭವನ ಪದಪಡೆವ ಪ್ರಭುವೆ ನೀನು ೪

ಪ್ರಾಣಾದೇವ ನಿನ್ನಿಂದ ಪಂಚ-
ಪ್ರಾಣಾದಿರೂಪಗಳಿಂದ ತನು
ಸ್ಥಾನದಿಭೇದಗಳಿಂದ ಜಡ

ಪ್ರಾಣಭೂತ ಪಂಚದಿಂದಾ ।।ಆಹ।।
ಕಾಣಿಸಿಕೊಳ್ಳದೆ ಜಾಣತನದಿ ಪುಣ್ಯ
ಪಾಪ ಜೀವಗೆ ಉಣಿಸುತಲಿರುವೆಯೊ ೫

ಪಾಯೂಪಸ್ಥದಿ ಅಪಾನ ಮುಖ
ನಯನ ನಾಸಿಕ ಶ್ರೋತ್ರ ಪ್ರಾಣಾ-ನಾಭಿ
ಅಯನವಾಗಿರುವ ಸಮಾನಾ ಇನ್ನು
ಪಯಣವು ನಾಡಿಯೊಳು ವ್ಯಾನ ।।ಆಹ।।
ಒಯ್ದುಕೊಡುವ ಫಲಕಾರ್ಯವೆಲ್ಲ
ಉದಾನನಿಂದ ಕೂಡಿ ಜೀಯ ನೀ ನಡೆಸೂವೆ ೬

ಸೃಷ್ಟಿಯೊಳು ನೀ ಪ್ರವಿಷ್ಟನಾಗಿ
ಸೃಷ್ಟಿಕಾರ್ಯದೊಳು ಚೇಷ್ಟಾ ಮಾಡಿ
ಸೃಷ್ಟೀಶನೊಲಿಸಿ ಪ್ರತಿಷ್ಠಾ ತತ್ವ
ಶ್ರೇಷ್ಠರೆಲ್ಲರ ಮನೋಭೀಷ್ಠ ।।ಆಹ।।
ತುಷ್ಟಿಪಡಿಸಿ ಪರಮೇಷ್ಠಿಯಾಗುವೆ ಕಪಿ
ಶ್ರೇಷ್ಠನೆ ಉರಗಾದ್ರಿವಾಸವಿಠಲನದೂತ ೭

## ೩೯

ಪವಮಾನ-ಪಾವನಾ ಜಗಜ್ಜೀವನ ಪ

ಶಿವ ಖಗಪತಿ ಅಹಿಸುರ ವಂದಿತಪದ ಅ.ಪ

ರಾವಣನು ಪವನಾ ಭಂಜನಾ
ಸೇವಾ ಕೃಷ್ಣ ಸಾಧನಾ
ಮೂವತ್ತೇಳು ಗ್ರಂಥ ರಚನಾ
ಕಾವಕರುಣಿ ಕಿಂಪುರುಷ ಖಂಡಾಧಿಪ
ಕಾವಳದೊಳು ನಿನ್ನವರನು ಕಾಯ್ದೆ
ಭೂವಳಯದೊಳವಿದ್ಯೆಯನಳಿಸಿದ
ಸದ್ವರ್ತನು ನೀನೆನ್ನನುದ್ಧರಿಸಯ್ಯ ೧

ಭರದಿ ಶರಧಿ ಹಾರಿದೆ ।
ಕೌರವ ಕಲಿಯಾ ನೀ ಗದೆಯಿಂ ಭೇದಿಸಿದೆ
ಧಾರುಣಿಯೊಳು ಯತಿಪುಂಗವನೆಂದೆನಿಸಿದೆ
ನಿರುತದಿ ರಾಮರ ಕಾರ್ಯವ ಸಾಧಿಸಿ
ವಿರಥರ ಮಾಡಿದೆ ಅತಿರಥರುಗಳ
ಹರಿಸರ್ವೋತ್ತಮ ತರತಮ ಸತ್ತತ್ವಗ
ಳರುಹಿದ ಸದ್ವರ್ತನು ನೀನೆ ೨

ರಾಮಪದಕುಮುದಸೋಮ
ಭೀಮಾ ರಿಪುಕುಲ ಧೂಮ ನಿಸ್ಸೀಮ
ಶ್ರೀಮದಾನಂದಮುನಿ ಸಾರ್ವಭೌಮ
ಭೂಮಿಜೆ ಕುರುಹ ಶ್ರೀರಾಮರಿಗರ್ಪಿಸಿ
ಅ ಮಹ ಬಕ ಕೀಚಕರ ಸಂಹರಿಸಿ
ತಾಮಸ ಗ್ರಂಥವನಳಿಸಿ ಜನಕೆ ಸದ್ಬೋಧೆ
ಇತ್ತ ಗುರು ಪೂರ್ಣಬೋಧನೆ ೩

ದ್ರೋಣಾಚಲವ ತಂದ ಪ್ರಾಣ
ಎಣೆಯುಂಟೆ ಬಲದೊಳು ನೀನೆ ನಿಸ್ಸೀಮ
ಕಾಣೆನೊ ಜಗದಿ ಪರಮಹಂಸರ ಪ್ರಾಣ
ಪ್ರಾಣಿಗಳೊಳಗೆ ಮುಖ್ಯಪ್ರಾಣನೆಂದೆನಿಸಿದೆ
ಕ್ಷೋಣಿಯೊಳು ಕುರುಸೇನೆ ಸಂಹರಿಸಿ
ಕ್ಷೀಣವಾಗುತಲಿಹ ಸುಜನರ ಮನಸ
ತ್ರಾಣ ಮಾಡಿ ಸತ್ಪ್ರಮಾಣಗಳಿತ್ತೆ ೪

ಋಜುಪುಂಗವ ದೇವಾ ಹನುಮಾ
ಗಜಪುರಾಗ್ರಣಿ ಕೌರವನಿಗೆ ನೀ ಕಾಲಯಮ
ಕುಜನರ ಮತಿಗೆ ಕುಲಿಶ ನಿಸ್ಸೀಮ
ಅಜಪದ ಪಡೆದಿ ಶ್ರೀ ಆಂಜನೇಯನೆ
ವಿಜಯಸಾರಥಿನೊಲಿಸಿ ಪೂಜಿಸಿ
ಸೃಜಿಸಿ ಮರೆದೆ ಸಚ್ಛಾಸ್ತ್ರದಿಂದ
ಈ ಚತುರ್ದಶಭುವನಾಚಾರ್ಯನೆನಿಸಿದೆ ೫

ಖೂಳ ಅಕ್ಷಕುವರನ ಹರಿಸೆ
ಖಳರ ಕಾಳೋರಗ ಬಾಧೆ ಲೆಕ್ಕಿಸದೆ
ಖಳ ಭೂದೈತ್ಯರ ಬಾಧೆ ಹರಿಸಿದೆ
ಬಾಲತನದಲಿ ಭಾನುಮಂಡಲ ಹಾರಿದೆ
ಲೋಲತನದಿ ಸತಿಗೆ ಪೂವಿತ್ತೆ
ಶೀಲಮೂರುತಿ ಮಾಯ
ಜಾಲ ಹರಿಸಿ ಜಗಖ್ಯಾತನಾದೆ ಯತಿದಶಪ್ರಮತಿಯೆ ೬

ಮಾರುತಿ ಧೀಮಂತಮೂರುತಿ
ಭಾರತದಿ ಭೂಭಾರನಿಳುಹಿದ ಖ್ಯಾತಿ
ಸಾರ ಶ್ರೀ ಬಾದರಾಯಣಗೆ ಅತಿಪ್ರೀತಿ
ಅರಿಪುರ ವೈಶ್ವಾನರನಿಗರ್ಪಿಸಿ
ವಾರಣಪುರದೊಳು ಅತಿರಥನೆನಿಸಿ
ದುರ್ವಾದಿಮತ್ತಗಜಸಿಂಹನಾಗಿ ನೀ
ನಿರ್ವ್ಯಾಜದ ಭಕ್ತಿಯ ಹರಿಗರ್ಪಿಸಿದೆಯೊ ೭

ಹನುಮಾ ಭೀಮಾ ಆನಂದ ಮುನಿಪಾ ಆ
ವಾನರಾಧಿಪಾ ಗಜಪುರಾಧಿಪ ಯತಿಪಾ
ಧ್ಯಾನನಿರತ ರಾಮಪದದಿ
ಮಾನಸದಲ್ಲಿ ಯದುಪತಿಯ ಪೂಜಿಸಿ
ದೀನಜನರುದ್ಧಾರಮಾಡಿ ಸದ್ಬೋಧೆ
ಯನಿತ್ತ ಮಧ್ವಮುನಿಯೆ ೮

ರಾಮಾಲಿಂಗನ ಮಾಡಿದಾ
ರೋಮ ರೋಮಕೆ ಕೋಟಿಲಿಂಗವ ಸೃಜಿಸಿದಾ
ಶ್ರೀಮಧ್ಯಗೇಹಾರ್ಯಸೂನುವೆಂದೆನಿಸಿದಾ
ಆ ಮಹಾರ್ಣವ ಲಂಘಿಸಿದಾ ಧೀರಾ
ಭೀಮಭಯಂಕರ ದ್ರೌಪದೀಪ್ರಿಯಕರ
ಈ ಮಹಿಮೆಯೊಳಾರೆಣೆಯೋ ನಿನಗೆ ನಿ
ಸ್ಸೀಮನಹುದೋ ಯತಿಸಾರ್ವಭೌಮನೆ ೯

ಸುರಜೇಷ್ಠಾನಸ್ತ್ರ ಮಾನಿಸಿದಾ।
ಜರೆಯನ ಸೀಳಿ ನಿರಪರ ಸೆರೆಯ ಬಿಡಿಸಿದಾ
ಧರೆಯೊಳ್ ಸುರಶ್ರೇಷ್ಠನೆಂದೆನಿಸಿದಾ
ಭರದೊಳು ಭರತಗೆ ಕುಶಲವ ತಿಳಿಸಿ
ಕರುಳಮತಿಯಿಂ ಸತಿಯ ಸಂತೈಸಿ
ದುರುಳ ಭಾಷ್ಯಂಗಳ ತತ್ತ್ವವನಳಿಸಿದಾ
ಪರಮದಯಾಂಬುನಿಧಿ ಶ್ರೀಮದಾನಂದ ೧೦

ರಕ್ಷಕ ನೀನೆ ಸಜೀವ
ಲಾಕ್ಷ್ಯಾಗಾರದ ಬಾಧೆಯಿಂ ರಕ್ಷಿಸಿ ಮೆರೆದಯ್ಯ
ಈ ಕ್ಷಿತಿಯೊಳು ದೈತ್ಯ ಶಿಕ್ಷಕನೆನಿಸಿದೆ
ತಕ್ಷಣ ಸಿಂಹಿಕೆ ಕುಕ್ಷಿಯ ಸೀಳ್ದೆ
ಭಿಕ್ಷೆಯಿಂದ ನಿನ್ನವರನು ಕಾಯ್ದೆ
ದಕ್ಷನಹುದೊ ನೀನಚ್ಯುತ ಪ್ರೇಕ್ಷರಿಂ
ದೀಕ್ಷೆಯ ವಹಿಸಿ ಸತ್ಶಿಕ್ಷಕನಾದ್ಯೊ ೧೧

ನೀ ರಂಜಿಸಿ ಮೆರೆದೆಯೊ ಗುರು ಮಧ್ವಾರ್ಯ
ಧೀರ ಕೇಸರಿಕುವರ ಪುರುಷಾಮೃಗವ ಸಾಧಿಸಿ ತಂದ
ಶೂರ ಈ ಧರಾವಲಯದಿ ತೋರಿದೆ ತತ್ವಸಾರ
ತೋರಿ ಭಕ್ತಿ ಶ್ರೀರಾಮರ ಪದದಿ ಕಂ
ಸಾರಿಯ ಸೇವಿಸಿ ಭಾರವನಿಳುಹಿದೆ
ಸಾರಿದೆ ಹರಿಸರ್ವೋತ್ತಮ
ತರತಮಭೇದವನರುಹಿದ ಪರಮದಯಾಳೊ ೧೨

ಅಂಜನೆ ಕುವರಾ ಧೀರಾ
ಕುಂಜರಪುರದ ಅರಿಗಳಂಜಿಸಿದ ಶೂರ
ಧರಣಿ ದುರ್ಮದಾಂಧರ ದುರ್ವಾದ
ಪಂಕಜೋದ್ಭವನ ಪದವ ಪಡೆವೆ ನೀ
ಅಂಜದೆ ಗದೆಯಿಂ ಕೊಂದೆ ಕುರುಪನ

ಮಂಜುಳವಾಣಿಯ ಜಗಕೆ ಇತ್ತು ನೀ
ರಂಜಿಸಿ ಮೆರೆದೆಯೊ ಗುರುಮಧ್ವಾರ್ಯ ೧೩

ರೋಚಕ ನಾಮಕನೆನಿಸಿ ಮು
ರೋಚನನ ಕಾರ್ಯವನೆಲ್ಲಾ ಕೆಡಿಸಿ
ಪಾಚಕ ಕ್ಷೇತ್ರ ಪವಿತ್ರ ಮಾಡಿದೀ
ಖೇಚರಮಾರ್ಗದಿ ನೆಗಹಿ ನಿ
ಶಾಚರರೆಲ್ಲರ ಸದೆದೆ ಗದೆಯಿಂ
ಸೂಚಿತ ಗ್ರಂಥ ವಿರಚಿಸಿ ಜಗಕೆ ನೀ
ಗೋಚರಿಸಿದೆಯೊ ತ್ರಿಜಗಾಚಾರ್ಯ ೧೪

ರಣದೊಳು ಘುಣಿವಿರೂಪಾನೆತ್ತಿದೆ
ಬಾಣಸಿಗನೆನಿಸಿ ಮತ್ಸ್ಯದೇಶವ ಸೇರ್ದೆ
ಕ್ಷೋಣಿಯೊಳು ಗುಣವಾರಿಧಿ ಎನಿಸಿದೆ
ಗಣನೆ ಇಲ್ಲದೆ ಗಿರಿಯನೆಗಹಿದೆ
ಹಣಿದೆ ಹಿಡಿಂಬಾಸುರನ ಸೀಳಿದೆ
ಮಣಿಮಂತಾದಿ ದುರಾತ್ಮರಿಗೆ
ನೀನಂತಕನೆನಿಸಿದೆ ಶಾಂತಮೂರುತಿಯೆ ೧೫

ವಿಜಯರಥಕೆ ನೀ ಕೇತುನಾಥ
ವಿಜಯಸಾರಥಿಯಾ ದೂತ
ವಿಜಯದಶಮಿಯೊಳ್ ಜನಿತ
ಸೋಜಿಗ ತೋರಿ ಸಂಜೀವನ ತಂದೆ
ಆ ಜಗಜಟ್ಟಿಗಳೆಲ್ಲರ ಸದೆದೆ
ಈ ಜಗದೊಳು ಸರಿಗಾಣೆ ಜಗದೊ
ಳು ಜಗದ್ಗುರುವಹುದೋ ನೀ ಗುರುಪೀಳಿಗೆಗೆ ೧೬

ಮಂಗಳಮೂರುತಿ ಮಾರುತಿ
ಸೌಗಂಧಿಕ ನೆವದಿ ಮರುತನೊಳ್ ನೀ ಸೆಣೆಸಿದಿ

ಶೃಂಗಾರ ಗೋಪಿನಂದನನ ಸ್ಥಾಪಿಸಿದೆ
ಭಂಗಿಸಿ ವನವನು ಉಂಗುರವನು ತಂದೆ
ಸಂಗರ ಹನುಮನೊಳ್ ನೀಡಿ ಮೋಹ ತೋರ್ದೆ
ಅಂಗಜಪಿತನ ಇಂಗಿತವರಿತು
ಭಂಗಿಸಿದೆಯೊ ದುಶ್ಯಾಸ್ತ್ರಂಗಳನು ೧೭

ಕೇಸರಿ ಕ್ಷೇತ್ರ ಜನಿತಾಭೂಸು
ರ ಸುತನ ಭೀತಿಯ ನೀ ಬಿಡಿಸಿದೆ
ವಸುಮತಿಯೊಳು ಸುರಶ್ರೇಷ್ಠನೆಂದೆನಿಸಿದೆ
ಕೋಸಲನಗರಾಧೀಶನ ಪ್ರೀಯ
ವಾಸುದೇವಗರ್ಪಿಸಿದೆ ಅಧ್ವರ್ಯ
ಶ್ರೀಶನಾಜ್ಞೆಯ ತಾ ಶಿರದಿ ಧರಿಸಿ ಪ್ರ
ಕಾಶ ಮಾಡ್ದೆ ಸರ್ವಮೂಲಗ್ರಂಥವ ೧೮

ಶ್ವಾಸನಿಯಾಮಕನೆನಿಸಿದೆ ಪ್ರ
ಯಾಸವಿಲ್ಲದೆ ವನವಾಸಂಚರಿಸಿದೆ ಶ್ರೀ
ವ್ಯಾಸರಿಗೆ ಅತಿಮೋದವ ಪಡಿಸಿದೆ
ಶ್ರೀಶನಾಜ್ಞೆಯಲ್ಲಿ ಕೀಶನಾಗಿ ನಿಂದು
ನಿಶಾಚರರೆಲ್ಲರ ಸದೆದೆ ಗದೆಯಿಂದ
ಶ್ರೀಶನೆ ಸರ್ವೋತ್ತಮನೆಂಬ
ಸತ್ಸಿದ್ಧಾಂತವ ತೋರಿದ ಸದ್ಗುಣಪೂರ್ಣ ೧೯

ಸರ್ವಜೀವರ ತ್ರಾಣ ಪ್ರಾಣ
ಗರ್ವಿಸಿದವರೊಳು ನೀ ಗರ್ವ ಹರಣ
ಸರ್ವಜ್ಞಾಚಾರ್ಯ ಗುರುವರೇಣ್ಯ
ಪೂರ್ವದೇವರ ಗರ್ವವನಿಳುಹಿ
ಸರ್ವ ಕೌರವರ ಪಡೆಯನು ಸವರಿದೆ
ಉರ್ವಿಯೊಳು ಜನಿಸಿದ ದುರ್ಮದಾಂಧರ
ಗರ್ವಹರಣಮಾಡಿ ಕರುಣವ ತೋರಿದೆ ೨೦

ಶ್ರೀರಾಮನೇಕಾಂತ ಭಕ್ತ
ಶೌರಿಯ ಆಜ್ಞೆಯಿಂ ಸರ್ವಕಾರ್ಯಸಕ್ತ
ಧಾರುಣಿಯೊಳು ಸಚ್ಛಾಸ್ತ್ರಕರ್ತ
ಹಾರಿದೆ ಶರಧಿಯ ಅಣುಮಹದ್ರೂಪದಿ
ತೋರಿದೆ ಶಕ್ತಿಯ ಗಿರಿ ತರುತೃಣವತ್
ಸಾರಿದೆ ಧರಣಿಯ ಸುರಜನುಮದಿ ನೀ
ಬೀರಿದೆ ಸುಜನಕೆ ತತ್ವಾಮೃತವ ೨೧

ಕಾಶಿ ಕಂಚುಕವ ಧರಿಸಿದೆ
ಕಾಶಿಜಾರೂಪಳ ವರಿಸಿದೆ
ಕಾಶ್ಯಪಿಯೊಳು ಕಾವಿಶಾಟಿಯ ಧರಿಸಿದೆ
ಕೀಶತನದಿ ಹರಿಕಾರ್ಯವ ಸಾಧಿಸಿ ಜಗ
ದೀಶಕುಲದೊಳು ಜನಿಸಿ ಮೆರೆದೆ ವೇದ
ವ್ಯಾಸ ಪದಕಮಲ ಮಧುಪ ಜಗಖ್ಯಾತನಾ
ದ ಶ್ರೀ ಮಧ್ವಸೂರ್ಯನೆ ೨೨

ಸುಗ್ರೀವಗಭಯ ಕೊಡಿಸಿದಾ ಮ
ಹೋಗ್ರರಾದ ದ್ವೇಷಿಗಳ ಸವರಿದಾ ಸ
ಮಗ್ರ ಸಿದ್ಧಾಂತ ರಚಿಸಿದಾ
ವಿಗ್ರಹದೊಳು ಧಾತಾಸ್ತ್ರವ ಮಾನಿಸಿ
ಅಗ್ರಹರಿಪುಕುಲ ಕಾಲನೆಂದೆನಿಸಿ
ಉಗ್ರವಾದಿಗಳ ದುರಾಗ್ರಹ ವಿಗ್ರಹ
ಶೀಘ್ರದಿ ಮಾಡಿ ಅನುಗ್ರಹವಿತ್ತೇ ೨೩

ಹೈಮಾಗಿರಿ ಶಿಖರದೊಳ್ ನಿಂತ
ಸೋಮಕುಲದೊಳು ನೀನೆ ಅತಿ ಬಲವಂತ
ಈ ಮಹಿಯೊಳು ರೌಪ್ಯಪೀಠದಿ ಜನಿತ
ರಾಮಾಂಗನೆಯ ಪ್ರೇಮದ ದೂತ
ಸೋಮಶೇಖರನ ಕೇದಾರಕಟ್ಟಿದ

ಸ್ವಾಮಿಗೆ ಪ್ರಕೃತಿಯ ಮಾಯವ ಪೇಳ್ವ
ಗೋಮಾಯಿಗಳಿಗೆಲ್ಲಾ ಕೇಸರಿ ಎನಿಸಿದೆ ೨೪

ಮಾರ್ಜಾಲರೂಪವ ಧರಿಸಿದೆ ನೀ
ನರ್ಜುನಾಗ್ರಜಾದಿಗಳ ಪೊರೆದೇ ನೀ
ಸರ್ಜಿಸಿ ತೋರ್ದೆ ಸತ್ಸತ್ವಗಳೆಲ್ಲ
ಘರ್ಜಿಸಿ ಅರ್ಜುನನ ರಥದಲಿ ನೆಲೆಸಿದೆ
ಮೂರ್ಜಗಜಟ್ಟಿಗಳೆಲ್ಲರ ಸದೆದೆ
ವರ್ಜಿಸಿ ಅರಿಷಡ್ವರ್ಗಗಳೆಲ್ಲವ
ದುರ್ಜಯವಾದಕೆ ಘರ್ಜನೆ ಮಾಡಿದೆ ೨೫

ವಾಯುಕುವರ ಅಸುವರ
ಕಾಯಜನಯ್ಯನ ಅತಿಪ್ರೀಯಾ ಶೂರಾ
ಜೀಯಾ ನೀನಿತ್ತೆ ಸದ್ಗ್ರಂಥವಿಸ್ತಾರಾ
ಕಾಯಕಭಕುತಿ ಶ್ರೀರಾಮರಿಗರ್ಪಿಸಿ
ಮಾನಸದಲಿ ಯದುಪತಿಯ ಪೂಜಿಸಿ
ಮಾಯಮತವ ನಿರಾಕರಿಸಿ ವಾಚದಿ
ಶ್ರೀಯರಸನ ಮೆಚ್ಚಿಸಿದೆ ಯತೀಂದ್ರ ೨೬

ವಾತಜಾತ ಹನುಮಂತ
ಖ್ಯಾತ ದ್ವಾಪರದಿ ದ್ರೌಪದೀಕಾಂತ
ಭೂತಳದೊಳು ಯತಿನಾಥ ಅತಿಶಾಂತ
ಧತಾಜನಕ ಶ್ರೀ ವೇಂಕಟೇಶನ
ಪ್ರೀತಿಪಾತ್ರ ಶ್ರೀಕೃಷ್ಣನಂಘ್ರಿಗೆ
ಖ್ಯಾತನಾದೆ ಸೂತ್ರಾರ್ಥಪೇಳಿ ಕೃಪಾ
ಪಾತ್ರನಾದೆ ಶ್ರೀ ಬಾದರಾಯಣಗೆ ೨೭

## ೪೦

ಪವಮಾನ–ಪಾವನಮೂರ್ತಿಯು ನೀನು ಕಾವುದೆಮ್ಮನು ಪ

ಭುವನ ಚತುರ್ದಶದಲ್ಲಿಹ ಜೀವರ
ಜೀವನ ನಿನ್ನದೋ ದೇವವರೇಣ್ಯ ಅ.ಪ

ತೃಣಜೀವರಾದಿ ಸರ್ವರೊಳು ನಿಂತು
ಗುಣಕಾಲಕರ್ಮಕ್ಕನುಗುಣನಾಗಿಹ ಫಲವ ನೀನಿತ್ತು
ಕ್ಷಣ ಬಿಡದೆಲೆ ನೀನಗಣಿತ ಕಾರ್ಯವ
ದಣಿಯದೆ ಮಾಡಿಸಿ ಧಣಿಗರ್ಪಿಸುವಿಯೊ ೧

ಶ್ರೀ ಜಗದ್ಗುರುವರೇಣ್ಯನೆ ನೀನು ಋಜುಸಾರ್ವಭೌಮ
ನಿಜ ಪಾದಾಂಬುಜವ ತೋರಿಸೊ ಇನ್ನು
ಈ ಜಗ ಕಾರ್ಯ ನಿರ್ವ್ಯಾಜದಿ ಮಾಡುತ
ನೀ ಜಯಾಪತಿಗರ್ಪಿಸಿ ಅಜಪದ ಪಡೆದೆಯೊ ೨

ಕೋಟಿತ್ರಯರೂಪನೆ ಕಾಯುವುದಯ್ಯ
ದಾಟಿಸು ಭವಶರಧಿಯಾ
ಪಾಟುಪಟ್ಟದ್ದೆಲ್ಲ ನೀನರಿಯಾ
ಸಾಟಿಯುಂಟೆ ಲಲಾಟನೇತ್ರ ಬೆ
ನ್ನಟ್ಟಿ ಬರಲು ಕೇದಾರಕೆ ಅಟ್ಟಿದೆ ೩

ಮರಣ ಜನುಮಂಗಳು ಬಂದರೆ ಬರಲಿ ಹರಿಗುರುಗಳಲಿ
ಸ್ಮರಣೆಯು ತಪ್ಪದೆ ನಿಶ್ಚಲವಿರಲಿ
ಉರುತರ ಹರಿಸರ್ವೋತ್ತಮವೆಂಬುವ
ತರತಮ ಭೇದವು ನಿರುತವು ಇರಲಿ ೪

ಶ್ರವಣ ಮನನಾದಿ ಭಕುತಿಯನ್ನು ಪವಮಾನ
ನೀ ಕೊಡು ಅನುಮಾನಿಸಬೇಡವೋ ನೀ ಇದಕ್ಕಿನ್ನು
ಭವಮೋಚಕ ಶ್ರೀ ವೇಂಕಟೇಶ
ಇನ್ನೊಳಹೊರಗಿಹನೆಂಬುವುದನು ತೋರೋ ೫

## ೪೧

ಪ್ರಾಣರಾಯನೆ ನಿನಗೆಣೆಯುಂಟೆ ಪಾಲಿಪ ಕ
ರುಣಾಶಾಲಿಗಳನ್ನು ಪಣೆಗಣ್ಣ ಮೊದಲಾದಮರ
ಗಣದೊಳು ಇನ್ನು ನಾ ಕಾಣೆ ಮುನ್ನ ಪ

ಗುಣನಿಧಿಯೆ ಎಣೆಯಿಲ್ಲ ನಿನ್ನಯ
ಅಣು ಮಹಘನರೂಪ ಕ್ರಿಯಗಳು
ಕ್ಷಣಬಿಡದೆ ನೀನಖಿಳಜೀವರ ತ್ರಿ-
ಗುಣ ಕಾರ್ಯವ ಗೈವೆ ಮುಖ್ಯ ಅ.ಪ

ಅನುಚಿತೋಚಿತ ಕರ್ಮ ಜೀವರೊಳು
ನೀನೆಸಗಿ ತೋರ್ಪುದೆ ಧರ್ಮ ನಾನರಿಯೆ ಪ್ರತಿ
ಕ್ಷಣದಿ ಮಾಡುವ ಕರ್ಮ ಎನ್ನನುಭವಕೆ
ತಂದಿಡುವುದೇ ನಿನ್ನ ಧರ್ಮ ನಾ ಕಾಣೆ ಮರ್ಮ
ಜನುಮ ಕೋಟಿಗಳಿಂದಲಿ ಅನುಸರಿಸಿ ಬಂದಿಹ
ಎನ್ನ ಕರ್ಮವ ಅನಿಲದೇವ ನಿನ್ನಿಂದ ಅಲ್ಲದೆ
ಎನಿತು ಇತರನಿಮಿಷರು ಮಾಳ್ಪರು
ಜ್ಞಾನದಾಯಕ ನೀನೆ ಎನ್ನಯ
ಮನದಲಿಹ ಜಂಜಡವ ಕಳೆದು
ಹೀನಕರ್ತನು ತಾನು ಅಲ್ಲದೆ
ನೀನೆ ಸರ್ವರ ಕರ್ತನೆಂಬುವ
ಜ್ಞಾನಿ ಧ್ಯಾನ ಸ್ಮರಣೆಯನು ಸಾನುರಾಗದಿ ಇತ್ತು
ನಿನ್ನ ಮತಾನುಗರಲ್ಲನವರತ ಇಡು
ಅನೇಕ ಜನುಮಜನುಮಾಂತರದೊಳು ೧

ಶ್ವಾಸನಾಮಕ ನೀನು ಜಗದೀಶ ನೀ ಜೀ-
ವೇಶ ಸರ್ವಶಕ್ತಾನು ನೀ ತಾಸಿಗೊಂಭೈನೂರು
ಶ್ವಾಸಗಳನ್ನು ಈ ಶರೀರದಿ ಜೀವರಿಂ

ದೆಸಗುವೆಯೊ ನೀನು ಉಸುರಲೇನಿನ್ನು
ವಾಸುದೇವಗೆ ಪ್ರೀತನಾಗಿ ಅ-
ಶೇಷತತ್ತ್ವಕ್ಕೀಶನಾಗಿಹೆ
ವಾಸವಾದಿಗಳೆಲ್ಲರೊಳು ಇನ್ನು
ಈಸುಭಾಗ್ಯವು ಕಾಣಲಿಲ್ಲ
ಏಸುಕಾಲಕು ನೀನೇ ಗತಿಯೆಂದು
ಈಶ ಶೇಷ ಖಗೇಶ ಪ್ರಮುಖರು
ದಾಸರಾಗಿಹಗರಯ್ಯ ಬಿಡದೆ
ದೇಶಕಾಲಗಳಲ್ಲಿ ನಿನ್ನೊಳು
ಸೂಸುವಾ ಅತಿಭಕುತಿಯಿಂದಲಿ
ಈಶ ತಪದಲಿ ನಿನ್ನ ಮೆಚ್ಚಿಸೆ
ಶೇಷಪದವಿಯ ಕೊಟ್ಟು ಶ್ರೀಶ-
ನ ಶಯನಸೇವೆ ಸಂಪದವನಿತ್ತೆ ೨

ಭಕುತ ಜನರ ಬಂಧೂ ಶ್ರೀಹರಿಗೆ ನೀ ಪ್ರಥ-
ಮಾಂಗನಹುದೆಂದೂ ಈ ಸಕಲ
ಜಗದಾ ಚೇಷ್ಟಪ್ರದನೆಂತೆಂದೂ ನೀನೆ
ಭಗವತ್ಕಾರ್ಯಸಾಧಕನೆಂದೂ ಸಾರುತಿದೆ ಶ್ರುತಿ ಇಂದೂ
ಲೋಕಮಾತೆಗೆ ನಮಿಸಿ ದಶಶಿರ
ನಂದನನ ಸಂಹರಿಸಿ ಮಹದಾನಂದ
ನೀ ವನವ ಭಂಗಿಸಿ ರಘುನಂದನಗೆ
ಮುದದಿಂದ ವಂದಿಸಿ ನೊಂದ ದ್ರು-
ಪದನಂದನೇಯಳಾ-
ನಂದಪಡಿಸಲು ಕೊಂದೆ ಕೌರವ
ವೃಂದವೆಲ್ಲವ ಸವರಿ
ನಂದನಂದನಿಗಾನಂದ ಪಡಿಸಿದೆ
ಇಂದಿರೇಶ ಶ್ರೀ ವೇಂಕಟೇಶನೆ
ಎಂದಿಗೂ ಪರದೈವವೆಂದು
ಬಂದು ಬೋಧೆಯನಿತ್ತ ಆ-
ನಂದತೀರ್ಥ ನೀ ಸಮರ್ಥಾ ೩

## ೪೨

ಪ್ರಾಣ ಸಂಕರುಷಣಭವ ಜಗತ್ರಾಣ
ಅಣುಮಹದ್ಘನಗುಣಗಣನೀನೆ ಮುಖ್ಯಪ್ರಾಣ ಪ

ತೃಣಜೀವರಾದಿ ಜಂಗಮಜಡದೊಳು
ಪೂರ್ಣನಹುದೊ ಶ್ರೀಹರಿಪ್ರೇರಣೆಯಿಂದ ಅ.ಪ

ಪ್ರಾಣ ನಿನ್ನಿಂದಲೆ ಸರ್ವರತ್ರಾಣ ಪ್ರವೃತ್ತಿಯೂ ನಿನ್ನಯ
ಆಣತಿಯಂತಿರ್ಪುದಯ್ಯಾ ಮುಖ್ಯ
ಪ್ರಾಣನೆ ತ್ರಿವಿಧಜೀವರೊಳನವರತದಿ ನೀ ನೆಲೆಸಿ
ಏನೇನು ಮಾಳ್ಪಕರ್ಮಂಗಳೆಲ್ಲವು ನಿನ್ನಿಂದ್ಯೆಯ್ಯಾ
ಪ್ರಾಣೋಪಾನವ್ಯಾನೋದಾನಸಮಾನರ
ತ್ರಾಣ ನಿನ್ನದೊ ಮುಖ್ಯಪ್ರಾಣದೇವನೆ
ಪ್ರಾಣಿಗಳಲಿ ಪಂಚಪ್ರಾಣರೂಪದಲಿಹೆ
ಪ್ರಾಣಿಕಾರ್ಯಕ್ಕೆಲ್ಲ ನೀನಾಧಾರನೋ ೧

ಸ್ಥೂಲಶರೀರದೊಳು ಪಾಯೂಪಸ್ಥದಿ ಸ
ಕಲಮಲಗಳಾದ್ಯಪಸರಣಾದಿಗಳಿಂದ ರಕ್ಷಣೆ
ಎಲ್ಲಪಾನನಿಂದಲಿ ಮಾಡಿಸಬಲ್ಲೆ
ಮುಖನಾಸಿಕನೇತ್ರದಿ ಎಲ್ಲಶ್ವಾಸಾದಿಗಳಾಡಿಸಬಲ್ಲೆ
ಕಾಲಕಾಲಕುಶ್ವಾಸಪ್ರಣಯದಿಂದಲಿ
ಎಲ್ಲಕಾಲದೊಳು ಪ್ರಾಣನೆಂಬರೋ
ಎಲ್ಲ ಜೀವರೊಳು ನಿಂತು ನಡೆವೆ ಶ್ರೀ-
ನಲ್ಲನಾಜ್ಞೆಯಂತನುವರ್ತಿಸುವೆಯೊ ೨

ಎಪ್ಪತ್ತೆರಡು ಸಾವಿರವಿಹ ನಾಡಿ ಒಡಗೂಡಿ ಅನುದಿನ
ಇಪ್ಪ ಈ ಜಡದೇಹವನೇ ನೋಡಿ ವ್ಯಾಪಿಸಿ ವ್ಯಾನನಿಂದ
ರಸಗಳಾ ನಾಡಿಗೆ ಕೊಂಡೋಡಿ

ತಪ್ಪದೆ ನಾಡಿಕಾರ್ಯವನೆಲ್ಲ ಕ್ರಮದಿ ಮಾಡಿ
ಒಪ್ಪೆ ಉದಾನಸುಷುಮ್ನನಾಡಿಯು
ಒಪ್ಪಿಸುವೆ ಸುಖದುಃಖಫಲವನು
ಪಾಪಪುಣ್ಯದಂತೆ ಜೀವರಿಗೆ ಲೋಕವ
ಪ್ರಾಪಿಸಿಕೊಡುವಿಯೊ ಆಜ್ಞೆಯಿಂ ೩

ಭುಕ್ತವಾದನ್ನವೆ ಮೊದಲಾದ್ದೆಲ್ಲ
ತತ್ತಸ್ಥಳಗಳಿಗೊಯ್ವಪ್ರಯುಕ್ತ
ಪ್ರಾಣಾಪಾನರಮಧ್ಯಪ್ರಾದೇಶವಾದ
ನಾಡಿಯಲಿದ್ದ ಸಮಾನವಾಯುವಿಂ ಶಕ್ತಿಯಸಕಲಾವಯವಕೀವ
ಶಕ್ತಿಯಿಲ್ಲದತ್ಯಲ್ಪಜೀವರಿಗೆ
ಶಕ್ತಿಯಿತ್ತು ಜ್ಞಾನೇಂದ್ರಿಯ ವೃತ್ತಿಯ
ವ್ಯಕ್ತಮಾಡಿ ಫಲವಿತ್ತು ಪೊರೆವೆಯೋ
ಮುಕ್ತರೊಡೆಯನಿಗೆ ಅತ್ಯಂತ ಹಿತಕರ ೪

ಪ್ರಾಣಾ ನೀ ಬಾಹ್ಯಾದಿತ್ಯನೊಳಿದ್ದು ಅಧ್ಯಾತ್ಮನೆನಿಸಿ
ಕಣ್ಣಿನೊಳಾದಿತ್ಯನಲಿ ಬಂದು ಅಧಿಭೂತನೆನಿಸಿ
ಕಣ್ಣಿನಭಿಮಾನಿಪ್ರಾಣನ ಸೇರಿ–ಅಧಿದೈವವೆಂದು
ಎಣಿಪರೊ ಈ ವಿಧ ತ್ರಯಗತನೆಂದು
ತೃಣ ಮೊದಲಾದ ಸರ್ವಜೀವರ
ಪ್ರಾಣಪಂಚರೊಳು ಮುಖ್ಯಪ್ರಾಣನೆ
ಫಣಿಗಿರೀಶ ಶ್ರೀ ವೆಂಕಟೇಶನ–
ಪ್ಪಣೆಯಂತೆ ನೀ ನಿಯಾಮಕನಾಗಿಪೆ ೫

## ೪೩

ಪ್ರಾಣಾ ನೀ ಕಲ್ಯಾಣಗುಣ ಗೀರ್ವಾಣಾದ್ಯರ ಮಣಿ
ಜೀವಗಣ ಗುಣಕಾರ್ಯತ್ರಾಣ ಅಗಣಿತಮಹಿಮ ಪ

ಇನ್ನೆಣೆಯುಂಟೆ ತ್ರಿಭುವನ ತ್ರಾಣ ನಿನ್ನ
ಆಣತಿಯಂತೆ ಪಂಚಪ್ರಾಣ

ಅಣುಘನತೃಣ ಮೊದಲು ಪಣೆಗಣ್ಣ ಸುರ
ಗಣಾದ್ಯಮರರೊಳಗನವರತ ನೀ ಘನ್ನ
ಫಣಿರಾಜಗುರು ನಿನಗೆಣೆಯುಂಟೆ ನೀರಜಭ
ವಾಂಡದೊಳು ಶ್ರೀ ಮುಖ್ಯಪ್ರಾಣ ಬಾದರಾ
ಯಣನನುಗ ಆನಂದಗುಣಭರಿತ ಕೃತಿರ–
ಮಣನ ಸುತೆ ರಮಣ ನೀ ಕ–
ರುಣಿಸಿದರುಂಟು ಶ್ರೀಹರಿಯ ಕರುಣಾ ಅ.ಪ

ಮರುತಾ ಶ್ರೀ ಹರಿಯಿಂದಲನವರತ ಪ್ರೇರಿತನಾಗಿ
ನಿರುತಾ ಜಗಕಾರ್ಯದೊಳು ಸತತ ನೀ ಬಿಡದಿರೆಡರಿಲ್ಲ
ಮರುತಾ ಜಗಚೇಷ್ಟಪ್ರದ ನೀನಹುದೊ ಶಕ್ತಾ
ವರ ಮಂತ್ರಿಯಾಗಿ ನೀ ಹರಿಗೆ ಭಕ್ತಾಗ್ರಣಿಯೆ ಯಂತ್ರೋ–
ದ್ಧಾರ ಶ್ರೀ ಹನುಮಂತಾ ಬಲಭೀಮ ಗುರುಮಧ್ವಶಾಂತಾ ತ್ರಿಕೋ
ಟಿರೂಪಧರ ಖ್ಯಾತ ಸುರಾಸುರನರೋರಗಗಳನವರತ
ಸರ್ವವ್ಯಾಪಾರ ನೀ ನಡೆಸಿ ಪೊರೆವ ಸದ್ಗುರುವರ ಸುಸಮೀರಾ
ನೀರಜಾಂಡವ ಕೂರ್ಮರೂಪದೊಳು ನಿಂತು ನೀ
ಭಾರವಹಿಸಿ ಮೆರೆದೆ ಶ್ರೀ ವಾಯುಕುವರಾ ೧

ಸೃಷ್ಟಿಗೊಡೆಯನಿಗೆ ನೀನಿಷ್ಟಪುತ್ರ
ನಿನ್ನಷ್ಟುಜ್ಞಾನ ಪರಮೇಷ್ಠಿಗಲ್ಲದೆ
ಎಷ್ಟು ನೋಡಿದರು ಇತರರಲಿ ಎಳ್ಳಷ್ಟಿರೆಣೆಯಿಲ್ಲ
ತುಷ್ಠಿಪಡಿಸುವೆ ಹರಿಯ ಜೇಷ್ಟದಾಯರ
ಶ್ರೇಷ್ಟ ಮೂರುತಿ ಕವಿಶ್ರೇಷ್ಟ ನೀನೆನಿಸಿ ಲಂಕಾ
ಶ್ರೇಷ್ಟನೆನಿಸಿದ ದುಷ್ಟದೈತ್ಯನಾ ಮರವನ್ನ
ಹುಟ್ಟನಡಗಿಸಿ ಸುಟ್ಟೆ ಲಂಕಪಟ್ಟಣವನ್ನು
ಪುಟ್ಟಿದಾಗಲೆ ಬೆಟ್ಟ ಹಿಟ್ಟನು ಮಾಡಿ ಆ
ದುಷ್ಟಭಾಷ್ಯಗಳ ಕಷ್ಟ ಪರಿಹರಿಸಿ ನಿ–
ರ್ದುಷ್ಟತತ್ವವ ತೋರ್ದೆ ಎಷ್ಟು ಶಕ್ತನು ಜೀವ–
ಶ್ರೇಷ್ಠಮೂರುತಿ ಸರ್ವ ಕಷ್ಟ ಹರಿಸಿ ನಿನ್ನ
ಇಷ್ಟಭಕುತರ ಸೇವೆ ಕೊಟ್ಟು ಶ್ರೀ ಹರಿಯ

ಶ್ರೇಷ್ಠಮೂರುತಿ ತೋರೋ ಇಷ್ಟದಾಯಕ ಗುರು
ಶ್ರೇಷ್ಠ ಮಾರುತಿಯೆ ೨

ಈಶ ಪ್ರೇರಣೆಯಿಂದ ಈ ನಶ್ವರದೇಹದೊಳು
ಆ ಸಮಯದಲಿ ಅಪಾನನಿಂದೊಡಗೂಡಿ
ಪ್ರಾಣೇಶ ನಿನ್ನಿಂದ ಎಲ್ಲ ಚೇತನವಿಹುದೋ
ವಾಸವಾಗಿರುವನಕ ಈ ಶರೀರ ಕಾರ್ಯ
ಶಾಶ್ವತ ನಡೆವುದೋ ಕಲ್ಪಾವಸಾನ ಮೋಕ್ಷಪರಿಯಂತ
ಲೇಶ ಬಿಡದಲೆ ಬಪ್ಪ ಜಡದೇಹದೊಳು
ನೀ ವಾಸವಾಗಿಹೆ ದೇವ ಶಾಶ್ವತನಾಗಿ
ಆಯಾಸವಿಲ್ಲದಲೆ ಊರ್ಧ್ವಗಮನದಿ ಪ್ರಾಣ
ಅಪಾನನಿಂದಗಲಲೀದೇಹ
ಭೂಶಯನ ವಾಸ ಜಡವೆಂದೆನಿಸಿ
ಆ ಶರೀರವು ಭೂತಪಂಚಕದಿ ಸೇರುವುದು
ಪ್ರಾಣೇಶ ನೀನಾಗ ಹರಿಯನ್ನು ಸೇರುವೆ
ಏಸು ಚರಿತೆಯೊ ಅನಿಲ ಶಾಶ್ವತನು ನೀನು
ಅಶಾಶ್ವತ ದೇಹಗಳ ಮಾಳ್ಪ ನಿನ್ನಯ ಕಾರ್ಯ
ಏಸುಕಾಲಕು ದೇಹದಿಂ ಮೃತರೈಯ್ಯ ಜೀವರು
ಶ್ರೀಶನಾತ್ಮಜ ನೀನಮೃತನೆನಿಸೀ ಮೆರೆವೆ
ಈಶ ಪ್ರೇರಣೆ ನಿನಗೆ- ನಿನ್ನ ಪ್ರೇರಣೆ ಎಮಗೆ
ಅಸುಪತಿಯೆ ನಿನಗಿದು ಹೊಸ ಪರಿಯಲ್ಲವೊ
ಮೀಸಲಾಗಿರಿಸು ಶ್ರೀ ವೇಂಕಟೇಶನ ಪಾದ
ದಾಸನೆನಿಸೊ ಪವನೇಶ ಉರಗಾದ್ರಿವಾಸ ವಿಠಲನ
ದಾಸ ಎನ್ನ ಮನದಾಸೆ ನೀ ಸಲಿಸಿ ನಿಜ
ದಾಸಜನ ಸಹವಾಸವಿತ್ತು ಅನಿಶ ಭವ
ಪಾಶ ಸಡಿಲಿಸಿ ಸುಖವಾಸವೀಯೊ ಗುರು ಮಾತರಿಶ್ವ ೩

## ೪೪

ಭಾರತೀಪತಿ ಮೂರುತಿ ಮಾರುತಿ ಕಾಯೊ ಪ

ಘೋರದುರಿತೌಘ ಪರಿಹಾರ ಸುಸಮೀರ ಧೀರಾ ಅ.ಪ

ಸತ್ತ್ವ ಸತ್ತ್ವಾತ್ಮಕ ತತ್ತ್ವದೇವತೆಗಳ
ಕೃತ್ಯಗಳ್ ಪ್ರವೃತ್ತಿಗೆ ನೀ ನಿತ್ಯ ನಿಯಾಮಕ ಗುರು ೧

ಪಟುತರಾಂಗನೆ ಧೂರ್ಜಟಿಯ ಸೇವೆಗೆ ಮಚ್ಚಿ
ದಿಟ್ಟ ಶೇಷಪಟ್ಟಕೊಟ್ಟು ತೊಟ್ಟೆ ಪರಮೇಷ್ಠಿ ಪದ ೨

ಸಂಜೀವನೆ ರಿಪುಕುಂಜರ ಮಸ್ತಕ ಭಂಜಿಸಿದ ಧ-
ನಂಜಯನಾಗ್ರಜನೆ ಮೂರ್ಜಗ ಗುರು ೩

ಶ್ರೇಷ್ಠಮೂರುತಿ ಜಗಚ್ಚೇಷ್ಟಾಪ್ರದಾಯಕ
ದಿಟ್ಟ ನೀ ಪ್ರವಿಷ್ಠ ಸರ್ವಸೃಷ್ಟಿಕಾರ್ಯ ತೊಟ್ಟಿರುವೆ ೪

ಮುಖ್ಯವಾಚ್ಯನು ದೇವ ಅಮುಖ್ಯವಾಚ್ಯನು ನೀನು
ಮುಖ್ಯ ಜೀವಕೋಟಿಯೊಳು ಪ್ರಮುಖನಯ್ಯ ಮುಖ್ಯಪ್ರಾಣ ೫

ಶ್ವಾಸನಿಯಾಮಕ ನಿಶೆಯೊಳು ನಿದ್ರೆಯೊಳು
ಅಸುರಾದಿ ಜೀವರೊಳು ಶ್ವಾಸಭೂರ್ಭುವನೆನಿಸುವೆ ೬

ಸರ್ವನಿಯಾಮಕ ಶರ್ವರೊಂದಿತಪಾದ
ಸರ್ವೋತ್ತಮ ಶ್ರೀ ವೇಂಕಟೇಶನೋರ್ವನೆ ಮುಖ್ಯನೆಂದೆ ೭

## ೪೫

ಮಾರುತೀ ಕೊಡು ಭಕುತಿ ನುಡಿಸು ಕೀರ್ತಿ ಪ

ತೋರೊ ನಿನ್ನೊಳು ಇಹ ನಿರ್ಮಲ ಮೂರುತಿಯ ಅ.ಪ

ಶ್ರವಣಮಾಡಲು ಭಕುತಿ ಆವಕಾಲಕು ಇತ್ತು
ತವಪದದಾಸರ ದಾಸ್ಯ ಕೊಡಿಸೋ ದೇವ ೧

ಕೀರ್ತನದೊಳು ಹರಿಕೀರ್ತಿ ಕೊಂಡಾಡೆ ಸಂ
ಕೀರ್ತನ ಭಕುತಿಗೆ ಕರ್ತದಾತ ನೀನೆ ೨

ಸ್ಮರಣೆಯು ಹರಿಯಲ್ಲಿ ನಿರುತವು ನಿನ್ನಲ್ಲಿ
ಕರುಣಿಸಿ ಪೊರೆಯೊ ಗುರುವರ ಸುಂದರ ೩

ಪಾದ ಸೇವೆಯ ಕೊಡು ಸಾದರದಿಂದಲಿ
ಶ್ರೀಧರನಾ ಕೃಪಾಪಾತ್ರನೆಂದೆನಿಸಯ್ಯ ೪

ಅಚ್ಯುತನಿಗೆ ನೀನಚ್ಚುಮೆಚ್ಚಾಗಿಹೆ
ನಿಚ್ಚದಿ ಹರಿಪಾದರ್ಚನೆ ಮಾಡಿಸಯ್ಯ ೫

ವಂದನಾಭಕುತಿ ಎನ್ನಿಂದ ನೀ ಮಾಡಿಸಿ
ನಂದನಂದನಗಾನಂದಪಡಿಸೊ ದೇವ ೬

ದಾಸಭಕುತಿ ಭಾಗ್ಯ ಆಶಿಸುವೆನು ನಿನ್ನ
ವಾಸುದೇವನ ನಿಜದಾಸನೆ ಸರ್ವದಾ ೭

ಸಖ್ಯಭಕುತಿ ಕೊಡೋ ಮುಖ್ಯಪ್ರಾಣೇಶನೆ
ಮುಖ್ಯಕಾರಣ ಹರಿಯ ಮುಖ್ಯ ಪ್ರೇಮಪಾತ್ರ ೮

ಆತ್ಮನಿವೇದನ ಭಕುತಿಯನ್ನು ಪರ
ಮಾತ್ಮನಲ್ಲಿತ್ತು ನಿರ್ಮಲಾತ್ಮನೆಂದೆನಿಸೊ ೯

ನವವಿಧ ಭಕುತಿಯ ಕೊಟ್ಟು ಸಲಹೋ ದೇವ
ಅವಕಾಲಕು ಪವಮಾನ ನೀನೆ ಗತಿ ೧೦

ಸಂಕಟ ಹರಿಪ ಶ್ರೀ ವೇಂಕಟೇಶನ ದೂತ
ಭಂಟನೆಂದೆನಿಸೆನ್ನ ಸಂಕಟ ಹರಿಸಯ್ಯ ೧೧

## ೪೬

ಮಾರುತೀ ಜ್ಞಾನ ಮೂರುತೀ ಪ

ಬಾರಿಬಾರಿಗೆ ಬಹದುರಿತ ಪರಿಹಸಯ್ಯ ಅ.ಪ

ಜೀವ ಕೃತಕರ್ಮ ಕ್ರಿಯೆಗಳೂ ಹಗಲಿರುಳೊಳು
ಪವಮಾನ ನೀನೆ ನಡೆಸೆ ಸಡೆಸೋರು ತತ್ತ್ವೇಶರು
ಭವಬಂಧ ಹರಿಸಿ ಕಾಪಾಡಯ್ಯ ಬೇಡುವೆ ಜೀಯ
ತವಪಾದದಾಸ್ಯವ ಕೊಡಿಸಯ್ಯ ಯಾಕೆ ನಿರ್ದಯ ೧

ಬಹುಜನುಮವನೆತ್ತಿ ಬಂದೆನೊ ಇಲ್ಲಿ ನಿಂದೆನೊ
ಅಹರಹರ ನೀ ನಡೆಸೆ ನಡಿವೆನೊ ನುಡಿಸೆ ನುಡಿವೆನೊ
ಇಹಪರ ಸಾಧನ ನಿನ್ನಿಂದ ಎನ್ನ ಕೈಯಿಂದ
ಬಹುಪರಿ ಮಾಡಿಸಿ ಭವದಿಂದುದ್ಧರಿಸೆಂದೇ ೨

ಪಂಕಜೋದ್ಭವ ಪದವ ಪಡೆವಯ್ಯ ಆರೆಣೆಯಯ್ಯ
ಕಿಂಕರರೊಳಗೇಕೆ ನಿರ್ದಯ ನಂಬಿದೆನಯ್ಯ
ಶಂಕರಾನತ ಪೂಜಿತಾಂಘ್ರಿಯ ದಯ ತೋರಯ್ಯ ಶ್ರೀ
ವೇಂಕಟೇಶನ ಮುಂದೆ ನಿಂದಿಹ ಭಕ್ತಿಯಿಂದಿಹ ೩

## ೪೭

ರಕ್ಷಿಸೋ ಪವಮಾನ ಸದ್ಗುರುವರಾ ಪ

ಜೀವರ ಬಂಧಗಳಿಂದ ಎಲ್ಲ ಪಾವನ ಮಾಳ್ಪದರಿಂದ ದೇವ
ಪಾವನಮೂರ್ತಿಯು ನಿನ್ನ ಮುಖದಿ ಜಗ
ತ್ಪಾವನ ಮಾಳ್ಪುದರಿಂದ ಪವನನೆಂಬೋರೆ ನಿನ್ನ ಅ.ಪ

ಜ್ಞಾನೈಶ್ವರ್ಯ ವೈರಾಗ್ಯ ನಿನಗೆ
ಅನಾದಿಯಿಂದಲಿ ಅದು ಯೋಗ್ಯ (ವಾಗೀ)
ನಿನ್ನ ಸ್ವರೂಪ ಸ್ವಭಾವಕೆ ಯೋಗ್ಯ

ನಿಜ ಘನ್ನ ಮಹಿಮ ನಿನ್ನ ಭಾಗ್ಯ । ಆಹಾ
ತನು ಚತುಷ್ಟಯದೊಳಗನವರತ ವ್ಯಾಪ್ತನೋ
ಇನ್ನೂ ಮುನ್ನೂ ಜಗತ್ಕಾರ್ಯ ನಿನ್ನದೋ ದೇವಾ ೧

ಬೃಹತಿನಾಮಕ ಕರುಣಾಳು ನಿನ್ನ ದೇಹದಿ
ಭಗವದ್ರೂಪಗಳೂ ನಿತ್ಯನೋಡುತ
ಬಹಿರಾಂತರದೊಳು ಇನ್ನು ಮಹಾಮಹಿಮ
ಅನೇಕಂಗಳು । ಆಹಾ
ಬೃಹತಿ ಛಂದಸ್ಸು ಅನ್ನವು ಶ್ರೀಹರಿಗೆ
ಛಂದಸ್ಸಿನಿಂದಾಚ್ಛಾದಿತ ತ್ವದ್ಗಾತ್ರನೊ ೨

ಪ್ರಾಣಾಪಾನ ವ್ಯಾನೋದಾನ ಸಮಾನಾದಿ
ಪಂಚಪ್ರಾಣ ಜೀವ
ಶ್ರೇಣಿಗಳೊಳಗೆ ನೀ ಪ್ರವೀಣ ಜಗತ್ರಾಣ
ನೀನಹುದೋ ಸದ್ಗುಣ ।ಆಹಾ
ಪ್ರಾಣಾಪಾನದಿಂದ ದೇಹದ ಸ್ಥಿತಿ ಕಾರ್ಯಕ್ಷಣ
ತಪ್ಪಲು ಕುಣಪನೆಂದಪರೋ ಈ ದೇಹಕೆ ೩

ಇಪ್ಪತ್ತೊಂದು ಸಾವಿರದಾರುನೂರು
ಶ್ವಾಸ ತಪ್ಪದೆ ಜೀವರು ಮಾಡಿ
ಅಹರ್ನಿಶಿ ದೇಹವ ಧರಿಪರೋ ನಿನ್ನ
ಒಪ್ಪಿಗೆಯಂತೆ ಸಾಧಿಪರೋ । ಹಾ
ಅಹೋರಾತ್ರಿ ಶ್ವಾಸನಿಯಾಮಕ ಜೀವರ್ಗೆ
ಅಯುಮಾನವ ನೀವ ಮಾತರಿಶ್ವದೇವಾ ೪

ಜೀವರ ಅವಸ್ಥಾತ್ರಯದಿ ಸರ್ವಜೀವರು
ನಿನ್ನಂತರದಿ ಇಟ್ಟು
ಅವರ ಯೊಗ್ಯತೆ ಇಹ ತೆರದಿ ತಕ್ಕ
ಅವಸ್ಥಾಭೋಗ್ಯವನಿತ್ತು ತ್ವರದಿ । ಆಹಾ
ಪಾವನ ಮೂರ್ತಿಗೆ ಅರ್ಪಿಸುತ್ತ ಶ್ರೀಪತಿ
ಪಾದಗಳಿಗೆರಗಿ ಕರವ ಮುಗಿದು ನಿಂದಿಹೆ ೫

ಪರಿಶುದ್ಧ ಸತ್ವಾತ್ಮಕವಾಗಿ ಇನ್ನು
ನಿರುತ ಪೂರ್ಣಪ್ರಜ್ಞನಾಗೀ ಜೀವ ಸ
ರ್ವರೊಳು ಶುಚಿತಮನಾಗಿ ಇರ್ಪ
ಮಾರುತ ನಿನ್ನೊಳು ಅನುವಾಗಿ ।ಆಹಾ
ಹರಿಯು ನಿನ್ನ ಶುಚಿ ತನುವಿನೊಳಿದ್ದು
ಶುಚಿಹೃತ್ ಎಂದು ತಾ ನಿಂದು ನಲಿವನಯ್ಯ ೬

ಅಂಡಾವರಣದ ಗುಣತ್ರಯ ಕಂಡಿಹೆ ವ್ಯಾಪ್ತಸದ್ಗುಣ ಉ
ದ್ದಂಡ ಮಹದ್ರೂಪನೆ ಮಹಘನ್ನ ಇನ್ನು ಮೃಡನಾಪೇಕ್ಷ
ಶತಗುಣ । ಆಹಾ
ತನುರೂಪದೊಳೆಲ್ಲ ಅಣುರೂಪವಾಗಿಹೆ
ತೃಣಮೊದಲು ಸರ್ವಜೀವರೊಳು ವ್ಯಾಪ್ತನೊ ೭

ಅಂದು ತ್ರಿಕೋಟಿರೂಪದಲಿ ನಿಂತು
ನಿಂದ ತ್ರಿವಿಕ್ರಮಾವತಾರದಲೀ ಸೇವೇ ಆ
ನಂದದಿ ಸಲಿಸುತ್ತಲಲ್ಲಿ ಇನ್ನು ನಿಂದು ಅಂ
ಡದ ಬಹಿರ್ಭಾಗದಲಿ ।ಆಹಾ
ಚಂದದಿ ತ್ರಿಕೋಟಿರೂಪದಿಂದ ಅಂಡ ಖರ್ಪರ
ಕಾಯ್ದ ಉದ್ದಂಡ ಮೂರುತಿಯೊ ೮

ವಾಯುಕೂರ್ಮನಾಗಿ ನಿಂದೇ
ಜಗದಾದ್ಯಭಾರವು ಎಲ್ಲ ನಿನ್ನಿಂದೇ
ಎಂದು ಕಾಯಜಪಿತ ತರುವ ಮುಂದೇ ನಿನ್ನ
ಗಾಯತ್ರೀಪತಿಯ ಪಟ್ಟಕೆಂದೇ । ಆಹಾ
ಶ್ರೀಯರಸಾ ಶ್ರೀ ವೇಂಕಟೇಶಾತ್ಮಕ
ಉರಗಾದ್ರಿವಾಸವಿಠಲನ ನಿಜದಾಸ ೯

## ೪೮

ಸೂತ್ರನಾಮಕಪ್ರಾಣ ಜಗತ್ರಾಣ
ಸೂತ್ರನಾಮಕ ಜಗಸೂತ್ರನೆ ಹರಿಕೃಪಾ
ಪಾತ್ರ ನೀನಹುದೋ ಸರ್ವತ್ರದಿ ನೀನೆ ಪ

ದೇವಾ ನೀನಿಲ್ಲದಿರೆ ಜಗವೆಲ್ಲವು ತಾ ನಿರ್ಜೀವ
ಜೀವ ಕೋಟಿಗಳೆಲ್ಲ ಕಾವ
ಪಾವನಾತ್ಮಕ ಸಂಜೀವ
ಲವಕಾಲ ಬಿಡದೆ ಎಮ್ಮೊಳಿರುವ ಭೋ ದೇವ ಅ.ಪ

ಸಾಟಿ ಯಾರೆಲೆ ತ್ರಿಕೋಟಿರೂಪನೆ ನಿಶಾಚರ ಕುಲಕೆ ಕುಠಾರಿ
ದಿಟ್ಟತನದಲಿ ಅಜಾಂಡ ಖರ್ಪರದಿ ಸೃಷ್ಟಿಯೊಳು ಸಂಚಾರಿ
ಪಟುತರ ತ್ರಿವಿಕ್ರಮ ಚಟುಲ ಮೂರುತಿ ಮನತಟದಲಿ ಭಜಿಸಿದ
ಶ್ರೇಷ್ಠನೆ ನಿಜಪರಮೇಷ್ಠಿಪದವನು ತೊಟ್ಟು ಪಾಲಿಪೆ
ಮುಂದೂ ಹಿಂದೂ ಕೂರ್ಮನಾಗಿ
ನಿಂದು ಬ್ರಹ್ಮಾಂಡ ಪೊತ್ತು
ಅಂದು ಜಗಭಾರ ವಹಿಸಿದೆಯೊ
ಅಂದು ಪ್ರಥಮಾಂಗ ಹರಿಗೆ ಬಂಧೂ
ದಯಾಸಿಂಧು ಎಂದೆಂದೂ ೧

ವೀರ ನೀ ಈರಪಾದರ ಕುಲಕುಠಾರ
ಸರುವ ತತುವೇಶರ ವ್ಯಾಪಾರ
ಧೀರ ನೀ ನಡೆಸೆ ಜಗಸಂಸಾರ ಕಾರಣನು ಜಗಕಾರ್ಯ ಕಾ
ಧಾರ ಸುಸಮೀರ ಜ್ಞಾನ ಧರ್ಮ
ವೈರಾಗ್ಯ ಐಶ್ವರ್ಯ ನಿನ್ನಯ ಗುಣ
ಸ್ವರೂಪತನುಕರಣೇಂದ್ರಿಯ ಕರ್ಮಫಲವನು ಜೀ
ವರುಗಳಿಗುಣಿಪ ಅನಿಲರೂಪನೆ ತನುಗೋಳಕದಲಿ ನೀ ನೆಲ
ಸಿ ರೂಪದಿ ದೈವದೊಳಾಧ್ಯಾತ್ಮಾದಿ ಭೂತಾದಿ ದೈವನೆಂದು

ಅಂದು ಸೃಷ್ಟಿಯೊಳು ಬಂದೂ ಪೊಂದಿ
ಸರ್ವರೊಳು ನಿಂದು ಹಿಂದೂ ಇಂದೂ ಇನ್ನು ಮುಂದೂ
ಎಂದೆ ಜೀವೇಶ ನೀನೆ ಜಗಬಂಧೂ
ಕರುಣಾಸಿಂಧು ಎಂದೆಂದೂ ೨

ಪ್ರಾಣಪ್ರಾತರ ಸಾಯಂಬೀತೆರ ಅಭಿಧಾನ
ಗುಣಸ್ತವನ ಮಾಳ್ಪರೆಲ್ಲ ಸುರ
ಗಣಾ ಮಣಿದು ಬೇಡುವರೆಲ್ಲ ಅನುದಿನಾ
ಎಣೆಯುಂಟೆ ನೀನಮಿಃ ಗುಣಗಣಾ ಶ್ರೀ ಮುಖ್ಯ
ಪ್ರಾಣಾ ಜಗಬಂಧಕೆ ಮಹಾರಜ್ಜು ರೂಪ ನೀ ಚಿತ್ಸುಖಮಯ
ವಪುಷ ಖಗಪ ಶೇಷ ಶಿವ ಶಕ್ರಾದೀ ಜಗ ಬದ್ಧವು
ನಿನ್ನಿಂದೀಶಾ ಅಘದೂರ ಅನಂತಾನ
ಕೇಶ ನಖಾಗ್ರ ಪರ್ಯಂತ ಚಿತ್ಸುಖ
ಅಣುಘನ ಅವಯವ ಅವಯವಿಗಳಿ
ಗಭೇದ ನೀ ಛಂದ ಶಾಸ್ತ್ರದಿ
ತನು ತ್ವಗ್ರೋಮ ಉಷ್ಣಿಕ್ ಗಾಯತ್ರಿ ನರ ಮಾಂಸನುಷ್ಟುಪ್
ಅನುಷ್ಟಪು ಅಸ್ತಿಮಜ್ಜಾ ಜಗತೀ ಪಂಕ್ತಿ ಬೃಹತಿನಾಮಕ
ಜೀವನ್ನಾ ಶ್ರೀ ವೇಂಕಟೇಶನಾ
ಘನ್ನಾ ಉರಗಾದ್ರಿವಾಸ ವಿಠಲನ್ನ ೩

## ೪೯

ಹನುಮಂತ ಹನುಮಂತ ಹನುಮಂತ ಪ

ಹನುಮಂತ ಹರಿಯ ಮತ ನಿರುತ ಗುಣಯುತ
ಜನರ ಪೊರೆಯುತ ತತುವರೊಳು ಪ್ರೇರಿತ ಅ.ಪ

ಪವಮಾನ ಪವಮಾನ ಪವಮಾನ ಪವಮಾನ ಪರಮ
ಪಾವನ ಅಣುಮಹದ್ಘನ ವನಧಿಲಂಘನ
ವೀತಿಹೋತ್ರನ ಪಡಿಸಿತೃಪ್ತನ

ರಾಮವಂದನ ಮಾಡುತ ಮನದಿ ಆನಂದ ಆನಂದ ಆನಂದ
ಆನಂದದಿಂದ ತ್ವರಿಯಾ ಹಾರಿ ಶರಧಿಯಾ ಸೀತಾಕೃತಿಯಾ
ಕುಶಲವಾರ್ತೆಯ ಪೇಳಲು ಜೀಯಾ
ಹರುಷ ಅತಿಶಯ ಉಕ್ಕಲು ಕೈಯ
ರಾಮಾಲಿಂಗನದಿಂದ ಆನಂದ ತಾ ನಿಂದಾ ತಾ ನಿಂದ ತಾ ನಿಂದ
ತಾ ನಿಂದಾ ಕಪಿಗಳ ವೃಂದಾ
ನೆರಹಿ ಆನಂದ ರಣಮುಖಕೆಂದಾ
ಶಿಲೆಗಳ ತಂದ ಸೇತುಬಂಧನ
ಮಾಡಿಸಿ ನಿಂದಾ ರಾವಣವಧೆಗೆಂದಾ ೧

ಶ್ರೀರಾಮ ಶ್ರೀರಾಮ ಶ್ರೀರಾಮ
ಶ್ರೀರಾಮಾ ಪದ ಪ್ರೀತ ಪ್ರಖ್ಯಾತ
ಪ್ರಖ್ಯಾತ ಪ್ರಖ್ಯಾತ ವರಧೃತ ತ್ರಿಜಗ ಖ್ಯಾತ ಅತಿ ಮಹಾರಥ
ಯದುಪತಿ ಪ್ರೀತಾ ಸುರರ ಸೇವಿತಾ ಗರಳಭುಂಜಿತಾ
ಸತಿಗೆ ಪೂವಿತ್ತ ಭುಜಬಲಯುತಾ ಧೀಮಂತಾ
ಧೀಮಂತಾ ಧೀಮಂತಾ ಧೀಮಂತಾ ಭಾರತೀಕಾಂತಾ
ದುರಳ ಮಣಿಮಂತಾ ಸೆಣಸಿಬರೆ ನಿಂತಾ
ಹರಣ ಮಾಡಿ ಪಂಥಗೆಲಿದು ತಾ ನಿಂದಾ
ಪ್ರಣಯನಾಗಿ ನಿಂತಾ ಕೀಚಕನ ಧ್ವಾಂತದೊಳು ತಾ
ನೋಡಿ ತಾ ನೋಡಿ ತಾ ನೋಡಿ ತಾ ನೋಡಿ ಅವನೊಳು
ಕೂಡಿ ಕೈಯ ಹಿಡಿದಾಡಿ ಕೇಳಿಯೊಳು ಕೂಡಿ ಉರದಿಶಿರ
ನೀಡಿ ಮಾಂಸಮುದ್ದೆಮಾಡಿ
ನೆಲಕೆ ಈಡಾಡಿ ನಲಿದು ತೋರಿದಾ ೨

ಆನಂದ ಆನಂದ ಆನಂದ ಆನಂದ ತಾ ನಿಂದ ಶ್ರೀಮ
ದಾನಂದ ಆನಂದ ಬುಧಜನಕ್ಲೇಶದಿಹ ಮನ ನೋಡಿ ಜೀ
ವನ ಸೂತ್ರ ವ್ಯಾಖ್ಯಾನ ಮಾಡಿ ಪಾವನ ವಾದಿಭಂಜನ

ಬಾದರಾಯಣ ಪ್ರೀತಿಪಾತ್ರ ಏಕಾಂತ ಭಕ್ತ ತಾನಿತ್ತ
ತಾನಿತ್ತ ತಾನಿತ್ತ ತಾನಿತ್ತ ಜಗಕತಿಮೋದ ಶಾಸ್ತ್ರ
ಸನ್ಮುದ ತೋರಿಸರ್ವದ ಜೀವರು ತ್ರಿವಿಧ ತರತಮಭೇದ
ಜಗ ಸತ್ಯ ಜಗವು ಸತ್ಯ ಜೀವರು ನಿತ್ಯ ಕಾರಣ ನಿತ್ಯ
ಕಾರ್ಯ ಅನಿತ್ಯ ಪ್ರಕೃತಿ ಸತ್ಯ ಸುಗುಣವೆ ನಿತ್ಯ
ಭೇದವು ನಿತ್ಯ ದ್ವೈತವು ಸತ್ಯವೆಂದ ಶ್ರೀ
ವೇಂಕಟೇಶನ ನಿಜದೂತ ೩

## ಭಾರತೀ ದೇವಿ

### ೫೦

ಪಾಲಿಸು ಭಾರತಿಯೆ ದೇವಿಯೆ
ಕಾಲಮಾನಿಯ ತಾಯೆ ಪ

ಶ್ರದ್ಧಾ ಮೂರುತಿ ತಾಯೆ ಕಾಯೆ ಪ್ರದ್ಯುಮ್ನ ಕುವರಿಯೆ
ಶ್ರದ್ಧಾನಾಮಕಳೆ ನೀ ಶ್ರದ್ಧಾಭಕುತಿ ಕೊಟ್ಟು
ಶುದ್ಧ ಮುಗ್ಧನೆನ್ನ ಉದ್ಧರಿಸುವುದೀಗಾ ೧

ಚಿತ್ತ ವೃತ್ತಿಯ ಬಲ್ಲೆ ಎನಗೆ ನೀ ಉತ್ತಮಗತಿ ಈಯೆ
ಚಿತ್ತಶುದ್ಧ ಬುದ್ಧಿಯಿತ್ತು ನೀ ಪಾಲಿಸಿ
ಚಿತ್ತಜನಯ್ಯನಾ ಹತ್ತಿರಕೊಯ್ಯೆ ೨

ಪಂಕಜ ಭವನ ರಾಣಿ ಗುಣಮಣಿ ಶಂಕರನಾ ಜನನಿ
ಕಿಂಕರನೆಂದು ಮನ ಶಂಕೆಯ ಹರಿಸಿ ಶ್ರೀ
ವೆಂಕಟೇಶನ ಪಾದಪಂಕಜ ತೋರಿಸೆ ೩

## ರುದ್ರ ದೇವರು

### ೫೧

ಕಂಟಕವ ಪರಿಹರಿಸೊ ಶ್ರೀಕಂಠಮೂರುತಿಯೇ ಪ

ಬಂಟನೆಂದೆನಿಸೆನ್ನ ವೈಕುಂಠಮೂರುತಿಗೇ ಅ.ಪ

ತಂಟೆಸಂಸಾರದ ಲಂಪಟದಲೆನ್ನ ಮನ
ಮರ್ಕಟದ ತೆರದಿ ಪರ್ಯಟನ ಮಾಡೆ
ಅಂಟಿಕೊಂಡಿಹ ಈ ಭವಾಟವಿಯ ದಾಂಟಿಸುವೆ
ನೆಂಟ ನೀನಹುದಯ್ಯ ಶಿತಿಕಂಠದೇವಾ ೧

ನಿರ್ಜರೇಶನ ಬಿಂಬ ಮೂರ್ಜಗದೊಳಗೆಲ್ಲ
ಧೂರ್ಜಟಿಯೆ ನೀನೆ ಭವವರ್ಜಿತನ ಮಾಡೋ
ದುರ್ಜಯವು ಎನ್ನ ಮನ ಆರ್ಜಿಸದೆ ಹರಿಭಕುತಿ
ಮೂರ್ಜಗದ ಪತಿ ಜನಾರ್ದನನೊಳ್ ಮನ ನಿಲ್ಲಿಸೋ ೨

ತ್ರ್ಯಂಬಕನೆ ಎನ್ನ ಮನದಂಬರದೋಳ್ ಹರಿಪಾದ
ಅಂಬುರುಹ ತೋರಯ್ಯ ಶಂಭೋ ಮಹಾದೇವಾ
ಕುಂಭಿಣಿಯೊಳು ಒಂದೆ ಇಂಬುತೋರದು ಎನಗೆ
ಶಂಬರಾಂತಕ ವೈರಿ ಭವಭಯ ಹಾರೀ ೩

ವಾಮದೇವನೆ ಕಾಯೊ ತಾಮಸಮತಿ ಹರಿಸಿ
ಶ್ರೀ ಮನೋಹರನಲ್ಲಿ ಸನ್ಮನವ ನೀಡೋ
ಸೋಮಶೇಖರ ಸುರಸ್ತೋಮದಲಿ ನಿನ್ನಂಥ
ಪ್ರೇಮಿಗಳ ನಾ ಕಾಣೆ ಉಮೆಯರಸ ಸಲಹಯ್ಯ ೪

ಶಿಕ್ಷಕನು ನೀ ಜ್ಞಾನಚಕ್ಷುವ ನೀಡು ವಿರೂ
ಪಾಕ್ಷಮೂರುತಿ ಶ್ರೀ ವೇಂಕಟೇಶನ ಭಕ್ತ
ಈ ಕ್ಷಿತಿಯೊಳ್ ಉರಗಾದ್ರಿವಾಸವಿಠಲನ ಪ್ರ
ತ್ಯಕ್ಷದಲಿ ನೋಳ್ಪ ಶ್ರೀ ತ್ರ್ಯಕ್ಷಮೂರುತಿಯೇ ೫

## ೫೨

ಗಂಗಾಧರ ಸ್ಮರತ್ರಿಪುರಹರ ದೇವ ಪ

ಅಂಗಜಹರ ಭಸಿತಾಂಗ ಮಹಾಲಿಂಗ
ತುಂಗಮಹಿಮ ಮೃಗಾಂಶಮೌಳಿ ಶಿವ ಅ.ಪ

ಶ್ರದ್ಧಾ ಮೂರುತಿ ಭೂತೇಶ ಸದ್ಯೋಜಾತ
ಪ್ರದ್ಯುಮ್ನಸುತೆಯಸುತ ಮತಿಯ ಪ್ರದಾತ
ಸದಮಲಮೂರುತಿ ಹೃದಯಸದನದೊಳು
ವಿಧಿಪಿತನಂಘ್ರಿಯ ಸ್ಮರಣೆಯ ಕರುಣಿಸು ೧

ಪ್ರಮಥಶ್ರೇಷ್ಠರ ಸಂಸೇವಿತ ಸುಮನಸರ ಪ್ರೀತ
ಹೈಮವತಿಯ ಪ್ರೀತಾ ರಮಾರಮಣಗೆ ಅತಿಭಕುತಾ
ನೀ ಮನೋಭಿಮಾನಿಯೆ ಖ್ಯಾತಾ ತಾಮಸರೊಳು
ತಮಸಾಧನ ಮಾಡಿಸಿ ನೀ ಮೋಹಿಪ ದೇವ ಶೂಲಿ ಕಪಾಲಿ ೨

ಶುಕದೂರ್ವಾಸಸ್ವರೂಪ ಜೈಗೀಷರೂಪ
ವೈಕಾರಿಕಾದಿ ತ್ರೈರೂಪ ಲೋಕನಾಥ ಶ್ರೀ
ವೆಂಕಟೇಶನ ಹೃತ್ಕಮಲದಿ ನಲಿಸುವ ಫಾಲನೇತ್ರ ಶಿವ ೩

## ೫೩

ಶಂಕರಾ ಪೊರೆಯಯ್ಯ ನಾ ನಿನ್ನ ಕಿಂಕರ ಪ

ಪಂಕಜಾಸನಕುವರ ಮನದ
ಶಂಕ ನಾಶಗೈಸಿ ಶೇಷಪ
ರ್ಯಂಕಶಯನನ ಪಾದ
ಪಂಕಜದೇಕ ಭಕುತಿಯನಿತ್ತು ಸಲಹಯ್ಯ ಅ.ಪ

ನಿಟಿಲನಯನ ಧೂರ್ಜಟಿಯೆ ಸೋಮಧರಾ ಜಟಾಜೂಟನೆ
ಕಠಿಣವೆನ್ನಯ ಕುಟಿಲಮತಿಯ

ಜಟಿಲಕಳೆದು ನಿಷ್ಕುಟಿಲ ಮನದೊಳು
ವಿಠಲಮೂರ್ತಿಯ ಧೇನಿಸಲು ಹೃ
ತ್ತಟದಿ ದಿಟಮನ ಕೊಟ್ಟು ರಕ್ಷಿಸಯ್ಯ ೧

ಘೋರ ದುರಿತಾಪಹಾರ ತ್ರಿಪುರಹರ ಕರುಣಾಸಮುದ್ರನೆ
ನಿರುತ ಶ್ರೀಹರಿಚಾರುಚರಣಸ್ಮರಣೆ
ಕರುಣಿಸಿ ಪೊರೆಯೋ ಗುರುವರ
ಸುರನದೀಧರ ಪಾರ್ವತೀವರ
ಕರಿಗೊರಳ ಕೈಲಾಸಮಂದಿರ ೨

ಸರ್ಪಭೂಷಣ ಶೂಲಿ ಡಮರುಧರ ಕಂದರ್ಪಹರ ಶಿವ
ಸರ್ಪಗಿರಿ ಶ್ರೀ ವೆಂಕಟೇಶಗೆ
ಸರ್ವಭಕ್ತಿ ಸಮರ್ಪಿಸಯ್ಯ
ಆಪತ್ತುಹರ ಸಂಪತ್ತುಕರ
ಶಾರ್ವರೀಕರಧರ ಶುಭಕರ ೩

ಶಂಬರಾಂತಕವೈರಿ ಭಸಿತಧರ ಬೆಂಬಿಡದೆ ಸಲಹೊ
ಶಂಭು ಶಚಿಪತಿಬಿಂಬ ಗುರುವರ
ಸಾಂಬ ಪೊಂಬಸುರಕುವರ
ತ್ರ್ಯಂಬಕಾ ತ್ರಿಪುರಾಂತಕ
ಅಂಧಕಾಸುರ ಧ್ವಂಸಕಾ ಶುಕ ೪

ಗಿರೀಶ ಸುರವರ ರುಂಡಮಾಲಾಧರ ಕರಿಚರ್ಮಾಂಬರ
ನಿರುತ ಹೃದಯಸದನದೊಳನ
ವರತ ಉರಗಾದ್ರಿವಾಸ ವಿಠಲನ
ಚರಣಸರಸಿಜಮಧುಪ– ನೀ ಸುಖ ಸವಿದು
ಸೇವಿಪ ವೈಷ್ಣವಾಗ್ರಣಿ ೫

## ಯತಿಗಳು

## ೫೪

### ಶ್ರೀಜಯತೀರ್ಥರು

ಕರುಣಿಸೊ ಜಯರಾಯಾ ಗುರುವರ್‍ಯ
ಚರಣವೆ ಗತಿಯಯ್ಯ ಹೇ ಜಿಯಾ ಪ

ರಘುನಾಥನ ಪುತ್ರ ಪವಿತ್ರ
ರಾಘವನ ಪ್ರೀತಪಾತ್ರ ಚರಿತ್ರ
ಮಘವನಾ ನೀ ನಘದೂರ ಶ್ರೀ
ರಘುರಾಮನ ಕಿಂಕರನ ಅಮೋಘ ಸೇವಕನೊ ೧

ಕುಕರ್ವಿಣಿಯ ತೀರಾ ಘೋರಕುವಾದಿಗಳ ಕು
ಲಕುಠಾರ ಗಂಭೀರ ಸಕಲಶಾಸ್ತ್ರಸತ್ಸಾರ ಟೀಕಕರ
ಕುಕವಿಶೃಗಾಲಕುಲಕಾಲಭಯಂಕರ ೨

ಎರಗೋಳಾದ್ರಿಯೊಳು ಗುಹೆಯೊಳು
ನಿರುತ ಪ್ರವಚನಗಳು ನಿತ್ಯದೊಳು
ಮರುತಮತಾಂಬುಧಿಚಂದಿರ ಸುಂದರ
ವರಸುಜ್ಞಾನಮಣಿಕಿರಣವ ತೋರಿದೆ ೩

ಗುರು ಮಧ್ವಮುನಿ ತತ್ವಗ್ರಂಥದ
ಕ್ಷೀರಶರಧಿಗೆ ಮಂಥಾ ವುನ್ನಂಥಾ
ಮರುತನನುಗ್ರಹ ಪ್ರಗ್ರಹದಿಂದಲಿ
ವರಮಥನದಿ ಇತ್ತೆ ಅಮೋಘವಸ್ತುಗಳೆಲ್ಲಾ ೪

ಉತ್ತಮ ಗ್ರಂಥವನಧೀ ಮಥನದಿ
ಉತ್ತಮ ವಸ್ತುಗಳನಿತ್ತೆಯೊ
ತತ್ವಪ್ರಕಾಶಿಕಾ ಮಹಾಲಕುಮಿಯು
ಚಂದಿರನೇ ಪ್ರಮೇಯದೀಪಿಕಾ

ಸುಧೆಯೇ ನ್ಯಾಯಸುಧಾಗ್ರಂಥ
ಶ್ರೀ ಕೌಸ್ತುಭದಂತಿಹ ನ್ಯಾಯದೀಪಿಕಾ ೫

ನ್ಯಾಯ ಕಲ್ಪಲತಾ ಅಪ್ಸರರು ದುರುಳ ಮಾಯಾಖಂಡ
ನಾಯುಧವೂ ಸರ್ವಜೀಯನೆ ಐರಾವತದಂತೆ ಋ
ಗ್ಭಾಷ್ಯಟೀಕಾ ನ್ಯಾಯವಿವರಣವು ಉಚ್ಚೈಶ್ರವಸ್ಸು ೬

ಕರ್ಮನಿರ್ಣಯ ಟೀಕಾ ವಜ್ರಾಯುಧ
ಆ ಮಹಾಪಾರಿಜಾತ ವಿಖ್ಯಾತಾ
ಶ್ರೀಮದ್ವಿಷ್ಣು ತತ್ತ್ವ ನಿರ್ಣಯ ಟೀಕೆಯು
ಕಲ್ಪವು ಉಪನಿಷತ್ ಭಾಷ್ಯ ಟೀಕೆಯು ೭

ಈಶಾವಾಸ್ಯ ಭಾಷ್ಯ ಟೀಕಾ ಸಂತಾನವೆಂಬೋ ಮಹಾವೃಕ್ಷಾ ಪ್ರ
ತ್ಯಕ್ಷಾ ಬಿಸಜ ಮಂದಾರ ಪ್ರಮಾಣ ಪದ್ಧತಿ ಹರಿಚಂದನಕೆ
ಸಮನಾದ ವಾದಾವಳಿ ೮

ಪಾಕಶಾಸನಾಂಶಾ ಕರುಣಿಸು
ಶ್ರೀಕರಪದಪಾಂಸ ಯತೀಶಾ
ನಾರ ಪತಿಯೆ ಶ್ರೀಕಾಗಿನೀ ತೀರದಿ
ಏಕಾಂತದಿ ನಿಂದೆ ಲೋಕ ವಂದಿತ ದೇವಾ ೯

ಮಂದಭಾಗ್ಯಜನರಾ ಪರಮಾ
ನಂದದಿಂದಲಿ ನೋಡಿ ದಯಮಾಡಿ
ಬಂದ ಬಂಧಗಳ ವಂದಿಸಿದಾಕ್ಷಣ
ತಂದೆಯಂದದಿ ಕಾಯ್ದಾನಂದವೀವೆ ನಿತ್ಯಾ ೧೦

ಪರಮಪಾತಕಿ ನಾನು ಗುರುವೆ ತವ ಪಾ
ದ ರಕ್ಷಕವಚವ ತೊಡಿಸೊ ಉಳಿಸೋ
ನಿರುತ ಶರಣರ ಕಾಯ್ವ ಶ್ರೀ ವೆಂಕಟೇಶನ ಪ್ರೀಯಾ
ಉರಗಾದ್ರಿವಾಸವಿಠಲನ ದಾಸಾ ೧೧

## ೫೫

ಜಯತೀರ್ಥ ಮುನಿವರ್ಯ ಪ

ದಯತೋರಿ ಪೊರೆಯಯ್ಯ ವಿಜಯಸಾರಥಿಪ್ರಿಯ ಅ.ಪ

ಶ್ರೀಶಶಯನಾವೇಶ ಮಹೇಶ ಪ್ರತಿಬಿಂಬ ಸು
ರೇಶ ಯತಿಕುಲಾಧೀಶ ಪಾಲಿಸಯ್ಯ
ಏಸು ನಿನ್ನಯ ಕರುಣರಾಶಿ ಎಂತಿಹುದಯ್ಯ
ಆಸೆ ಸಲಿಸಲು ಮನೆಗೆ ಲೇಸಾಗಿ ನೀ ಬಂದೆ ೧

ಪಶುಪತಿಯ ಮತ ದಹಿಸಿ
ಅಸುಪತಿಯ ಮತ ಮೆರೆದೆ
ವಸುಮತಿಯ ಸುರನಾಗಿ ಬಂದು ನಿಂದೆ
ಪಶುಪ್ರಾಯನೆಂದೆನ್ನ ಉದ್ಧರಿಸಲೋಸುಗದಿ
ಬಿಸಜತವಪಾದ ಪಾಂಸವನಿತ್ತೆ ೨

ಜಯಗುರುವೆ ಶ್ರೀ ವಿಜಯದಾಸರಲ್ಲೆನ್ನ ಮನೋ
ಜಯವು ಪುಟ್ಟಿಸಿದ ನಿನ್ನ ಕರುಣವೆಂತೊ
ಸೃಜಿಸಿ ತೋರಿದ ಸ್ವಪ್ನ ನಿಜವು ಆಗಲಿ ಎಂದು
ಬಿಜಯ ಮಾಡಿದೆ ನಿನ್ನ ನಿಜದಾಸರೊಡನೆ ೩

ಜಯಗುರುವೆ ನಿಮ್ಮ ಹೃದ್ಗುಹದಲಿ ನಲಿಯುತಿಹ
ವಾಯುವಂತರ್ಗತ ಕೃಷ್ಣನ ತೋರೋ
ಜಯತು ಶ್ರೀ ವೇಣುಗೋಪಾಲ ಮೂರ್ತೇ
ಜಯತು ಶ್ರೀ ವೇಣುಗೋಪಾಲನೆಂದೆನಿಸಿಯ್ಯ ೪

ಸೃಷ್ಟಿಗೆ ಬಂದು ನಾನೆಷ್ಟು ಜನ್ಮವ ಕಳೆದೆ
ಪುಟ್ಟಿದೆನೋ ನಾನೀಗ ಈ ಜನ್ಮದಿ
ಪುಟ್ಟಲಿಲ್ಲವೋ ಜ್ಞಾನ ಹರಿ ಗುರುಸ್ಮರಣೆಗೆ
ಇಟ್ಟಿಕಡೆಗಣ್ಣಿನೋಳಿಷ್ಟು ನೋಡಯ್ಯ ೫

ವಾದಿಮಸ್ತಕ ಭೇದಿ ಮೋದತೀರ್ಥರ ತತ್ವ
ಸಾಧಿಸಿದ ಸಾಧುವೇ ಸುಧೆಯನುಣಿಸಿ
ಭೇದಿಸಿ ವಾಕ್ ಯುದ್ಧ ಯೂಥಪಗಳನೆಲ್ಲ
ಗೆದ್ದು ಸತ್ತತ್ವದಾ ಸಿಂಹನಾದವ ಮಾಡ್ದೆ ೬

ಮಧ್ವರಾಯರಿಗೆ ನೀ ಮುದ್ದುಮೊಮ್ಮಗನಯ್ಯ
ಸದ್ವಿದ್ವದ್ಗ್ರಂಥ ಭಾರವನೆ ವಹಿಸಿ
ಮುದ್ದು ತೊತ್ತೆನಿಸಿ ಎತ್ತಾಗಿ ಸೇವಿಸಿ
ಯತಿಯಾಗಿ ನಿಂದ ತತ್ತ್ವಮುತ್ತಿನ ಖಣಿಯೆ ೭

ಇಳೆಯೊಳಗೆ ನಿನ್ನಂಥ ಕರುಣಾಳುಗಳ ಕಾಣೆ
ಅಳವಲ್ಲ ವರ್ಣಿಸಲು ನಿನ್ನ ಗುಣಗಳನು
ಕಳವಳಿಪ ಹೃದ್ವ್ಯಾಕುಲಗಳನೆ ಕಳೆಯೋ
ಮಳಖೇಡವಾಸ ಯತಿಕುಲಾಧೀಶಾ ೮

ಗುರುವೆ ನಿನ್ನಯ ಕರುಣಕವಚ ತೊಟ್ಟವರ
ಚರಣಕಮಲದೊಳಿಹ ಮಧುಪನೆಂದೆನಿಸೋ
ನಿರುತ ದೃಢಭಕುತಿ ಶ್ರೀ ವೇಂಕಟೇಶನೊಳಿಟ್ಟು
ಪೊರೆಯೊ ಶ್ರೀ ಗುರುವರಾಗ್ರಣಿಯೆ ನಮೋ ಎಂಬೆ ೯

## ೫೬

ಜಯರಾಯ ಜಯರಾಯ ಪ

ಜಯರಾಯ ಯೋಗಿವರ್ಯ
ದಯಾಮಾಡಿ ಎನ್ನ ಮನೋ
ಜಯವಿತ್ತು ನಿನ್ನ ಪಾದಸೇವೆಯ ನೀಡಯ್ಯ ೧

ದೇಶಪಾಂಡ್ಯರೊಳು ಕೂಸಾಗಿ ಜನಿಸಿ
ಅಶೇಷ ಜನರಿಗೆ ಶೇಷಾವೇಶವ ತೋರಿದೆ ೨

ಹೊತ್ತು ತಿರುಗುತ ಸರ್ವೋತ್ತಮನಾ ಗುಣಗ್ರಂಥ
ಬಿತ್ತರಿಸಿದೆ ಪೂರ್ಣಬೋಧರ ದಯದಿ ೩

ಅಮರಾಧಿನಾಥನ ಪಾದಾಶ್ರಯವೆಂದು ತುರ್ಯಾ
ಶ್ರಮದೊಳು ನಿಂದು ಶ್ರೀಧರನ ಸೇವಿಸಿದೆಯೊ ೪

ಬುಧಜನರಿಗೆ ಪೂರ್ಣಬೋಧರ ಮತಾಗಮ
ಉದಧಿಮಥಿಸಿ ಸಾರಸುಧೆಯನುಣಿಸಿದೆ ೫

ಅಗಣಿತಮಹಿಮನ ಗುಣಗಳ ಸ್ತುತಿಸುತ ಎ
ರಗೋಳದೊಳು ನಿಂತಸುಗುಣ ಯತೀಶ ೬

ಮಹಮಹಿಮನೆ ನೀ ಮಹಿಯೊಳು ಜನಿಸಿ
ಮೋಹವ ಹರಿಸಿದ ಮಾಧವಪ್ರೀಯಾ ೭

ಬುಧಜನಮಂದಾರ ವಾದಿಭಯಂಕರ
ಬೋಧರ ಕಿಂಕರ ಸುಗುಣರತ್ನಾಕರ ೮

ಪರಮಪುರುಷ ಶ್ರೀ ವೇಂಕಟೇಶಾತ್ಮಕ
ಉರಗಾದ್ರಿವಾಸವಿಠಲನ ದಾಸ ೯

## ೫೭

ಟೀಕಾಕೃತ್ಪಾದ ಕರುಣಾಕರ ಗುರು
ಶ್ರೀಕಾರಸರಿತವಾಸ
ನಾಕಾಧಿಪನೆ ಮನಶೋಕಾ ಹರಿಸಿ
ನೀ ಕಾಪಾಡುವುದು ನಿತ್ಯ ೧

ಪೂರ್ಣಬೋಧರ ಮತಾರ್ಣವಚಂದಿರ
ನಿರ್ಣಯಿಸಿದೆ ಟೀಕಾರ್ಣವದೊಳು ಸುಧ
ಉಣ್ಣಿಸಿದೆಯೊ ಗ್ರಂಥ ವರ್ಣಿಸಿಇರುವೆ ಸತ್ಯ ೨

ಮಿಥ್ಯಾವಾದಿಗಳ ಸತ್ಯ ತತ್ತ್ವವೆಲ್ಲ ಕತ್ತರಿಸಿದೆ ನಿತ್ಯ
ಎತ್ತ ನೋಡಲು ತಲೆ ಎತ್ತದಂತೆ
ದೈತ್ಯೋನ್ಮತ್ತರನೆಲ್ಲಾ ಸದೆದೆ ೩

ನಾಕಾಪತಿಗೆ ದೈತ್ಯಲೋಕಗಳಾ ಬಾಧೆ
ತಾ ಕಳೆಯಲು ನಿತ್ಯ
ಶ್ರೀಕರದಮೃತವ ಶ್ರೀಕಾಂತನಿತ್ತಂತೆ
ನೀ ಸುಧೆಯನು ತಂದೆ ೪

ದಶಪ್ರಮತಿಸುಶಾಸ್ತ್ರಶರಧಿಯೊಳು
ವಾಸಿಸುವೆಯೊ ನಿತ್ಯ
ಮೀಸಲಮನ ಕೊಟ್ಟೆನ್ನಾಸೆಯ ಹ
ರಿಸಿ ಪದಸೇವೆಯ ಕೊಡೊ ನಿತ್ಯ ೫

ಪಾಕಶಾಸನ ಸುಖ ಬೇಕಾಗಿ ತೊರೆದು ನೀ
ನೇಕಾಂತದಲಿ ನಿಂತೇ
ಲೋಕಸುಖದಿ ಭವಶೋಕದಲ್ಲಿಹ ಎ
ನ್ನ ಕಾಪಾಡುವುದು ನಿತ್ಯ ೬

ಶೇಷಾವೇಶ ಆವೇಶಾಮಹಿಮ ಎನ್ನ
ದೋಷರಾಶಿಯ ಕಳೆದು
ಶೋಷಿಸು ಮನಕಲ್ಮಷವಿಷವನೆಲ್ಲ ನಿ
ಶ್ಶೇಷವ ಮಾಡಿ ಸಲಹೊ ೭

ಹಲವು ವಿಷಯದ ಹಂಬಲದಿಂದ ಎನ್ನ ಜ್ಞಾನ
ಹೊಲಬುಗೆಟ್ಟುದು ನಿತ್ಯ
ಅಲವಬೋಧರ ತತ್ತ್ವ ಲವಮಾತ್ರವಾದರು
ನೀ ಎನಗೆ ಪಾಲಿಸೊ ೮

ಮುಕ್ತಿಮಾರ್ಗಕೆ ಜ್ಞಾನಭಕ್ತಿವೈರಾಗ್ಯಗುರು
ಭಕ್ತಿಯೆ ಮುಖ್ಯಕಾರಣ

ಯುಕ್ತಶಾಸ್ತ್ರ ಪ್ರಸಕ್ತಿ ಇಲ್ಲದ ತ್ವ
ದ್ಭಕ್ತನಾದೆನ್ನ ಸಲಹೊ ೯

ಅಕ್ಷೋಭ್ಯ ಕಟಾಕ್ಷದಿ ಯತಿ ಹ
ರ್ಯ್ಯಕ್ಷನಾಗಿಹೆ ದೀಕ್ಷಾ
ಶಿಕ್ಷೆಮಾಡಿ ಪರಪಕ್ಷವಾದಿಗಳನ್ನು ಸ
ತ್ಶಿಕ್ಷಕನಾಗಿ ಮೆರೆದೆ ೧೦

ಮರುತಾಂತರ್ಗತ ಶ್ರೀ ವೇಂಕಟೇಶನ ಪಾದ
ಚರಣಕಮಲಮಧುಪ
ನಿರುತ ನೀ ಕರುಣಿಸು
ಉರಗಾದ್ರಿವಾಸವಿಠಲನ ನಿಜದಾಸ ೧೧

## ೫೮

ತ್ರಾಹಿತ್ರಾಹಿ ಮಂತ್ರಾಲಯನಿಲಯ ಪ

ತ್ರಾಹಿತ್ರಾಹಿ ಮಂತ್ರಾಲಯ ಗುರುವೆ
ಸೂತ್ರನಪಿತಕೃಪಾಪಾತ್ರ ನೀನಹುದೊ ೧

ಧ್ಯಾನ ಮೌನ ಸುಜ್ಞಾನವಿಲ್ಲದಿಹ
ದೀನ ಜನರುದ್ಧಾರ ಗಂಭೀರ ೨

ವಸುಧೆಯೊಳಗೆ ದಶಪ್ರಮತಿ ಸುಶಾಸ್ತ್ರವ
ಪ್ರಸರಿಸಿ ತೋರಿದ ಅಸಮಮಹಿಮನೆ ೩

ಮೂಕ ಬಧಿರ ಅಂಧಾದಿಗಳ ಕುಂದುಗಳ
ವ್ಯಾಕುಲ ಹರಿಪ ಕೃಪಾಕರ ಮೂರ್ತೇ ೪

ಕರುಣಶರಧಿ ಸಿರಿರಮಣನ ಭಕುತಾಗ್ರಣಿ
ಸುಗುಣಗಣಾಭರಣಕೆಣೆಯೆ ೫

ಬೇಡಿದಿಷ್ಟವ ನೀಡಿ ಕಾಪಾಡುವೆ
ಈಡುಗಾಣೆ ನಿನಗೀ ನಾಡೊಳು ಇನ್ನು ೬

ಇಂದು ಮುಂದು ಎನ್ನ ಕುಂದುಗಳೆಣಿಸದೆ
ಕಂದನೆಂದು ಎನ್ನ ಮುಂದಕೆ ಕರೆಯೊ ೭

ಕ್ಷೋಣಿಯೊಳಗೆ ನಿನಗಾರೆಣೆಕಾಣೆನೊ
ವೀಣೆವೆಂಕಟ ನೀ ಸಂಕಟ ಹರಿಸೊ ೮

ಪಾಲಿಸಯ್ಯ ಪ್ರಹ್ಲಾದ ವ್ಯಾಸ ಭೂ
ನಲ್ಲ ನೀನಹುದೋ ಬಾಹ್ಲೀಕ ಪ್ರಭುವೇ ೯

ಬಗೆ ಬಗೆ ಪಾಪೌಘಗಳನು ಕಳೆಯುವ
ರಘುಪತಿಕಿಂಕರ ಶ್ರೀ ರಾಘವೇಂದ್ರ ೧೦

ಪವನಾಂತರಾತ್ಮ ಶ್ರೀ ವೇಂಕಟೇಶ ಪದ
ಕುವಲಯಕೆ ನೀ ಕುಮುದಬಾಂಧವ ೧೧

ಶಂಕುಕರ್ಣ ಲಂಕೇಶನನುಜ ಶ್ರೀರಾಮ-
ಕಿಂಕರನಕಳಂಕಮೂರುತೇ ೧೨

ಮರುತಮತಾಬ್ಧಿಯ ಸಾರಸುಧೆಯನಿತ್ತೆ
ಉರಗಾದ್ರಿವಾಸವಿಠಲನ ದೂತ ೧೩

## ೫೯

ಗುರು ಪ್ರಜ್ಞಾನಿಧಿ ತೀರ್ಥ ಚರಣಾಬ್ಜ ಸೇವೆಯ
ನಿರುತ ನೀಡಯ್ಯ ಯತಿವರ್ಯ ಯತಿವರ್ಯ
ಪೂರ್ಣಪ್ರಜ್ಞಾರ್ಯರ ತತ್ತ್ವವರುಹಯ್ಯ ಅರುಹಯ್ಯ ೧

ಕರುಣಾನಿಧಿಯೆ ನಿನ್ನ ಕಾರುಣ್ಯಕೆಣೆಯೆ ಶ್ರೀ
ಕಾರುಣ್ಯ ವಿಠಲನಾ ದಯಾಪಾತ್ರ ದಯಾಪಾತ್ರ
ಎನ್ನ ತಾಪತ್ರಯವ ಎನ್ನ ತಾಪತ್ರಯವ ಹರಿಸಿ ಸಲಹಯ್ಯ ೨

ಘೋರ ಸಂಸಾರದ ಶರಧಿ ದಾಟಿದ ಧೀರಾ
ಮಾರುತ ಮತಾಬ್ಧಿಯೊಳು ಚರಿಸುವೆ ಚರಿಸುವೆ
ಗುರುತೂರ್ಯ ಶ್ರಮವಹಿಸಿ ಮೆರೆಯುವೆ ಮೆರೆಯುವೆ ೩

ಮಾರ್ಗದೊಳು ಬರುತಿಹ ದುರ್ಮಾರ್ಗವನು ಜರಿದು ಸ
ನ್ಮಾರ್ಗವನ್ನು ತೋರುವ ಯತಿವರ್ಯ
ಯತಿವರ್ಯ ಎನ್ನ ಭವ
ದುರ್ಗವನೆ ಹರಿಸಿ ಸಲಹಯ್ಯ ಸಲಹಯ್ಯ ೪

ಗುರುವೆ ನಿನ್ನಯ ಕರುಣ ಕವಚವನೆ ತೊಡಿಸಯ್ಯ
ಕಾರುಣ್ಯ ವಿಠಲನ ಅರ್ಚಿಪೆ ಅರ್ಚಿಪಾ ನಿನ್ನೊಳು
ಕರುಣಾರಸಕೆ ಕುಂದುಂಟೆ ಕುಂದುಂಟೆ ೫

ಹಿಂದಿಲ್ಲ ಮುಂದಿಲ್ಲ ಒಂದು ಬೋಧಿಪೋರಿಲ್ಲ
ಮುಂದೆ ಬಾ ಎನ್ನುವರು ಮೊದಲಿಲ್ಲ ಮೊದಲಿಲ್ಲ
ಇಂದು ನಾ ಮಂದನಾಗಿಹೆ ಎನ್ನ ಕರುಣಿಸೋ ಕರುಣಿಸೋ ೬

ಬಂದುದಾಯಿತು ಜನ್ಮ ಸಂದು ಹೋಯಿತು ಆಯು
ಕುಂದಿತೆನ್ನಯ ಕರಣ ಇಂದಿನಾ ಇಂದಿನಾ ಪರಿ
ಯಂತಾಗಿರಲಿ ಮುಂದಿನಾ
ಪಥವೆನಗೆ ತೋರಯ್ಯ ತೋರಯ್ಯ ೭

ಮಂಕು ಮಾನವನ ಮನ ಡೊಂಕವನೆ ತಿದ್ದಿ ಶ್ರೀ
ವೇಂಕಟೇಶನ ಭಕ್ತನೆನಿಸಯ್ಯ ಎನಿಸಯ್ಯ ನಿನ್ನಾ
ಕಿಂಕರೊಳಗೆ ಕಿಂಕರನೆನಿಸಯ್ಯ ೮

ಕಾರುಣ್ಯವಿಠಲಾಭಿನ್ನ ಶ್ರೀ
ಉರಗಾದ್ರಿವಾಸವಿಠಲನ ನಿಜದಾಸ ನಿಜದಾಸ ನೀ
ಪರಮೋದಾರ ಗುರುವರ್ಯ ಯತಿವರ್ಯ ೯

## ಹರಿದಾಸರು

### ೬೦

ಭಜಿಸುವೆ ನಿನ್ನನು ವಿಜಯದಾಸಾರ್ಯನೆ ಪೊರೆಯೊ ಪ

ಭಜಿಸುವೆ ನಿನ್ನ ಪಾದಭಜಕಜನರ ಪಾದ
ರಜದೊಳಿಟ್ಟು ನನ್ನ ರಜತಮ ಹರಿಸೊ ಅ.ಪ

ವಿಜಯಸಾರಥಿಪ್ರಿಯ ನಿಜದಾಸ ನೀನೆಲೋ ಗುರುವೆ
ಅಜಪಿತನಜಸುತ ನಿಜಲೋಕಗಳೆಲ್ಲ
ಬಿಜಯ ಮಾಡಿ ನಿಜಗತಿಪ್ರದನಾರೆಂದು ನಿಜವನರಿತು
ಶ್ರೀ ಭುಜಗಶಯನ ಮೂರ್ಜಗಕೆ
ದೈವಾವೆಂದರುಹಿದ ಭೃಗುಮುನಿ ೧

ರಕ್ಷಿಸಬೇಕೋ ಶ್ರೀ ಲಕ್ಷ್ಮೀಶ ದಾಸನೆ ಗುರುವೆ
ಪಕ್ಷಿವಾಹನನ ನೀ ವಕ್ಷತಾಡನ ಮಾಡೆ ತಕ್ಷಣ
ಈ ಕ್ಷಿತಿ ಗಿರಿಯೊಳು ನಿಂದಾ
ಕುಕ್ಷಿಯೊಳು ಜಗದ್ರಕ್ಷಕನಾದ ಮು
ಮುಕ್ಷುಗಳೊಡೆಯನೆ ನೀಕ್ಷಿಸಿದಾ ಧೀರಾ ೨

ದ್ವಾಪರದಲ್ಲಿ ನಿಕಂಪನೆಂದೆನಿಸಿದೆ ಮೆರೆದೆ
ಶಾಪತನದಿ ವ್ಯಾಧರೂಪದಿಂದ ಶ್ರೀ ಗೋಪಾಲಗೆ ಬಾಣ
ಶ್ರೀಪಾದದಲ್ಲಿಟ್ಟು ಸರ್ಪಗಿರಿಯ ಶ್ರೀ ವೆಂಕಟೇಶ ನ
ಮ್ಮಪ್ಪನೆಂದು ತ್ರಿಜಗಕೆ ತೋರ್ದೆ ೩

ಉದ್ಧರಿಸಲು ನೀನುದ್ಭವಿಸಿದೆಯೋ
ಮಧ್ವಪತಿಯ ಅಭಿದಾನದಿ ನೀನು
ಮಧ್ವಾಗಮ ಶೋಧಿಸಿ ಸುಧೆಯ ತಂದು
ಶುದ್ಧ ದುಗ್ಧರನೆಲ್ಲ ಉದ್ಧಾರಮಾಡಿ ಪ್ರ
ಸಿದ್ಧಿ ಪಡೆದ ಅನಿರುದ್ಧನ ದಾಸನೆ ೪

ಪುರಂದರರದಾಸರ ವರ ಸುಕುಮಾರ ಧೀರಾ
ಉರಗಾದ್ರಿವಾಸವಿಠಲನ ದಾಸ ಭೂಸುರನಾಗಿ ಚಿಪ್ಪಗಿರಿಯೊಳು
ಮೆರೆಯುತಾ ನಿರುತ ಶ್ರೀಹರಿದಾಸರ ವೃಂದಗಳಿಂದ
ಪರಿಪರಿ ಸಾಧನ ತೋರಿ ಮೆರೆವ ಗುರು ೫

## ೬೧

ರಕ್ಷಿಸೋ ಜಗನ್ನಾಥದಾಸ ರಕ್ಷಿಸೋ
ರಕ್ಷಿಸು ಗುರು ಜಗನ್ನಾಥದಾಸ
ಪಕ್ಷಿವಾಹನನ ನಿಜದಾಸ ಮು
ಮುಕ್ಷು ಮಾರ್ಗವ ತೋರ್ದಧೀಶ ನೀನೆ ಪ್ರ
ತ್ಯಕ್ಷ ಪ್ರಹ್ಲಾದನನುಜ– ||ಅಹಾ||
ಈ ಕ್ಷಿತಿಯೊಳು ಸುರಶ್ರೇಷ್ಠನೆನಿಸಿ ವಿ
ಶಿಷ್ಟರ ಮನೋಭೀಷ್ಟವನಿತ್ತ ಹರಿದಾಸ ೧

ವೇದವಂದ್ಯನ ನಿಜತತ್ತ್ವ ನಿಜ
ಸಾಧುಜನರು ತಿಳಿಯೆ ನಿತ್ಯ (ಸತ್ಯ) ಪೂರ್ಣ
ಬೋಧರ ಗ್ರಂಥ ತತ್ತ್ವ ನೀತಿ ತ
ಪ್ಪದೆ ಪೇಳ್ದೆ ಮಹತ್ವ ||ಅಹಾ||
ಮೋದಪಡಿಸಿ ಮೋದತೀರ್ಥರ ಮತ ದು
ಗ್ಧಾಬ್ಧಿಸುಧೆಯನಿತ್ತ ಬಾದರಾಯಣನ ದಾಸ ೨

ಪ್ರಕೃತಿಬಂಧಕರಾದ ಜನರು ನಿನ್ನ
ಪ್ರಾಕೃತಗ್ರಂಥನೋಡಿ ಮೋದಿಪರು ಸತತಾ
ಪ್ರಾಕೃತನ ತಾ ವಂದಿಪರು ಜನ್ಮ
ಸುಕೃತಕ್ಕೆ ತಾವು ಸಾಧಿಪರು ||ಅಹಾ||
ಸಂಸ್ಕೃತ ಭಾಷೆಯ ಪ್ರಕರಣಗಳನೆಲ್ಲ ಪ
ರಿಷ್ಕೃತ ಪಡಿಸಿ ನೀ ಪ್ರಾಕೃತದೊಳು ತೋರ್ದೆ ೩

ವಿಪ್ರವರೇಣ್ಯನೆ ನೀನು ಜಗದಿ
ಅಪ್ರಮೇಯನ ಪ್ರಮೇಯವನ್ನೂ ಅದಕ್ಕೆ

ಸಪ್ರಮಾಣಗಳೆಲ್ಲವನ್ನೂ ತೋರಿ ದಿ
ಕ್ ಪ್ರದರ್ಶನ ಮಾಡಿ ಇನ್ನೂ ॥ಅಹಾ॥
ಸ್ವಪ್ರಯೋಜನ ರಹಿತ ಅಪ್ರಮೇಯನ ಮಹಿಮೆ
ಕ್ಷಿಪ್ರ ಭೋಧೆಯಾಗಲ್ ತ್ವತ್ಪ್ರಸಾದವನಿತ್ತೆ ೪

ನಿನ್ನುಪಕಾರದ ಪರಿಯಾ ನಾನು
ಜನ್ಮಜನ್ಮಾಂತರಕೆ ಮರೆಯೆ ನೀನೆ
ಘನ್ನ ಶ್ರೀಹರಿದಾಸಾಗ್ರಣಿಯೇ ಇನ್ನು
ನಿನ್ನ ಹರಿಕಥಾಮೃತಸಾರಕ್ಕೆಣೆಯೇ ॥ಅಹಾ॥
ಇನ್ನಿಲ್ಲ ನಿನ್ನಂಥ ಘನ್ನ ಕವಿಗಳ ಕಾಣೆ
ಪನ್ನಂಗಶಯನ ಶ್ರೀ ವೆಂಕಟೇಶನ ದಾಸಾ ೫

## ೬೨

ಪಾಲಿಸೋ ದಾಸರಾಯ ಗುರುವೆ ನೀ
ಪಾಲಿಸೋ ಗುರುವೆ ಪ

ಪಾಲಿಸು ನಾಗರಾಯಾಖ್ಯ ದಾಸ
ಶೀಲವರ್ಯನೆ ನೀ ಮುಖ್ಯ ॥ಅಹಾ॥
ಶ್ರೀಲೋಲನ ಗುಣ ಲೀಲಾಜಾಲದಿ ಆ
ಬಾಲವೃದ್ಧರಿಗರುಹಿ ಮೆರೆದ ಗುರು ಅ.ಪ

ಬಂದೆ ದಯಾಂಬುಧೆ ಎನ್ನ ಮನದ
ಕುಂದು ಕೊರತೆಗಳನ್ನ ಇನ್ನು
ಬಂದ ಸಂಶಯಗಳನ್ನ ಹರಿಸಿ
ಇಂದು ತೋರಿದೆ ನಂದವನ್ನ ॥ಅಹಾ॥
ತಂದೆ ಮುದ್ದುಮೋಹನ್ನವಿಠ್ಠಲನ್ನ ಹೃದಯಾರ
ವಿಂದದಿ ಮುದದಿ ನೋಡುವ ಗುರು ೧

ಮಾರ್ಗ ಮಾರ್ಗವನೆ ಚರಿಸುತ್ತಾ ದು
ರ್ಮಾರ್ಗರ ಎದೆ ಗೆಡಿಸುತ್ತಾ ಸ

ನ್ಮಾರ್ಗಕ್ಕೆ ನೀನವರ ತರುತ್ತಾ ಸಾರ್ದೆ
ದುರ್ಗದೊಳ್ ನೀ ಚರಿಸುತ್ತಾ ॥ಅಹಾ॥
ದುರ್ಗಮರಾದ ದುರಾಗ್ರಹ ನಿಗ್ರಹ
ಭೋಗ್ಗರೆದು ಸುಖ ಸಂಸರ್ಗವ ತೋರ್ದ ಗುರು ೨

ಪರಮ ಕರುಣದಿ ಇಂದೆನ್ನಾ
ಪೊರೆದೆ ಶ್ರೀ ವೆಂಕಟೇಶಾಭಿನ್ನಾ
ಉರಗಾದ್ರಿವಾಸವಿಠ್ಠಲಾಖ್ಯನ್ನಾ
ತೋರಿಕೊಟ್ಟೆ ನೀನಂಕಿತವನ್ನಾ ॥ಅಹಾ॥
ಗುರು ನಿನ್ನ ಕರುಣಕ್ಕೆಣೆಯುಂಟೆ ಧರೆಯೊಳು
ಉರಗಾದ್ರಿವಾಸವಿಠ್ಠಲನ ನಿಜದಾಸ ೩

## ಆತ್ಮನಿವೇದನೆ

### ೬೩

ಅಚಿಂತ್ಯಾದ್ಭುತ ಮಹಿಮ ಈ ಸಚರಾಚರದೊಳು
ಪ್ರಚುರನಾಗಿಹೆ ದೇವಾ ಮುಚುಕುಂದವರದಾ ಪ

ಅಚಲಭಕುತಿಯು ನಿನ್ನ ಚರಣದಿ
ಕಿಂಚಿತಾದರೂ ಪ್ರಚುರಮಾಡಿಸು
ಅತಿಚಂಚಲನು ಬಲು ವಂಚಕನು ನಾ ಅನು-
ಚಿತೋಚಿತ ಕರ್ಮವರಿಯೆನೋ ಅ.ಪ

ವಿಪಿನವಾಸದಿ ಎನಗೆ ವಿಪರೀತವನು ತೋರಿ
ಅಪರಾಧವೆಣಿಸದೆ ಪಾಲಿಸಿದೇ
ಕೃಪಣವತ್ಸಲ ನೀನೇ ಕೃಪೆಮಾಡಿ ಸ್ವಪನದಿ
ಅಪರಿಮಿತದ ವಿಶ್ವರೂಪವ ನೀ ತೋರ್ದೆ
ಅಪರಾಧಿ ನಾನಹುದೋ ಸ್ವಾಮಿ ಅಪವರ್ಗಪ್ರದನು ನೀನು
ಸಫಲಗೊಳಿಸಿದೆ ಎನ್ನ ಮನದನು-
ತಾಪವನು ಪರಿಹರಿಸಿ ಕಾಯ್ದೆ

ಈಪಯೋಜಾಂಡದೊಡೆಯ ಬಿಡದೆ
ನಿನ್ನಡಿದಾವರೆಯ ನಂಬಿದೆನೋ
ಶ್ರೀ ಪರಮಹಂಸರಿಂದ ನುಡಿಸಿದ ರಹಸ್ಯಗಳು ಅದುಏನೋ
ಶ್ರೀ ಪುರುಷೋತ್ತಮನೆ ನೀನೆನ್ನಭಯಹಸ್ತದಿ
ಕರೆದ ಪರಿಯೇನೋ ಅದನೊಂದನರಿಯೆನೊ
ಈಪರಿಯ ಕರಚರಣದಲಿ ಚರಿಸಿದ
ಅನುಪಮ ಕ್ರಿಯೆಯ ನೋಡಿ ಮನದೊಳು
ಸುಪುತಕಾಲದಿ ತೈಜಸನೆ ನೀನೆನ್ನ
ಪುಳುಕಾಂಕಿತನ ಮಾಡಿದೇ ೧

ಹಲವು ಜನ್ಮವನೆತ್ತಿ ಹೊಲಬುಗೆಟ್ಟು ತಿರುಗುತ
ಫಲವಿಲ್ಲದೆ ಅಮಿತ ಕಾರ್ಯವನೆಸಗೀ
ಬಲು ಯಾತನೆಗೊಂಡು ಇಳೆಯೊಳು ಬಾಳೀ ದು-
ರ್ಬಲನಾಗಿದ್ದರು ಎನ್ನ ಛಲವು ತೊಲಗಲಿಲ್ಲ
ಜಲಜನಾಭನೆ ನೀನೆ ಕರುಣಿಸಿ ಸಲಹದಿರ್ದೊಡೆ ಪ್ರ-
ಬಲರೆನ್ನನು ಕವಿದು ಮನಚಂಚಲವ ಪುಟ್ಟಿಸೀ
ವಲೀಮುಖನಂತಾಡಿಸುವರೋ
ಶ್ರೀಲೋಲನೆ ನೀನೆನ್ನ ಮನದ
ಕಲಿಮಲವನ್ನೆ ಪರಿಹರಿಸುವುದೋ
ತಿಲಮಾತ್ರ ನಿನ್ನನು ಧೇನಿಸಲು
ಮನದಿ ಎಡೆಯು ದುರ್ಲಭವೋ
ಒಲುಮೆಯಿಂದಲಿ ಸಾಧಿಸಲು ಎಲ್ಲೆಡೆಯ ಸರ್ವತಂತ್ರ
ಸ್ವಾತಂತ್ರ್ಯ ನಿನ್ನದೋ ಭೋ ಜಗತ್ಪತೇ
ಕಾಲನಾಮಕ ನೀನೆ ಆಪತ್ಕಾಲಬಾಂಧವವೆಂದು ನಂಬಿದೆ
ಜಾಲಮಾಡದೆ ಎನ್ನ ಜೀವಿತದಲ್ಪಕಾಲದಿ ಕರುಣೆ ತೋರ್ವೈ ೨

ತುಷ್ಟನೆಂತಾಗುವೆಯೊ ಭ್ರಷ್ಟಪಾತಕಿ ನಾನು
ಕಷ್ಟವಲ್ಲವೋ ನಿನಗೆ ಶ್ರೇಷ್ಟಮೂರುತಿಯೆ
ಇಷ್ಟಮೂರುತಿಯೆಂದು ಇಷ್ಟು ನುಡಿದೆನೊ
ಸಾಷ್ಟಾಂಗ ನಿನ್ನೊಳು ಇರಲೋ ಇಷ್ಟೇ ಎನ್ನದೊ ದೇವಾ

ಕಷ್ಟಕಷ್ಟವೊ ಬೆಟ್ಟದೊಡೆಯ
ಕೊಟ್ಟುದಷ್ಟು ನಿನ್ನದಯ್ಯಾ ಇಷ್ಟೆಬೇಡುವೆ ಎನಗೆ ಎ-
ಳ್ಳಷ್ಟು ಭಕುತಿಯ ಕೊಡದಿರುವೆಯಾ
ಸೃಷ್ಟಿಸ್ಥಿತಿಲಯನಿಯಮನಾದ್ಯಷ್ಟ
ಕತೃತ್ವವು ನಿನ್ನದೊ ಅಷ್ಟಾಂಗಯೋಗದಿ
ತುಷ್ಟಪಡಿಸೆ ತನುಮನೋಧಿಷ್ಟಾನವು ನಿನ್ನದೊ
ಶ್ರೇಷ್ಠಮೂರುತಿ ಸುಲಭದಲಿ ನೀ
ದೃಷ್ಟಿಗೋಚರವಾಗುವುದು ಇನ್ನೆಂತೋ ಹಾ ಕಷ್ಟಕಷ್ಟವೋ
ಸೃಷ್ಟಿಯೊಳು ನಾನೆಷ್ಟರವ ನಿನ್ನಿಷ್ಟಬಂದಂತಾಗಲಿ ಭವ-
ಕಷ್ಟಪರಿಹರಿಸೆನ್ನ ಕಾಯೋ
ಶ್ರೀ ವೇಂಕಟೇಶ ಉರಗಾದ್ರಿವಾಸವಿಠಲ ೩

## ೭೪

ಎಂದು ಕಾಂಬೆನು ನಾನುಗೋ-
ವಿಂದ ನಿನ್ನಯ ಪಾವನ್ನ ಪಾದವನ್ನು ನಾ
ಪೊಂದಿಸೇವಿಸಿ ಆನಂದಪಡುವುದಕಿನ್ನು ಕರುಣಿಸೈ ಮುನ್ನ ಪ

ಎಂದಿಗಾದರು ನಿನ್ನಪದಯುಗ
ಪೊಂದಿ ಮಹದಾನಂದ ಪಡೆಯಲು
ಕಂದಿಕುಂದಿತು ತನುಮನೇಂದ್ರಿಯ
ಇಂದೆ ತೋರಿಸೊ ಪಾದಕಮಲವ ಅ.ಪ

ಬಾಲತನದಲಿ ನಾನು ಶ್ರೀಲೋಲ ನಿನ್ನಿಂದ
ಪಾಲಿತನಾದೆನೊ ಬೆಲೆಯುಳ್ಳ ಆಯುವನೆಲ್ಲ
ಕಳೆದು ಬಿಟ್ಟೆನು ನಾನು ಕೆಲಕಾಲದಲಿ ನಾ
ಕಲುಶಕ್ರಿಯೆಗಳನ್ನು ಫಲವಿಲ್ಲದೆಸಗಿದೆನು
ಎಲ್ಲರೊಳು ನೀ ನೆಲಸಿ ಜೀವರ ಎಲ್ಲಕರ್ಮವ ಮಾಡಿಸಿ
ಫಲವೆಲ್ಲ ಅವರಿಗೆ ಇತ್ತು ನೀ ನಿರ್ಲಿಪ್ತನೆಂದು ತಿಳಿಯದಲೆ
ಖುಲ್ಲಮಾನವರೊಡನೆ ಬೆರೆತು

ಫುಲ್ಲಲೋಚನ ನಿನ್ನ ಮರೆದು
ಇಲ್ಲ ಎನಗೆ ಎಣೆಯೆನುತ ನಾ
ಬಲುಹೆಮ್ಮೆಯಿಂದಲಿ ದಿನಗಳ ಕಳೆದೇ
ಇಲ್ಲನಿನಗೆಸರಿಯಿಲ್ಲ ನೀ
ನಿಲ್ಲದಾಸ್ಥಳವಿಲ್ಲ ಜಗದಾ ಎಲ್ಲ
ಕಾಲಗಳಲ್ಲಿ ಇಹ ಶ್ರೀನಲ್ಲ ನೀನೆಲ್ಲ ಬಲ್ಲೆಯೊ ೧

ಬರಿದೇ ಕಾಲವ ಕಳೆದೇ ಶ್ರೀಹರಿಯೆ ನಿನ್ನಯ
ಸ್ಮರಣೆಯನ್ನು ಮಾಡದೇ
ಪರಿಪರಿಯ ತನುಮನ ಕ್ಲೇಶಗಳಿಗೊಳಗಾದೆ
ಪರಿಹರಕೆ ನಿನ್ನಯ
ನಾಮಸ್ಮರಣೆಯೊಂದಲ್ಲದೇ ಇನ್ನೆಲ್ಲಾ ಬರಿದೇ
ಪರಮಕರುಣಾಶರಧಿ ಎಂಬುವ
ಕರಿಧ್ರುವಬಲಿಮುಖ್ಯರೆಲ್ಲರ
ಪೊರೆದ ಕೀರುತಿ ಕೇಳಿ ನಂಬಿದೆ
ಶರಣಜನಮಂದಾರನೆಂದು
ಅರಿಯೆ ನಾನವರಂತೆ ಸಾಧನ
ಅರಿತು ಮಾಡುವ ಪರಿಯು ತಿಳಿಯದು
ಬಿರುದು ಭಕ್ತಾಧೀನನೆಂದು
ಹರಿಯೆ ನಿನ್ನಯ ಮರೆಯಹೊಕ್ಕೆನು
ದುರಿತಶರಧಿಯೊಳಾಡುತಿರುವನ ಉ-
ತ್ತರಿಸಲೊಂದೇ ನಾವೆಯಂತಿಹ
ಚರಣಸ್ಮರಣೆಯಕೊಟ್ಟು ರಕ್ಷಿಸು
ಪುರುಷಸೂಕ್ತಸುಮೆಯ ಜೀಯಾ ೨

ಶೇಷಗಿರಿಯವಾಸ ಶ್ರೀ ಶ್ರೀನಿವಾಸ
ದೋಷರಹಿತ ಸರ್ವೇಶ ಮನೋ-
ಕಾಶದಲಿ ಅನವರತ ನಿಲ್ಲೊ

ಶ್ರೀಶಾ ಬಿಡಿಸೆನ್ನ ಭವಬಂಧ ಗ್ರಂಥಿಯ
ಪಾಶಾ ಹರಿಸುವುದು ಕ್ಲೇಶಾ
ಶ್ರೀಶ ನಿಗಗತಿಶಯವೆ ಎನ್ನಯ
ವಿಷಯದಭಿಲಾಷೆಗಳ ಬಿಡಿಸೀ
ದೋಷರಹಿತನ ಮಾಡಿಸೀ ಎನ್ನ
ಪೋಷಿಸೋ ನಿನ್ನಸ್ಮರಣೆಯಿತ್ತು ದ್ವಾಸುಪ-
ರ್ಣ ಶ್ರುತಿಗಳಿಂದಲಿ
ಈಶ ದಾಸರ ಭಾವ ತಿಳಿಯದೆ
ಮೋಸಹೋದೆನೊ ಬೋಧೆ ಇಲ್ಲದೆ
ವಾಸುದೇವನೆ ರಕ್ಷಿಸೆನ್ನನು
ಏಸುಕಾಲಕು ನೀನೆ ಗತಿ ಎಂದು
ಆಸೆ ಮಾಡುವೆ ನಿನ್ನ ಕರುಣಕೆ
ಬೇಸರದಲೆ ಮೊರೆಯ ಲಾಲಿಸಿ
ಶ್ರೀಶ ಶ್ರೀ ವೆಂಕಟೇಶನೆ ೩

## ೬೫

ಏನೂ ತೋಚದೋ ಮುಂದೇನು ಗತಿಯೋ ದೇವಾ
ದೀನವತ್ಸಲ ಕಾಯೋ ಅಪ್ರಮೇಯ ಸದಾ ಪ

ನಾನು ನನ್ನದು ಎಂಬಭಿಮಾನದಿಂದನುದಿನ
ಹೀನಕರ್ಮದ ಸುಳಿಯೊಳು ನಾ ನೊಂದು ನಿಂದೆನೊ ಅ.ಪ

ಬೋಧೆ ಇಲ್ಲದೆ ನಾನು ಬಾಧೆಪಡುವೆ ಪೂರ್ಣ
ಬೋಧರ ಮತತತ್ತ್ವ ಸಾಧಿಸಲಿಲ್ಲವೋ
ಸಾಧುಸಜ್ಜನರೆಂದು ಆದರಿಸಲರಿಯೆನೋ
ಆಧಾರನಾಗೋ ನಿರಾಧಾರನಾಗಿಹೆ
ಬಾಧಿಪರೋ ಬಂಧುಗಳು ಪ್ರತಿದಿನ

ನಿಂದಿಪರೋ ಮನಬಂದ ತೆರದಲಿ ಊರೊಳಿತರಜನ
ಉದಯಾಸ್ತ ಪರಿಯಂತರದಿ ಎನಗೆ
ಉದರದ ಯೋಚನೆ ಆದುದೀಪರಿ ಎನ್ನ ಜೀವನ
ಇದಕೆ ಸಾಧನಮಾಡಿ ಮೋಹದ
ಮದದಿ ಮೈಮರೆದೆನನುದಿನ
ಪದುಮನಾಭನೆ ಮೊರೆಯಿಡುವೆ
ಮುಂದೇನು ಗತಿ ಪಥವಾವುದೋ ದೇವಾ ೧

ಯುಕುತಿಯಿಂದಲಿ ಕರ್ಮಮಾಡಿ ಬೆಂಡಾದೆ
ಭಕುತಿಮಾತ್ರವು ಎನ್ನೊಳಿನಿತಿಲ್ಲವೋ
ಶಕುತಿಯುಕುತಿಗಳೊಳು ನೀನಿದ್ದು ನಡೆಸುವೆ
ಭಕುತಿ ಕೊಡದಿರುವೆಯಾ ಮುಕುತರೊಡೆಯಾ
ಮಾಕಳತ್ರನೆ ನಿನ್ನ ದಯವೊಂದನವರತ ಇರಲಿ
ಅಕುಟಿಲಾಂತಃಕರಣ ಭಕ್ತರ ಸಂಗವೆನಗಿರಲಿ
ನಿಖಿಲಗುಣಗಣಪೂರ್ಣ ನಿನ್ನಯ ಸ್ಮರಣೆಯೊಂದಿರಲಿ
ಸಾಕು ಇದಕಾನೇನು ಮಾಡಲಿ ವಾಕುಮನಸಿಗೆ ಸಿ-
ಲುಕದವ ನಿನ್ನ ಕಾಕುಮನುಜ ನಾನೆಂತು ತಿಳಿಯಲಿ
ನೀ ಕರುಣಿಸದಲಿರೆ ಇನ್ನು ಅವಿ-
ವೇಕಿ ನಾನಿನ್ನೆಂತುಗ್ಗೈಯಲಿ ೨

ನರಜನುಮದಿ ಬಂದು ಬರಿದೆ ಆಯುವ ಕಳೆದೆ
ಹರಿಯೆ ನಿನ್ನಯ ಕರುಣ ದೊರೆಯಲಿಲ್ಲಾ
ಕರೆಕರೆಪಡುತಲಿ ಜರೆಯೊಳಾಡುತಿಹೆ
ಪರಿಹಾರ ತೋರೆನಗೆ ದುರಿತ ಹರೇ
ದಾರಿ ಎನಗೇನಿಹುದೋ ಇನ್ನು ಮುಂದೆ
ಪರಿಪರಿಯ ತನುಮನ ಕ್ಲೇಶ ಕೊಡದಲೆ
ಪಾರುಗಾಣಿಸೋ ತಂದೆ ಶರಣಜನರಿಗನವರತ
ಸುರಧೇನು ನೀನೆಂದೇ ಅರಿಯದವ ನಾ ನೀ
ಪೊರೆಯಲರಿದೇ ಕರುಣಾಶರಧಿಯೇ ನಿನ್ನ ಕೃಪೆಯೊಂದಿರಲು

ಉರುತರ ಸಾಧನವು ಅದು
ತರವರಿತು ಧೃಢಭಕ್ತಿ ಪಾಲಿಸೊ
ಉರಗಗಿರಿ ಶ್ರೀ ವೇಂಕಟೇಶನೆ ೩

## ೬೬

ಕಷ್ಟ ಕಷ್ಟವೋ ಕೃಷ್ಣ ದೃಷ್ಟಿಯಲಿ ನೋಡದಿರೆ
ತುಷ್ಟಿಪಡಿಸಲು ನಿನ್ನ ನಾನೆಷ್ಟರವನಯ್ಯ ಪ

ಭ್ರಷ್ಟನಾಗಿಹೆ ನಾ ಅಷ್ಟಾಂಗಯೋಗವ ತಿಳಿಯೆ ಒಂ-
ದಿಷ್ಟು ಭಕುತಿಯ ಕೊಟ್ಟು ಕಡೆಹಾಯಿಸಯ್ಯ ಅ.ಪ

ಸತ್ಯ ಅಸ್ತೇಯ ಬ್ರಹ್ಮಚರ್ಯ ಅಹಿಂಸಾ
ಧೃತಿ ದಯಾ ಕ್ಷಮಾರ್ಜಿತ ಮಿತಭುಕ್ತವು
ನಿತ್ಯ ಬಾಹ್ಯಾಂತರ ಶೌಚಾದಿ ದಶಗುಣ
ಯುತವಾದಯಮ ಉಪಾಸನೆಗಳಿನಿತಿಲ್ಲವೋ ದೇವಾ ೧

ನಿಯಮ ಮೊದಲಿಲ್ಲ ಜಪತಪ ಸಂತೃಪ್ತಿ
ನಿಯತ ಸಿದ್ಧಾಂತ ಶ್ರವಣ ಲಜ್ಜಮತಿಯು
ಶ್ರೀಯಃಪತಿಯ ಪೂಜನ ಆಸ್ತಿಕ್ಯವ್ರತ ದಾನೋ-
ಪಾಯವಿಲ್ಲದೇ ಕಡೆ ಹಾಯ್ವುದೆಂತಯ್ಯ ೨

ಘಾಸಿಯಾಗಿಹುದಯ್ಯ ಷಡ್ವಿಧಾಸನಗಳೂ
ಸ್ವಸ್ತಿಕ ಭದ್ರಪದ್ಮ ಅರ್ಧಾಂಗಾಸನದಿ
ಸಿದ್ಧ ಪರ್ಯಂಕಗಳೆಂಬ ಆಸನದಿ ಕುಳಿತು
ನಾ ಧೇನಿಸಲರಿಯೆ ಹರಿಯೇ ೩

ಪ್ರಾಣಾಯಾಮವ ಕ್ರಮವು ರೇಚಕ ಪೂರಕವು
ದಣಿವಿಲ್ಲದೆ ಕುಂಭಕದ ಕ್ರಮವಿಲ್ಲ
ತ್ರಾಣವಿಲ್ಲವೋ ವಾಯುಬಂಧ ಮಾಡಲರಿಯೆ
ಪ್ರಾಣಪತಿ ನಿನ್ನ ಕರುಣವಿಲ್ಲದಾತನಕ ೪

ವಿಷಯಾಭಿಲಾಷೆಯಿಂದ್ಹರಿದು ಹೋಯಿತು ಮನಸು
ವಿಷಮವಾಗಿಹುದಯ್ಯ ಮತ್ಸಾಧನ
ಹೃಷೀಕಪನೆ ಪ್ರತ್ಯಾಹಾರ ಸಾಧನವಿಲ್ಲ
ಕೃಷಿಮಾಡಿ ಸ್ಥಿರಮನದಿ ಧೇನಿಸಲು ನಾನರಿಯೆ ೫

ಧಾರಣೋಪಾಯದೊಳು ಅಣುಮಾತ್ರ ನಾನರಿಯೆ
ನರಕ್ರಿಮಿಯಾಗಿ ನಾ ಧರೆಯೊಳುಳಿದೆ
ಅರಿಯೆ ಬಾಹ್ಯಾಂತರದಿ ಭೂತಪಂಚಕವಿರುವ
ಪರಿ ತಿಳಿದು ಪ್ರಾಣವಾಯು ಸಡಿಲಬಿಡಲರಿಯೆ ೬

ಧ್ಯಾನಿಸಲು ಏಕಾಗ್ರಚಿತ್ತವೇ ಎನಗಿಲ್ಲ
ಸಂಸ್ತುತಿಸೆ ಸಂಪ್ರಜ್ಞಾ ಅಸಂಪ್ರಜ್ಞವೆಂಬ
ಘನಸಮಾಧಿಯೊಳ್ ಪರಿವಿಲ್ಲದಲೆ
ನಿನ್ನ ಕರುಣವೆಂತಾಗುವುದೋ ಶ್ರೀ ವೇಂಕಟೇಶಾ ೭

ಶುದ್ಧವಾದ ದ್ವೈತತ್ರಯ ತಿಳಿಯದಲೆ
ಮುಗ್ಧನಾಗಿಹೆ ನಾನಪರಿಶುದ್ಧನೊ
ಶಬ್ದಗೋಚರ ನಿನ್ನ ಪರಿಶುದ್ಧ ಭಾವದಿಂ
ಬುದ್ಧಿಪೂರ್ವಕ ತಿಳಿಯೆ ಬದ್ಧಪಾಮರನಯ್ಯ ೮

ಕರಣತ್ರಯದಲಿ ಮಾಳ್ಪ ಕ್ರಿಯೆಗಳೆಲ್ಲವು ಸತತ
ಹರಿಯೇ ಬಿಂಬಕ್ರಿಯವ ನಾನರಿಯದೇ
ಕರುಣಶರಧಿಯೆ ನೀ ಕೃಪೆಮಾಡಿ ಪೊರೆಯದಿರೆ
ಉರಗಾದ್ರಿವಾಸವಿಠಲ ನಿನ್ಹೊರತು ಗತಿಯುಂಟೆ ೯

## ೬೭

ಜಯ ಜಯಾ ಶ್ರೀ ವೆಂಕಟೇಶ ಜೀಯ ಪ

ಜಯ ಶ್ರೀ ವೆಂಕಟೇಶಜೀಯ ನೀನೆ
ಭಯಪ್ರದಾಯಕನಯ್ಯ ॥ಆಹಾ॥

ಭಯಕೃದ್ಭಯನಾಶನ ನೀ ಎನ್ನ ಕೈಬಿಡದೆ
ಕಾಯೊ ಎನ್ನೊಡೆಯನೆ ವೇಂಕಟರಾಯ ಅ.ಪ

ಮಂಕುಮಾನವನಾದ ಎನ್ನ ಮನದ
ಡೊಂಕು ತಿದ್ದಿದಿ ಸ್ವಪನವನ್ನ ನಿನ್ನ
ಅಂಕಿತದಂತೆ ನುಡಿಸೆನ್ನ ಇನ್ನು
ಮಂಕುಹರಿಸಿದೆ ಪ್ರಸನ್ನ ||ಆಹಾ||
ಬಿಂಕದಿಂದ ಇಹ ಶಂಕೆ ಹರಿಸಿ ನಿನ್ನ
ಕಿಂಕರ ಕಿಂಕರ ಕಿಂಕರನೆನಿಸಿದೆ ೧

ಹಿಂದನೇಕ ಪರಿಯಿಂದ ಮನ
ಬಂದಂತೆ ನುಡಿಸಿದ್ದರಿಂದ ತಂದೆ
ಮುದ್ದು ಮೋಹನ ವಿಠ್ಠಲಾನಂದ ಪೊಂದಿ
ಸಂದೇಹ ಹರಿಸಿದ ಚಂದ ||ಆಹಾ||
ಇಂದು ಮುಂದು ಎಂದೆಂದಿಗೂ ನೀ ಭವ
ಬಂಧ ಹರಿಸಿ ಕಾಯಬೇಕು ಇಂದಿರೆರಮಣ ೨

ತ್ವರಿತಾದಿ ದಯಮಾಡೋ ಹರಿಯೆ ನೀನೆ
ನಿರುತ ಎನ್ನಯ ಕುಲದ ದೊರೆಯೇ ಭಕ್ತ
ಪರಿಪಾಲ ಮೋಕ್ಷದ ಹರಿಯೇ ನಿನ್ನ
ಹೊರತು ರಕ್ಷಕರ ನಾನರಿಯೆ ||ಆಹಾ||
ಪರಮಕರುಣಿ ಶ್ರೀ ವೇಂಕಟೇಶಾಭಿನ್ನ
ಉರಗಾದ್ರಿವಾಸವಿಠಲ ಜಗದೀಶನೆ ೩

## ೬೮

ಧನ್ಯನಾದೆನೊ ಇಂದು ನಿನ್ನಪಾದ
ಸನ್ನಿಧಿಯ ಘನ್ನ ದರುಶನದಿಂದಲಿ ಪ

ಮುನ್ನ ದುರಿತಗಳೆಲ್ಲವು ಭಿನ್ನಭಿನ್ನವುಮಾಡಿ
ಬನ್ನಬಡಿಸದೆ ಎಮ್ಮ ಸಲಹುವಸ್ವಾಮಿ ಅ.ಪ

ಸುಮನಸರೊಡೆಯ ಕಾಲನಾಮಕನಾಗಿಪ್ಪ ಮೋದ
ನಾಮ ವತ್ಸರದಿ ವಿಮಲ ಚೈತ್ರಕೃಷ್ಣಪಕ್ಷದಶಮಿ
ಸೌಮ್ಯವಾಸರದಿ ದ್ಯುಮಣಿ ಉದಯಕಾಲದಲಿ
ಮಮಕುಲಸ್ವಾಮಿಯೆ ಎನ್ನ ವಂಶಜಾಪ್ತರ
ಅಮಿತಶ್ರಮ ಪರಿಹರಿಸಿ ಈಗ
ಶ್ರೀಮನೋಹರ ನಿನ್ನ ವಿಶ್ವರೂಪವ ತೋರ್ದೆ
ಪ್ರೇಮ ಇಂದಿಗೆ ಆಯಿತೆ ಅಮಿತಜನ ಬಂಧು ೧

ನಿನ್ನ ದರುಶನವೆಂದಿಗಂದಿಗಾಗಲಿ ಎಂದು
ನಿನ್ನ ಧ್ಯಾನವನೆ ಮಾಡಲು ಸನ್ನುತಾಂಗನೆ ನೀನೆ
ಘನ್ನ ಕರುಣವು ಮಾಡಿ ಎನ್ನ ಯತ್ನವು ಇಲ್ಲದೆ
ನಿನ್ನ ದರುಶನಕ್ಕಾಗಿ ಅನ್ಯರಿಂದ ಪ್ರೇರಿಸಿ
ಎನ್ನಲ್ಲಿ ಮನವು ಪುಟ್ಟಿಸಿದೆ ಪನ್ನಗಾಚಲನಿಲಯ
ನಿನ್ನ ಮಹಿಮೆ ಎಂತುಂಟೋ ಎನ್ನನಿಲ್ಲಿಗೆ ತಂದು
ಘನ್ನ ದರುಶನವಿತ್ತೆ ೨

ಪಂಕಜೋದ್ಭವನಯ್ಯ ಮಂಕುಕವಿಸಿದೆ ಪಯಣ
ಶಂಕೆಯ ಪರಿಹರಿಸಿ ಸಂಕಟಹರಿಸಿ ನಿನ್ನ
ಕಿಂಕರರೊಳು ಸೇರಿಸಿ ಬಿಂಕದಲಿ ಗಿರಿಯನೇರಿಸಿ
ಪಂಕಜನಾಭ ಮುಕುಂದ ಗೋವಿಂದ
ಶಂಕರನುತಪೂಜಿತ
ಶಂಖತೂರ್ಯಾದಿ ವಾದ್ಯಗಳಿಂದಲಿ ಶ್ರೀ
ವೇಂಕಟೇಶ ನಿನ್ನ ನೋಡಿದೆ ಬಿಡದೇ ೩

## ೬೯

ಬರಬಾರದಾಗಿತ್ತು ಬಂದೆನಯ್ಯಾ ಪ

ಕರೆತರಲು ಬಂದುದಕೆ ಫಲವೇನೊ ದೇವಾ ಅ.ಪ

ತರಳತನದಲ್ಲಿ ಎನ್ನ ಕರಣಗಳು ಮಾಡಿದ
ಪರಿಪರಿಯ ಕ್ರೀಡೆಗಳ ಫಲವೇನೊ ಎನಗೆ

ಮರಳಿ ಯೌವನ ಬರಲು ದುರುಳ ಸಂಗದೊಳಿದ್ದು
ಹರುಷದಿಂದಲಿ ಎನ್ನ ಆಯುವನು ಕಳೆದೆ ೧

ಸತಿಸುತರು ಹಿತರಿವರು ಎನಗೆಂದು ಉಬ್ಬುಬ್ಬಿ
ಮಿತಿ ಇಲ್ಲದಾ ಕಾರ್ಯಗಳನೆ ಮಾಡೀ
ಗತಿಯೇನು ಮುಂದು ಹಿತವು ಯಾವುದು ಎಂದು
ಮತಿಗೆಟ್ಟಮೇಲೆನಗೆ ಗೊತ್ತಾಗುವುದೆಂತೋ ೨

ಶ್ವಾನ ಸೂಕರಗಳು ಸ್ವೇಚ್ಛೆಯಿಂದಲಿ ಚರಿಸಿ
ತನ್ನ ಪರಿವಾರವನೆ ತಾ ಪೊರೆಯುತಿಹವೋ
ಎನ್ನ ಸತಿಸುತರುಗಳ ಉದರಪೋಷಣೆಗಾಗಿ
ಹೀನಸೇವೆಯಿಂದ ಉಪಜೀವಿಸಲು ಬಹುದೆ ೩

ತನುಬಲವು ಇದ್ದಾಗ ಕೋಣನಂದದಿ ತಿರುಗಿ
ಜ್ಞಾನ ಕರ್ಮಗಳನ್ನು ಆಚರಿಸದೇವೆ
ಧನ ವನಿತೆ ಮೋಹಕೆ ಕೊನೆಮೊದಲು ಇಲ್ಲದೆ
ಮನವೆಲ್ಲವನು ನಾನು ಹೊಲೆಗೆಡಿಸಿದಮೇಲೆ ೪

ವಿಕಳಮತಿಯನು ಹರಿಪ ಅಕಳಂಕ ಹರಿಭಕ್ತ-
ರಕುಟಿಲಾಂತಃತರಣ ದೊರೆತು ಎನ್ನ
ಸಕಲಾಪರಾಧಗಳ ಕ್ಷಮಿಸುವರ ಸಂಗ
ನೀ ಕರುಣಿಸದಿದ್ದ ಮೇಲೆ ಶ್ರೀ ವೇಂಕಟೇಶಾ ೫

## ೭೦

ವೇಂಕಟೇಶನೆ ಎನ್ನಾ ಪಾಲಿಪುದೊ
ಕಿಂಕರಾರ್ತಿ ಹರಣ ಪ

ಪಂಕಜೋದ್ಭವ ಹರ ವಂದ್ಯ ಪರಾತ್ಪರ
ನಿಖಿಲಾಗಮೈಕವಿಜ್ಞೇಯ ಲೋಕೋದ್ಧಾರ ಅ.ಪ

ಇಂದು ಮಂದವಾರ ಚೈತ್ರ ವತ್ಸರ ಬ-
ಹುಧಾನ್ಯ ಸಂದ ಶುಕ್ಲ ದ್ವಿತೀಯ
ಸಂಧ್ಯಾಸವನ ಬಂದು ಕೀರ್ತನ ಸೇವಾ-
ನಂತರದಿ ಎನ್ನಾ ಮಂದಿರದೊಳು ಸುಪ್ತಾವಸ್ಥೆ
ಯಿಂದಿರಲಾಗ ಅಂದು ಕಡೆಯ ಯಾ-
ಮದಿ ತೈಜಸನೆ ನೀ ಹಂಸರಿಂದೆನ್ನ ಮನಸಂಶಯ ಹರಿಸಿದೆ ೧

ಅರುಣೋದಯಲೆದ್ದು ಮುದದಿ
ಕರಣಶುದ್ಧನಾಗಿ ತ್ವರಿತದಿ ಸ್ವಪನದ ವಿ-
ವರಕಾಗಿ ಹರುಷದಿ ಹರಿಪೂಜಾಕಾಲದಿ
ಅರುಹಿದ ಮರುತ ಮೂರುತಿಯಾ
ಉರುತರ ಚರಿತೆಯ ನಿರುತಪೊಗಳಲಾಯತವಿತ್ತ
ತಿರುಪತಿಶೈಲಾಧಿಪ ಮಮಕುಲಸ್ವಾಮಿ ೨

ಸಾರ ಸದ್ಧಕುತಿಯನು ಕರುಣಿಸೋ
ಹರಿಗುರುಸೇವೆಯನು ಸರ್ವಸದ್ಯೋಗ್ಯಸಾಧನವನ್ನು
ಪರಮಹಂಸರು ಇತ್ತವೇಂಕಟೇಶಾಂಕಿತ
ಮೂರುತಿಯ ನುತಿಪಾ ನಿಜ ಹರಿಭಕುತರ
ಚರಣಕಮಲಬಂಡುಣಿಯೆನಿಸಿ ಇವನ
ನಿರುತ ರಕ್ಷಿಸೋ ಉರಗಾದ್ರಿವಾಸವಿಠಲಾ ೩

## ೭೧

ಶ್ರೀಧರಾ ನೀನೆ ಎನ್ನ ಹೃದಯ ಕಮಲದೊಳಿದ್ದು
ಮಾಡಿಸಿದ್ದು ನಾ ಮಾಡಿದೆನೊ ಪ

ಹಿಂದೆ ಮಾಡಿದ್ದೇನು ಇಂದು ಮಾಡುವುದೇನು
ಮುಂದೆ ಮಾಡತಕ್ಕದ್ದೇನು ತಂದೆ ಅ.ಪ

ಹಿಂದೆ ನಿನ್ನಯ ಜನರ ವಂದಿಸದೆ ಭವ-
ಬಂಧನದಿ ನಾ ನೊಂದೆನೋ

ಇಂದು ತೀರಿತು ಅದಕೆ ತಕ್ಕಮುಯ್ಯವು ಎನಗೆ ಆ-
ನಂದ ವಾಯಿತು ನಿನ್ನ ಕರುಣಾರಸಕೆ
ಮಂದಭಾಗ್ಯನಿಗೆ ನೀ ತಂದಂಥ ಬಂಧನವ
ಬಂಧಿಸಿ ಎನ್ನಿಂದ ವಂದನೆಯ ಕೊಂಡೆ ೧

ಮೂರು ದಿನದಲಿ ಹಿಂದೆ ತೋರಿದಂದದಿ ಎನ್ನ ಅ-
ಪರಾಧಗಳ ಎಣಿಸಲಿಲ್ಲ
ಬಾರಿ ಬಾರಿಗೆ ಗುರುಗಳು ಕಾದಿಹರು ಎಂದೆನ್ನ
ಎಚ್ಚರಿಸಿದುದಕೆ ನಾ ಮೈಮರೆದೆನೊ
ಮಾರಮಣನೇ ನೀ ಗುರುವಾಸರದಿ
ತ್ವರಿತದೊಳು ಹರಿ ಗುರು ಪೂಜೆಗೆ ಕಾತರವನಿತ್ತೆ ೨

ಸರ್ವಸೇವೆಯ ನೀ ಕರುಣದಿ ಸ್ವೀಕರಿಸು
ಶರಣರಕ್ಷಕನಹುದೊ ನೀನು
ಉರಗಗಿರಿವಾಸ ಶ್ರೀ ವೇಂಕಟೇಶನೆ ಎನ್ನ
ಸರ್ವಾಪರಾಧಗಳ ಕ್ಷಮಿಸೋ
ಅರಿತವನು ನಾನಲ್ಲವೆಂದೆನ್ನ ಕೈಬಿಡದೆ
ದುರಿತ ಪರಿಹರಿಸಿ ಕಾಯೋ ಶೌರೆ ೩

## ೭೨

ಸಲಹೊ ನಿನ್ನವನೀತನೆಂದೆಲ್ಲ
ಕಾಲ ಹೃತ್ಕಮಲದಲ್ಲಿ ನಿಲ್ಲೋ ಪ

ಸೊಲ್ಲುಸೊಲ್ಲಿಗೆ ಶ್ರೀ ವೇಣುಗೋಪಾಲನೆಂದೆಲ್ಲ
ಕಾಲದಿ ನುಡಿಸೊ ನಲಿಸೊ ಅ.ಪ

ಕರಣತ್ರಯಗಳಿಂದ ಮಾಡಿದ ಕಾರ್ಯವು
ಕರುಣಾಕರ ನಿನ್ನದೊ ಕರಣನಿಯಾಮಕ ನೀನಲ್ಲದಿಲ್ಲವೊ
ಕರುಣಿಸೋ ಸತತ ಶ್ರೀಹರಿಗುರುಭಕುತಿಯ ೧

ಪಂಚಭೇದ ತಾರತಮ್ಯ ತಿಳಿದು ಜ್ಞಾನ
ಪಂಚಕಗಳಿಂದಲಿ ಪಂಚಾತ್ಮಕ ವಿ-
ರಿಂಚಿ ಪವನರೊಳು ನಿರ್ವಂಚನೆ ಭಕುತಿಯಾ
ಕಿಂಚಿತ್ತಾದರು ಕೆಡದೆ ೨

ಮಾ ಕಳತ್ರನೆ ನಿನ್ನ ಅ-
ನೇಕ ಮಹಿಮನೆಂದು ಏಕಮನಸಿನಿಂದ- ಅ
ನೇಕ ಕಾಲವು ಪಾಡಿ ದಾಸನೆಂದೆನಿಸಿ
ಸ್ವೀಕರಿಸುವುದು ಈಗ ಶ್ರೀ ವೇಂಕಟೇಶನೆ ೩

## ೭೩

ಹೃತ್ಪದ್ಮದೊಳಿದ್ದು ಹೃತ್ತಾಪಗಳ ಕಳೆಯೊ ಜೀ-
ವತ್ಪಿತಾಮಹ ಜನಕನೇ ಪ

ಮೃತ್ಪಿಂಡದಂತೆನ್ನ ಉತ್ಪತ್ತಿಗೆ ಕ-
ಣ್ಣೆತ್ತಿ ನೋಡಲರಿಯಾ ಜೀಯಾ ಅ.ಪ

ನಾ ನಿತ್ಯ ನೀ ನಿತ್ಯ ಜಗವೆಲ್ಲವು ನಿತ್ಯವು
ನಿತ್ಯತ್ವವೆಲ್ಲ ಸರಿಯೇ ಏನಿದ್ದರೇನು
ಅನಾದಿಕರ್ಮದ ಬವಣೆ ಬೆನ್ನಟ್ಟಿ ಬರುತಿರ್ಪುದ-
ಜ್ಞಾನಾಂಧಕಾರದಿಂ ಧ್ಯಾನವನು ತಿಳಿಯದೇ
ಕಾನನದೊಳಿಪ್ಪೆನೋ ಜ್ಞಾನಗಮ್ಯನೆಂದು
ಸಾರುತಿದೆ ಶ್ರುತಿ ಶಾಸ್ತ್ರ ಜ್ಞಾನಗುರು ದೊರೆತಿಲ್ಲವೋ
ಸಾನುರಾಗದಿ ನೀನೆ ಸಾಧನಕೆ ಕರುಣಿಸಿ
ಧ್ಯಾನದಲಿ ಮನಸು ನಿಲಿಸೋ ಉಳಿಸೋ ೧

ಬಂಧ ಮೋಕ್ಷಕೆ ಎಲ್ಲ ಮನವೆ ಕಾರಣವೆಂದು
ಎಂದೆಂದಿಗು ಪೇಳುತಿಹರು
ಸಿಂಧುಶಯನನೆ ಭವಬಂಧಮೋಚಕನೆಂದು
ವಂದಿಸಿ ಪೊಗಳುವರೊ ಮಂದರೊದ್ಧರ ನಿನ್ನ

ಮಂದಮತಿಯಿಂದಲಿ ವಂದಿಸಲು ನಾನರಿಯೆನೊ
ಕಂದರ್ಪಜನಕ ನೀ ಮಂದಭಾಗ್ಯನ ಮನವ
ನೋಯಿಸದೆ ನಿನ್ನ ಪದದಲ್ಲಿರಿಸೊ
ಅಂದೆ ಎನ್ನಯ ಭವಬಂಧನಾಶವಾಗುವು-
ದೊಂದೆ ನಿನ್ನನು ಬೇಡುವೆನೊ ಜೀಯ ೨

ಜೀವರೆಲ್ಲರು ಗುಣತ್ರಯಾವರಣದಿಂದ ಕರ್ಮ-
ಪ್ರವಹದೊಳಿಪ್ಪರೊ ಕವಿಸಿ ಮೋಹವ ನೀನು
ಭವಕೆ ಕಾರಣವಹುದು ದೇವೇಶ ನಿನ್ನಾಟವೋ
ಶ್ರವಣದಿಂದಲಿ ಭವಬಂಧಮೋಚಕನೆಂದು
ತವ ಬಿರುದು ಸಾರುತಿದೇಕೋ ಭಾವ ಬಲ್ಲವರಾರೋ
ಕಾವ ಕರುಣಿ ನೀನೆ ಭಾವಜನ ಪಿತನು ಅದೇ
ಭವಪಾಶ ಬಿಡಿಸೆ ನಾ ಭಕುತಿಪಾಶದಿಂದ
ತವ ಪಾದ ಬಿಗಿವೆನಯ್ಯ ಜೀಯ ೩

ಸ್ವಾತಂತ್ರ್ಯವೆಲ್ಲಿಹುದು ಸ್ವಾಮಿತ್ವವೆಲ್ಲಿಹುದು ಅ-
ಸ್ವತಂತ್ರನಾಗಿಪ್ಪೆನೊ ಕಾತುರದಿ ನಾ ಮಾಳ್ಪ
ಕ್ರಿಯೆಗಳೆಲ್ಲವು ಎನ್ನ ಸ್ವಾತಂತ್ರ್ಯವೆಂದ್ಹೇಳುವೆ ನೀ
ತಂತ್ರಿಯಾಗಿದ್ದೆನ್ನ ನಡೆಸುವುದನರಿಯೆ ಕು-
ತಂತ್ರವನು ನಾ ಮಾಡುವೆ ಸ್ವಾ-
ತಂತ್ರನು ನೀನು ಸೂತ್ರನಾಮಕ ದೇವ
ಮಂತ್ರಿಯಾಗೀದೇವ ಯಂತ್ರ ನಡೆಸುವ
ಎಂತಾದರಡಿಗಡಿಗೆ ಅತಂತ್ರನಾಗಿಹೆ ನಾನೇ
ಭ್ರಾಂತಿಪರಿಹರಿಸಿ ಕಾಯೊ ಶೌರೇ ೪

ಭಕ್ತಿ ಇಲ್ಲದೆ ನಿನ್ನ ಭಕ್ತನಾಗುವುದೆಂತೋ
ಭುಕ್ತಮಾತ್ರನು ನಾನು ಮುಕ್ತರೊಡೆಯ ನೀನು
ಯುಕ್ತಿತೋರಿಸು ಎನಗೆ ಭಕ್ತಾಪರಾಧಸಹಿಷ್ಣು
ಶಕ್ತ ನೀನಹುದೊ ವೇದೋಕ್ತ ಮಹಿಮಾತೀತ
ಸಕ್ತವಾಗಲಿ ನಿನ್ನ ಪದದಿ ಮನಸು

ವ್ಯಕ್ತನಲ್ಲವೊ ಸರ್ವ ಸಾರಭೋಕ್ತನು ನೀನು
ಭಕ್ತವತ್ಸಲ ಪುರುಷಸೂಕ್ತಮೇಯ ಅಪ್ರಮೇಯ
ಯುಕ್ತಿಮಾತಲ್ಲಿದು ಭಕ್ತಿಪೂರ್ವಕ ನಿನ್ನ
ಭಕ್ತ ಶ್ರೇಷ್ಠರ ಸೇವೆ ಕೊಟ್ಟು ರಕ್ಷಿಸೊ ದೇವಾ ೫

ನಾದಕ್ಕೆ ಪರನಾಗಿ ವಾದಕ್ಕೆದೊರೆಯೇ ನೀ
ವೇದವೇದಾಂತವೇದ್ಯ ಸಾಧನವು ಕಾಣೆ
ಸಾಧನಶರೀರವಿದು ಸಾದರದಿ ಕರುಣಿಸಿದೆ ಅನಿರುದ್ಧದೇವ
ಬಾಧಿಪುದು ಬಂಧಗಳು ಅನಾದಿಕರ್ಮದಿ ಬಂದು
ಶ್ರೀಧರಾ ನಿನ್ನ ಮರೆದೇ ಭೂಧನಾಯೋಷಿತ ವಾಂಛಿತಾದಿಂದೆ
ನಾ ಅಧಮತಮಸಾಧನವನ್ನೆಸಗಿದೆ
ನೀ ದಯಾಸಿಂಧು ಎಂದಡಿಗಡಿಗೆ ಬೇಡುವೆನು
ಕೃದ್ಧನಾಗದೆ ಇನ್ನು ಉದ್ಧರಿಸು ತಂದೇ ಎಂದೇ ೬

ಶಂಖಚಕ್ರಾಂಕಿತನೆ ಮಂಕುಬುದ್ಧಿಯ ಬಿಡಿಸೋ
ಅಂಕಿತವೆನಗೆ ಇಲ್ಲ ಅಂಕೆ ಇಲ್ಲವೊ ನಿನ್ನ ನೆನೆಹುದಕೆ ಎಂದಿಗೂ
ಶಂಕೆಯ ಪಡುವನಲ್ಲ ವೇಂಕಟಾದ್ರಿಯ ವಾಸ ಶ್ರೀ
ವೇಂಕಟೇಶನು ಮಮಕುಲಸ್ವಾಮಿ ದೈವವೆಂದನುದಿನ
ಸಂಕಟಾಗಾಮಿಗಳ ಕಂಟಕವ ಹರಿಸಿ ಪದ
ಪಂಕಜದಿ ಮನವ ನಿಲ್ಲಿಸೋ
ಬಿಂಕದ ಮಾತಲ್ಲ ಪಂಕಜದಳಾಯತಾಕ್ಷ ಅಕ-
ಳಂಕಮಹಿಮ ಕಾಯೋ ಜೀಯಾ ೭

## ಲೋಕನೀತಿ

### ೭೪

ಮತ್ಸರಿಸುವವರಲ್ಲಿ ಮಾನ್ಯವಿರಲೀ ಪ

ಬಚ್ಚಲಿಲ್ಲದ ಮನೆಯು ಸ್ವಚ್ಛತಾನಾಗಿಹುದೆ ಅ.ಪ

ಅರಿಷಡ್ವರ್ಗಗಳು ತುಂಬಿಕೊಂಡಿಹ ದೇಹ
ಪರಿಶುದ್ಧವಹುದೇನೊ ಆವಾಗಲೂ
ಪರಿಪರಿಯಿಂದಲಿ ಪರಿವಾರ ಜನಗಳು
ಪರಿಹಾಸ್ಯಮಾಡಿ ಅಘವ ಕದ್ದೊಯ್ವರಯ್ಯ ೧

ಗುಣತ್ರಯಗಳಿಂದಲಿ ನಿಬಿಡವಾದೀದೇಹ
ಗುಣಕಾರ್ಯ ಮಾಡದೇ ಬಿಡದೆಂದಿಗೂ
ಅಣಿಯಾಗಿ ದುರ್ಗುಣಗಳೊಕ್ಕಣಿಸಿ ಪೇಳುವಡೆ
ಗುಣವ ತಿದ್ದಲು ತಾವು ಋಣಿಯಾಗುವರಯ್ಯ ೨

ಅಭಿಮಾನವೆಂಬುದು ನಭೋಮಂಡಲವರೆಗಿಹುದು
ಶುಭವೆಂತೊ ಡಾಂಭಿಕದ ಹೇ ಮಾನವಾ
ತುಂಬಿತುಳುಕುವ ದುರಭಿಮಾನವನೆ ತೊಲಗಿಸಿ
ಇಂಬು ತೋರುವರಯ್ಯ ಮನಸ್ಥೈರ್ಯಕೇ ೩

ಮಕ್ಕಳಪರಾಧಕೆ ಕಕ್ಕುಲತೆ ಪಡದೆ
ನಕ್ಕುಸಂತೈಸಿಲಾಲಿಸುವ ತೆರದಿ
ಅಕ್ಕರದಿ ತನ್ನ ಅಪರಾಧಗಳನೆಲ್ಲ
ಲೆಕ್ಕಿಸದೆ ಪೇಳ್ವರದು ಉಪಕಾರವಯ್ಯ ೪

ಮಚ್ಚರದಿ ನಿಂದಿಸೆ ಅಚ್ಚುತನ ಭಕುತರಿಗೆ
ನಿಚ್ಚದಲಿ ಸ್ವಚ್ಛಭಕುತಿ ಇಹುದು
ಮಚ್ಚರಕೆ ಸ್ವೇಚ್ಛೆಯಿಂದೆದುರು ಉಚ್ಚರಿಸದಿರೆ
ಮೆಚ್ಚಿ ಕಾಯುವನಯ್ಯ ಶ್ರೀ ವೇಂಕಟೇಶ ೫

# ತ್ತಾತ್ವಿಕವಿವೇಚನೆ

## ೭೫

ಏಕ ಪಂಚಾಶದ್ವರ್ಣವಾಚ್ಯ
ಶ್ರೀಕಳತ್ರನೆ ಸರ್ವಶಬ್ದಗೋಚರನಯ್ಯ ಪ

ಈ ಕಾಯ ಕಾರ್ಯಕಾರಣವನನುಸರಿಸಿ
ತ್ರಿಕರಣದೊಳಗಿದ್ದು ಕ್ರಿಯವ ನಡೆಸುವ ದೇವ ಅ.ಪ

ಅಜಾನಂದೇಂದ್ರೇಶ ಶಿರ ಮುಖ ನೇತ್ರದೊಳು
ನಿಜರೂಪ ಉಗ್ರ ಊರ್ಜ ಕರ್ಣದೊಳು
ನಿಜ ಋತುಂಬರ ಋಘನಾಸದಲ್ಲಿ
ಲೃಶಾ ಲೃಜ ವರ್ಣವಾಚ್ಯ ಗಂಡ ಸ್ಥಳದಲ್ಲಿಪ್ಪ ೧

ಏಕಾತ್ಮ ಐರಸ ಓಷ್ಠದಲಿ ನೀನಿದ್ದು
ಪೊರೆಯಯ್ಯ ಓಜೋಬೃತೌರಸ
ಜೋಕೆಯಿಂದಲಿ ದಂತ ಪಂಕ್ತಿಯಲ್ಲಿಹೆ ದೇವ
ಅನಂತಾರ್ಥಗರ್ಭನೆ ನೀ ವಾಚಿಯಲ್ಲಿ ೨

ಕಪಿಲ ಖಪತಿ ಗರುಡ ಘರ್ಮ ದಕ್ಷಿಣಭುಜದೊಳ್
ಅಪರಿಚ್ಛಿನ್ನನೇ ನೀನು ಸಂಧಿಗಳಲಿ
ಸುಫಲದಾತನೆ ಜಸಾರನಾಮದಲಿದ್ದು
ಅಂಗುಲ್ಯಾಗ್ರದಲ್ಲಿ ನೀ ನಿರುತರಲಿ ನೆಲಸಿರ್ಪೆ ೩

ಚಾರ್ವಾಂಗ ಛಂದೋಗಮ್ಯ ಜನಾರ್ದನ
ಝೂಟಿತಾರ ವರ್ಣವಾಚ್ಯವ ಮಾಡಿ ನಿರುತದಲಿ
ವಾಮಭುಜ ಸಂಧಿಗಳಲ್ಲಿರುವೆ ಬೆರಳ ಅಗ್ರದಿ
ಇಮನಾಮದಲಿ ನೆಲೆಸಿರುವೆ ೪

ಟಂಕ ತಲಕ ಡರೌಕ ಢರಣಣಾತ್ಮಕ ನೀ ನಾ
ಟಂಕ ರಹಿತ ದಕ್ಷಿಣ ಪಾದದಲ್ಲಿ
ಬಿಂಕವಿಲ್ಲದೆ ತಾರ ಥಪತಿ ದಂಡಿ ಧನ್ವೀ
ನಮ್ಯನಾಮನೆ ವಾಮಪಾದ ಸಂಧಿಗಳಲ್ಲಿ ೫

ಪರಫಲಿ ವರ್ಣವಾಚ್ಯ ದೇಹದಪಾರ್ಶ್ವ
ಬಲಿ ಭಗನಾಮ ಪೃಷ್ಟ ಗುಹ್ಯದಲಿ
ನಿರುತ ಮನ ವರ್ಣವಾಚ್ಯ ನೆನಿಸಿಹೆ
ದೇವ ತುಂದಿ ಸ್ಥಾನದಲಿ ಎಂದೆಂದು ನಿಂದೆ ೬

ಯಜ್ಞ ಹೃದಯದಿ ರಾಮ ತ್ವಕ್‌ಲಕ್ಷ್ಮೀಪತಿ
ಚರ್ಮ ವರಹ ರುಧಿರ ಶಾಂತಸಂವಿತ್ ಮಾಂಸದಲ್ಲಿ
ಸುಜ್ಞ ಷಡ್ಗುಣ ಮಜ್ಜ ಸಾರತ್ಮ ಅಸ್ತಿಯು
ಹಂಸ ಸ್ನಾಯುಳಾಳುಕ ನೀ ಪ್ರಾಣದಲ್ಲಿ ೭

ಕ್ಷಕಾರವಾಚ್ಚ ಶ್ರೀ ಲಕ್ಷ್ಮೀ ನರಸಿಂಹ
ಕ್ಷರ ಜೀವರಾ ದೇವ ಸರ್ವ ಸ್ಥಳದಲ್ಲಿಪ್ಪ
ಶ್ರೀಕರಾರ್ಚಿತ ನಿನ್ನ ವಾಕ್ ಮನೋರೂಪಗಳು
ಸಕಲ ಸಚ್ಛಾಸ್ತ್ರಾಗಮಗಳಾಗಿಹವೋ ೮

ಸ್ವರವರ್ಣ ಸಂಯುಕ್ತ ಶಬ್ದವಾಕ್ಯದಿ ಸಕಲ
ಪುರಾಣಾಗಮದಿ ಶಾಸ್ತ್ರ ಸರ್ವದಿ ನಿತ್ಯ
ಪರಿಪರಿ ಭೇರಿ ಮರ್ಮದಿ ಶಬ್ದಗಳು
ನಿರುತ ನಿನ್ನನುದಿನದಿ ಪೊಗಳುತಿಹವೋ ೯

ಸ್ವಪ್ರಯೋಜನಕಾಗಿ ವರ್ಣ ಭೇದದಿ ವಾಕ್ಯ
ಅಪ್ರಕೃತವಾಗೆಷ್ಟೋ ನಾನುಚ್ಚರಿಸಿದೆ
ಸ್ವಪ್ರಯೋಜನ ರಹಿತ ಶ್ರೀವೇಂಕಟೇಶ ಶ್ರೀ
ಉರಗಾದ್ರಿವಾಸ ವಿಠಲ ಜಗದೀಶ ೧೦

## ೭೬

ಏಕಮೇವ ಅದ್ವಿತೀಯಾ ಅಪ್ರಾಕೃತ ಕಾಯಾ ಪ

ಶ್ರೀಕರಾರ್ಚಿತಪಾದ ಲೋಕೇಶ ವಂದಿತ ಅ-
ವ್ಯಾಕೃತಾಕಾಶದೊಡೆಯನೆ ವಾಸುಕೀಶಯನ ಸರ್ವೇಶ ನೀನೆ
ಮುಕ್ತಾಶ್ರಯ ಸರ್ವಲೋಕಾಶ್ರಯನಾಗಿಹೆ
ಪ್ರಾಕೃತ ಸಜ್ಜಮಜ್ಜನ
ಕಾರ್ಯಕೆ ಕಾರಣನಯ್ಯ ಏಕೋ ನಾರಾಯಣ ಅ.ಪ

ಪ್ರಳಯಕಾಲದಿ ಜೀವರ ನಿಲಯಾ ಕಲ್ಪಿಸಿ ತತ್ತ
ಸ್ಥಳದಲ್ಲಿಡೆ ನಾಲ್ಕು ಸ್ಥಳಗಳನ್ನಾಗಿ ನಿನ್ನ ಕಳೆಯಾ
ನಾಲ್ಕುವಿಧಗಳ ರೂಪಗಳನು ಧರಿಸಿ ಪ್ರಳಯದೊಳಿಂಬಿಟ್ಟು
ಲೀಲೆಯೊಳು ನಿಂದೆ ನಳಿನನಾಭ ನೀ ಪಸುಳೆಯಂತೆ
ನಲಿದಾಲದೆಲೆಯೊಳು ಪೊಳೆಯುತಲಿದ್ದು
ಎಳೆಸಿದ ಕಟಾಕ್ಷವೀಕ್ಷಣದಿಂದಲಿ ೧

ಅಳವು ಇಲ್ಲದ ಸೃಷ್ಟಿಯನೆಸಗಿದೇ
ಸಾಧುಜೀವರು ತಮ್ಮ ಸಾಧನ ಪೊರೈಸಿ
ಸ್ವದೇಹದೊಳು ಬಂದ ಮೋದದಿಂದಲಿ ನೋಡಿ
ಬಾಧಿಪ ಲಿಂಗಭಂಗವೈದಿಹ ಪ್ರಾರಬ್ಧನಾಶನವಿಹ ವಿ-
ವಿಧ ಸುಜೀವರ ಮೋದಪಡಿಸಿ ನಿ-
ಷೇಧಿಸದೆ ಸ್ವರೂಪಾನಂದವೀಯಲೋಸುಗ
ಉದರದೊಳಿಟ್ಟ್ಯಯ್ಯ ಸದಮಲಮೂರುತಿ
ಅದುಭುತಮಹಿಮ ಶ್ರೀ ವಾಸುದೇವನೆ ೨

ಆಗಾಮಿ ಸಂಚಿತ ನೀಗಿ ಪ್ರಾರಬ್ಧ ಶೇಷ
ಭೋಗ ಉಳ್ಳವರೆಲ್ಲ ಆಗದೆ ಪೂರ್ಣ ಸಾಧನೆ
ನೀಗದೆ ಲಿಂಗಭಂಗ ಆಗ ಬಿಂಬನ್ನ ನೋಳ್ಪರ
ನಾಗಶಯನ ನಿನ್ನಂಗದೊಳಿಂಬಿಟ್ಟೆ

ಜಾಗುಮಾಡದೆ ನೀನಾಗಲೆ ಜೀವರ ಭೋಗವ ತರಲು
ಭಾಗವಗೈಸಿ ಭೂಭಾಗದ ಸಾಧನ ಮಾಳ್ಪ ಜೀವಗಣ
ಭಾಗವ ಕಾಯ್ದೆ ಸಂಕರುಷಣ ಮೂರುತೆ ೩

ನಿತ್ಯಸಂಸಾರಿಗಳಿಗೆ ಇತ್ತೆ ನಿನ್ನುದರದೊಳು
ಗತಿಪ್ರದ ಪ್ರದ್ಯುಮ್ನ ನಿತ್ಯಸಾಧನರಿಗೆ
ಮುಕ್ತರೊಡೆಯ ದೇವ ಶಕ್ತನಹುದೋ ನೀ
ಮತ್ತೆ ಮುಂದಿನ ಬ್ರಹ್ಮನ ಹತ್ತಿಬರುವ ಜೀವರ
ಮೊತ್ತ ಮೊದಲು ನೀನಿತ್ತು ಪೊರೆದೆ ಬರಲಿತ್ತ ಕಾರಣ ಪ್ರ-
ಕೃತಿಯಿಂದಲಿ ಸುತ್ತಿ ತಂದು ಮತ್ತೆ
ಸುತ್ತಿ ಸುತ್ತಿರುವೆ ಬಿತ್ತರಿಸಲೇನನಿರುದ್ಧಮೂರುತೇ ೪

ಅಣುವಿಗೆ ಅಣುವಾಗಿ ಘನತೆ ಘನತಮನಾಗಿ
ತೃಣಜೀವರಾದಿ ಬ್ರಹ್ಮಗಣರೆಲ್ಲರೊಳು
ಗಣನೆ ಇಲ್ಲದ ಕಾರ್ಯ ಕ್ಷಣಬಿಡದಲೆ ನಡೆಸಿ
ಗುಣನಿಧೆ ತೇನ ವಿನಾ ತೃಣಮಪಿನಚಲತಿ ಎಂಬ
ಎಣೆಯಿಲ್ಲದಿಹ ಸುಗುಣ ಸಾಂದ್ರನೆ
ಪ್ರಣವದೊಳು ಪ್ರತಿಪಾದ್ಯನಾಗಿಹೆ ತ್ರಿಗುಣರಹಿತ ಮುಖ್ಯ
ಪ್ರಾಣಾಂತರ್ಗತ ಪ್ರಣತಕಾಮದ ಪೂರ್ಣ ಸಂಪೂರ್ಣ ೫

ಮುಕ್ತಾಮುಕ್ತಾಶ್ರಯ ಭಕ್ತಪರಾಧೀನ
ಶಕ್ತಾನೆ ಸರ್ವವೇದೋಕ್ತ ಮಹಿಮಾತೀತ
ಉಕ್ತನಾಗಿಹೆ ಪುರುಷಸೂಕ್ತಾದೊಳಪ್ರಮೇಯ
ವ್ಯಕ್ತಾನಲ್ಲವೊ ನೀನು ಭಕ್ತಿಯಿಂದಲ್ಲದೆ
ಮುಕ್ತಿದಾತ ಪುರುಷೋತ್ತಮ ನಿನ್ನಯ
ಶಕ್ತಿಯನರಿಯರು ಅಜಭವಾದ್ಯರು
ಶಕ್ತನೆ ಜೀವನ್ಮುಕ್ತರೌಘ
ಸಕ್ತರಾಗಿ ನಿನ್ನ ಸ್ತೋತ್ರವ ಮಾಳ್ಪರು ೬

ಶ್ರೀಶಾ ಸರ್ವೋತ್ತಮ ವಾಸ ವೈಕುಂಠಾಧೀಶ
ಶ್ವಾಶಾನಿಂದಲಿ ಶೇಷನಹಂಕಾರ ಬಿಡಿಸಿದೆ
ವಾಸವಾದಿ ವಂದಿತ ಭಾಸುರಾಂಗನೆ
ವಿಶ್ವಾಸ ನಿನ್ನೊಳಿಟ್ಟ ದಾಸ ಜನರ ಕಾಯ್ವ
ಈಶಾವ್ಯಾಸಮಿದಂಸರ್ವಂ ಎಂದೆಂದು ಎಂದು
ಉಸುರುವ ವೇದಗಳ್ ಏಸುಕಾಲಕು ಸಾಕಲ್ಯದಿ ವರ್ಣಿಸ
ಲೀಶ ಕೋಟಿ ಪ್ರವಿಷ್ಟೆಗೆ ಅಸದಳ ೭

ಅಂಗಜಪಿತ ರಂಗ ಮಂಗಳಾಂಗನೆ ಮಾ-
ತಂಗವರದ ದೇವ ಗಂಗಾಜನಕ ಕಾಳಿಂಗನಾ ಮದ ಮೆಟ್ಟಿ
ಭಂಗಾಗೈಸಿದ ಭುಜಂಗಶಯನ ಎನ್ನಂತಾ-
ರಂಗದಿ ನಿಲ್ಲೋ ಇಂಗಿತ ಬಲ್ಲೆ ಶ್ರೀರಂಗಶಾಯಿ ಸಾ-
ರಂಗಪಾಣಿ ಕೃಪಾಂಗ ಎನ್ನಯ ಭವಭಂಗಗೈಸಿ ಸ-
ತ್ಸಂಗವೀಯೋ ಯದುಪುಂಗವ ಮಂಗಳಮೂರುತಿ ಶೌರೇ ೮

ಕಾಲನಾಮಕ ನೀನೆ ಕಾಲ ಮಹತ್ಕಾಲ ಕಾಲಕಲ್ಪಾಂತ
ಕಾಲದಲ್ಲಿ ಸೃಷ್ಟಿಯ ಲೀಲೆತನದಿ ಲಯ ಲೀಲೆಯ ತೋರಿ
ಬಾಲಲೀಲೆಯಿಂದಲಿ ಆಲದೆಲೆಯೊಳು ಪವಳಿಸಿದೆ
ಶ್ರೀಲಲನೆಯ ಲೋಲ ನೀನೆಲೊ ಈ ಜನಲೀಲೆಗೆ ಜೀವರ
ಜಾಲವ ತಂದೆ ಪಾಲಿಪ ಸಲಹಿಪ ಕರ್ತ ನೀನಲ್ಲದಿ-
ನ್ನಿಲ್ಲವಯ್ಯ ಶ್ರೀ ವೇಂಕಟೇಶ ಪ್ರಭೋ ೯

## ೭೭

### ತತ್ವಸುವಾಲಿಗಳು

ಓಂಕಾರ ಪ್ರತಿಪಾದ್ಯ ಶ್ರೀಕಾಂತನೇ ನಿನ್ನ
ಏಕಾಂತ ಭಕ್ತರಾಸಂಗವಾ-ಸಂಗವ ಕೊಟ್ಟು ಭವ
ಭಂಗವ ಗೈಸಿ ಶುಭಾಂಗನೆ ಕಾಯಯ್ಯ ಶ್ರೀರಂಗ ೧

ಕಾಲತ್ರಯಕೃತ ವಿಕಾರವಿಲ್ಲದೆ ನೀನೆ
ಮೂಲರೂಪನೆ ಬಹು ರೂಪ-ಬಹುರೂಪ
ಸ್ವಗತಭೇದ ವಿವರ್ಜಿಕನೆ ಸಲಹಯ್ಯ ೨

ಆವಕಾಲಕು ನೀನೆ ಚತುರ ರೂಪದೊಳಿದ್ದು
ಜೀವ ನಿಯಾಮನು ನೀನಾಗಿ-ನೀನಾಗಿ
ತಿಳಿಸುವೆ ವಿಶ್ವ ತೈಜಸ ಪ್ರಾಜ್ಞ ತುರ್ಯಾತ್ಮ ೩

ಸಪ್ತಾಂಗ ಏಕೋ ನ ವಿಂಶತಿ ಮುಖನಾಗಿ
ಇಪ್ಪೆ ನೀ ಬಲಗಣ್ಣನೆಯೊಳು-ಮನೆಯೊಳು
ಸ್ಥೂಲ ಶುಭ ವಿಷಯಂಗಳಾ ಮಾಡಿ ಉಣಿಸುವೆ ೪

ವಿಶ್ವದಲಿ ವ್ಯಾಪಿಸಿಹೆ ವಿಶ್ವನಂಬೋರು ನಿನ್ನ
ನಾಶರಹಿತನೆಂದೂ ನರನೆಂದೂ-ನರನೆಂದೂ
ನಿನ್ನ ವೈಶ್ವಾನರನು ಎಂದು ಪೇಳ್ವಾರೊ ೫

ಹರಿ ನಿನ್ನ ವಿಶ್ವನೆಂದು ಉಪಾಸನೆಯನು ಮಾಡಿ
ಹೇರಂಬ ನಿನ್ನ ಒಲಿಸಿದಾ-ಒಲಿಸಿದಾ
ಗಜವಕ್ತ್ರನಾಗಿ ನಿನ್ನ ಸ್ತುತಿಪಾನೋ ೬

ಬಾಹ್ಯಾನುಭವಗಳಿಂದ ಇತರಾನುಭವವ
ದೇಹದೊಳು ಸ್ವಪನದಲಿ ನೀ ನೀಡಿ-ನೀ ನೀಡಿ
ಜೀವರುಪಭೋಗಿಸುವ ಸಾರವನು ರಕ್ಷಿಪೆ ೭

ಸ್ವಪನಕಾಲದಲಿ ಕಂಠದೊಳು ನೀನಿದ್ದು
ಅಪರಿಮಿತಕಾರ್ಯ ಮನಸಿನಲ್ಲಿ-ಮನಸಿನಲ್ಲಿ
ತೈಜಸನೆ ವಾಸನಾಮಯವೆಲ್ಲ ತೋರಿಪೆ ೮

ಸ್ವಪನಕಾಲದಲಿ ದೇಹಾಭಿಮಾನದ
ವ್ಯಾಪಾರವೆಲ್ಲವ ಬಿಡಿಸೂವೆ-ಬಿಡಿಸೂವೆ
ತತ್ವಗಳ ವ್ಯಾಪಾರವೇ ವ್ಯಾಪಾರ ೯

ಸುಪ್ತಕಾಲದಿ ಜೀವ ಸ್ವರೂಪಕೆ ತಕ್ಕ
ಕ್ಲುಪ್ತ ಅಜ್ಞಾನ ಮೊದಲಾದ-ಮೊದಲಾದ
ಕಾಲವನನುಸರಿಸಿ ಜೀವನಿಗೆ ತನ್ನ ತಿಳಿಯಗೊಡದೆ ೧೦

ಪ್ರಾಜ್ಞಮೂರುತಿ ನೀನೆ ಹೃದಯಸ್ಥಾನದೊಳಿದ್ದು
ಅಜ್ಞಾನಿ ಜೀವನ ಕಾಲಾವ-ಕಾಲಾವ
ನನುಸರಿಸಿ ಜೀವ ಸ್ವರೂಪಾನಂದವನು ನೀನೀವೆ ೧೧

ಸ್ವಪನ ಜಾಗ್ರತ ಜ್ಞಾನವಿನಿತಿಲ್ಲವೆಂದು
ಸುಷ್ಪ್ತಿಕಾಲದಿ ಪ್ರಾಜ್ಞ ನಿನ್ನಿಂದ-ನಿನ್ನಿಂದ
ಕೂಡುವ ಜೀವ ಆನಂದ ಹಿಂದೆಂದೂ ಕಾಣನೊ ೧೨

ಘನ ಬಹಿ ಪ್ರಾಜ್ಞ ತೈಜಸಾಂತ ಪ್ರಾಜ್ಞ
ಘನ ಪ್ರಾಜ್ಞ ಮೂರುತಿ-ಮೂರುತಿ
ಗಳುಪಾಸನೆ ಮಾಳ್ಪ ಬುಧರೇನು ಧನ್ಯರೊ ೧೩

ತುರ್ಯಾನಾಮಕ ಹರಿಯೆ ಶಿರವೆ ನಿನ್ನಾಯ ಸ್ಥಾನ
ಸೂರಿಗಳ ಜ್ಞಾನಕ್ಕೆ ಗೋಚರ-ಗೋಚರ
ನಾಗಿ ನೀ ಕೊಡುತಿರುವೆ ಮುಕ್ತರಿಗೆ ಆನಂದ ೧೪

ಮುಕ್ತರಿಗೆ ದೃಷ್ಟನೋ ಅದೃಷ್ಟನೋ ಅ-
ಮುಕ್ತರಿಗೆ ನಷ್ಟ ಪ್ರಾರಬ್ಧರ್ಗೆ ಲಭ್ಯನೋ-ಲಭ್ಯನಾಗುವೆ
ಗುರುಪ್ರಾಣನನುಗ್ರಹದಿ ಲಭ್ಯನಹುದಯ್ಯಾ ಹೇ ಜೀಯ ೧೫

ಕಣ್ಮನ ಹೃದಯ ತ್ರಿಧಾಮಗಳಲ್ಲಿ ಇದ್ದು
ಉಣಿಸೂವೇ ಜೀವರಿಗೆ ಫಲಭೋಗ-ಫಲಭೋಗವು
ವಿಶ್ವತೈಜಸ ಪ್ರಾಜ್ಞ ಸ್ಥಿತಿಯೊಳು ೧೬

ಸರ್ವರೂಪವು ಪೂರ್ಣ ಸರ್ವಗುಣ ಸಂಪೂರ್ಣ
ಸರ್ವೋತ್ಪಾದಕ ಸುಖರೂಪಿ-ಸುಖರೂಪಿ
ಸರ್ವಲೋಕ ಜೀವರೊಳಿದ್ದು ನಿರ್ಲಿಪ್ತಾ ೧೭

ವರ್ಣತ್ರಯಯುತ ಓಂಕಾರದೊಳಾದ್ಯವರ್ಣ
ಅಕಾರದೊಳು ವಿಶ್ವ ನೀನೆ-ವಿಶ್ವನು ನೀನೆ
ಉಕಾರವೇ ತೈಜಸನು ಮಕಾರ ವಾಚ್ಯನೇ ಶ್ರೀಪ್ರಾಜ್ಞ ೧೮

ನಾದದೊಳು ನೀ ವಾಚ್ಯ ತುರ್ಯರೆಂಬೋರು ನಿನ್ನ
ಸದನವಾಗಿಹುದ್ಯೆ ಶಿರಸ್ಥಾನ-ಶಿರಸ್ಥಾನ
ನಾಶಿಕಾಗ್ರದಿ ಊರ್ಧ್ವ ದ್ವಾದಶಾಂಗುಲದಲ್ಲಿ ನೆಲೆಸಿರ್ಪೆ ೧೯

ಭೋಗ್ಯವಿಷಯಗಳನು ಪ್ರಾಪಿಸುವ ವಿಶ್ವನೆ
ತೈಜಸನೊಡಗೂಡಿ ವಾಸನಾ-ವಾಸನಾಮಯ
ಕಳೆವ ಅಜ್ಞಾನಿ ಜೀವನನ್ನಾಡಿಸುವೆ ಶ್ರೀಪ್ರಾಜ್ಞ ೨೦

ಸರ್ವಶಕ್ತನು ನೀನೆ ಸರ್ವಕರ್ತನು ನೀನೆ
ಸರ್ವೋತ್ತಮನು ನೀನೆ ಸರ್ವಜ್ಞ-ಸರ್ವಜ್ಞ
ಪೂರ್ಣಪ್ರಜ್ಞಾಂತರ್ಯಾಮಿ ಸಲಹಯ್ಯೆ ೨೧

ಏಸೇನು ಜನುಮದಲಿ ಏಸು ಸಾಧನವನ್ನು
ಏಸೇಸು ಮಾಡಲು ಇನ್ನೇನು-ಇನ್ನಾವ
ಫಲವಿಲ್ಲ ವಾಸುದೇವನೆ ನಿನ್ನ ದಯ ಬೇಕೊ ೨೨

ನಾ ಸುಮ್ಮನಿದ್ದರೆ ಮನಸು ಸಮ್ಮತಿಸದೆ
ನೀ ಸುಮ್ಮನಿರದೆ ಎನ್ನನೂ-ಎನ್ನನು
ಪ್ರೇರಿಸುವೆ ಲೇಸುಮನ ನಿನ್ನಲ್ಲಿ ನೆಲೆಸಲೋ ೨೩

ಕಂಡಕಂಡಲ್ಲಿ ನಾ ಉಂಡುಂಡು ಓಡಾಡಿ
ಧಾಂಡಿಗನಾಗಿ ಬೆಳೆದೆನೊ-ಬೆಳೆದೆನೊ
ನೊಂದೆನೋ ಪುಂಡರೀಕಾಕ್ಷ ನಿನ್ನ ಮರೆತೆನೋ ೨೪

ಅವಾವ ಕಾಲದೊಳು ನೀನಿದ್ದು ಉಣಿಸುವೆ
ಜೀವಕೃತ ಕರ್ಮಫಲಗಳ-ಫಲಗಳ
ಶ್ರೀ ವೇಂಕಟೇಶ ನೀನಿತ್ತು ಸಲಹೂವೇ ೨೫

ಮಂದರೋದ್ಧರ ಜಗದ ಬಂಧಮೋಚಕ ನೀನೆ
ವಂದನೆಯು ಒಂದೆ ಮನದಿಂದೆ-ಮನದಲಿ ನಿನ್ನ
ಪಾದಾರವಿಂದವ ತೋರಯ್ಯ ೨೬

ಬಂಧುಗಳು ಹಿತರೆನ್ನೆ ಬಂಧಕರಾಗಿಹರು
ಹಿಂದು ಮುಂದಕು ಎನ್ನ ಬಿಡದಲೆ-ಬಿಡದಲೆ ಭವಪಾಶ
ಬಂಧನಕೆ ನಾ ಇನ್ನು ಸಿಲುಕಿದೆ ೨೭

ಜನನದಾರಭ್ಯದಿ ಜನನಿ ಜನಕರು ಬಿಡದೆ
ಘನವಾಗಿ ತನು ಬೆಳೆಸಿ ಹಿತದಿಂದ-ಹಿತದಿಂದ
ಮುಂದೆ ಪರಗತಿಯ ಕಾಣುವುದೆಂತೊ ಗೋವಿಂದ ೨೮

ವಿತ್ತಾಪಹಾರಕರು ಹೃತ್ತಾಪಕಳೆವರೆ
ನಿತ್ಯ ನೀನನಿಮಿತ್ತ ಬಾಂಧವನಾಗಿ-ಬಾಂಧವನಾಗಿ ನೀ
ಉತ್ತಮಗತಿಯ ತೋರಿಸು ೨೯

ಹರಿಕಥಾಪುರಾಣಶ್ರವಣ ನಿತ್ಯದೀ ಮಾಡೀ
ಪರಿಯಿಂದ ನಿಜತತ್ವವರಿಯಾದೆ-ಅರಿಯಾದೆ
ಬರಿದೇ ವಿಪರೀತ ಜ್ಞಾನಕೆ ವಶನಾದೆ ೩೦

ಮದ್ಯ ತುಂಬಿದ ಭಾಂಡ ಗದ್ದುಗೆಯ ಮೇಲಿಟ್ಟು
ಶ್ರದ್ಧೆಯಿಂದಲಿ ಅದನ ಪೂಜಿಸೆ-ಪೂಜಿಸೆ
ಪೂತ ದುರ್ಗಂಧ ಫಲವದು ಬಿಟ್ಟೀತೆ ೩೧

ಮಂದಹಾಸದಿ ಜನರ ಸಂದೋಹದಲಿ ಕುಳಿತು
ನಿಂದೆ ಮಾತುಗಳಾಡಿ ಮದತುಂಬೀ-ಮದತುಂಬಿಬಿದಾ ದುರ್ಮ
ದಾಂಧರಿಗೆ ಗತಿಯು ಮುಂದೆ ಇನ್ನೆಂತೊ ೩೨

ಕಂಡಕಂಡವರಲ್ಲಿ ಕೊಂಡೆ ಮಾತುಗಳಾಡಿ
ಪುಂಡರೀಕಾಕ್ಷ ನಿನ್ನ ಸ್ಮರಿಸಾದೆ-ಸ್ಮರಿಸದಲೆ
ಪರದಿ ಯಮದಂಡಕ್ಕೆ ಗುರಿಯಾದೆ ೩೩

ಹಿಂದೆ ಮಾಡಿದ ಪುಣ್ಯದಿಂದ ಇಂದಿನ ಭಾಗ್ಯ
ವೆಂದು ತಿಳಿದು ಮುಂದೆ ನಡೆಯಾದೆ-ನಡೆಯಾದೆ
ತಿಳಿಗೇಡಿ ಬುದ್ಧಿಯಿಂದ ಕುಂದುಪೊಂದುವೆ ೩೪

ಬಾಯಿಮಾತಲ್ಲ ಶ್ರೀ ತೋಯಜಾಕ್ಷನ ಭಕ್ತ-
ರಾಯತನ ತಿಳಿವುದು ಶ್ರಮಸಾಧ್ಯ-ಶ್ರಮಸಾಧ್ಯ
ವನು ಸದುಪಾಯದಿಂದ ತಿಳಿದು ನಲಿದಾಡೊ ೩೫

ನಿಂದಕರ ನುಡಿಯಿಂದ ಹಿಂದೆ ಮಾಡಿದ ಪಾಪ
ಒಂದೊಂದು ಪರಿಯಲ್ಲಿ ಪರಿಹಾರ-ಪರಿಹಾರವಾಗಿ
ನಿಂದಕರು ಬಂಧನಕೆ ಬೀಳ್ವಾರೋ ೩೬

ಸ್ಮೃತಿಯುಕ್ತಿಯನೆ ಬಿಟ್ಟು ಯುಕ್ತಿಮಾತುಗಳಿಂದ
ಹೊತ್ತು ಕಳೆಯುತ ಉನ್ಮತ್ತನೆನಿಸಿ-ಉನ್ಮತ್ತನೆನಿಸಿದವ ಇ-
ನ್ನೆತ್ತ ಭವಶರಧಿಯ ದಾಟುವ ೩೭

ಪರರ ದೂಷಣೆಯಿಂದ ಹರಿ ಸ್ಮರಣೆ ಮಾಡದೆ
ಅರೆಘಳಿಗೆ ಕಳೆದುದಿಹ ನರಜನ್ಮ-ನರಜನ್ಮ ಬಂದುದು
ನರಕಯಾತನೆಗಲ್ಲದಿನ್ನಿಲ್ಲ ೩೮

ಉದಯಾಸ್ತ ಪರಿಯಂತ ಉದರಭರಣಕಾಗಿ
ಉದಧಿಶಯನ ನಾ ನಿನ್ನ ಭಜಿಸಾದೆ-ಭಜಿಸಾದೆ
ಮದದಿಂದ ಬುಧಜನರ ನಿಂದೆಯ ಮಾಡೀದೆ ೩೯

ಇನ್ನಿಲ್ಲ ಪಾತಕವು ಅನ್ಯನಿಂದನೆಗಿಂತ
ಇನ್ನಿಲ್ಲ ಪರಗತಿಯ ಸಾಧನ-ಸಾಧನವು
ತನ್ನೊಳು ತನ್ನಿರವರಿತು ಸುಮ್ಮನಿರುವುದು ಅದು ನಿಧಾನ ೪೦

ಭಿನ್ನಜೀವರ ಗುಣ ಭಿನ್ನಕ್ರಿಯೆಗಳು
ಭಿನ್ನಧರ್ಮಂಗಳ ಗ್ರಹಿಸಾದೆ-ಗ್ರಹಿಸಾದೆ
ನೀನೆಣಿಸಿದೆ ತನ್ನಗುಣಧರ್ಮದಂತನ್ಯರಿಹನೇನೊ ೪೧

ಕಾಯವೇ ತಾನೆಂದು ಮಾಯಕೆ ಒಳಗಾಗಿ
ಬಾಯಿ ಬಂದಂತೆ ಮಾತಾಡಿ-ಮಾತಾಡಿ ಈ ಜೀವ
ಕಾಯಯಾತನೆಗೊಂಡು ನೋಯುವಾ ೪೨

ವಚನ ವಚನವು ಸರ್ವ ಉಚಿತ ದೇಹದ ಕಾರ್ಯ
ನಿಚಯದೊಳು ಹರಿ ಪ್ರಚುರನಾಗಿ-ಪ್ರಚುರನಾಗಿ
ಕಾಯಕುಪಚಯವಿತ್ತು ಸಲಹೂವ ೪೩

ದೇಹ ಕಾಯದ ಕಾರ್ಯಪ್ರಕ್ರಿಯವ ತಿಳಿಯಾದೆ
ಮಾಯೆಗೊಳಗಾಗದಿರು ಹೇ ಮಾನವಾ-ಮಾನವನೆ ತಿ-
ಳಿಯೊ ಮಾಯಾರಮಣನ ಬಿಂಬಕ್ರಿಯವಾ ೪೪

ತನ್ನೊಳಗೆ ಇಹ ಷಡ್ವೈರಿಗಳ ಗೆಲ್ಲದವ
ಅನ್ಯರೊಳು ನೀ ಹೋರಾಡಬಲ್ಲೆಯ-ಬಲ್ಲೆಯಾ
ನಿನ್ನ ವೈರಿಗಳ ಜಯಿಸಲರಿಯದ ಖೂಳ ರಣಹೇಡಿ ೪೫

ಕೊಳೆತು ನಾರುವ ದೇಹದೊಳಗಿರುವ ಹುಳುಕುಗಳ
ಕೊಳೆಯ ಕಳೆಯದ ಮನುಜ ನೀನೆಂತೊ-ನೀನೆಂತೊ
ಕೊಳೆತ ಸಗಣಿಯೊಳಗಿಹ ಹುಳುವೆ ನಿನ್ನ ಗತಿಯೆಂತೊ ೪೬

ಆದದ್ದು ಆಯಿತು ಯತ್ನ ತಪ್ಪಿತು ಎಂದು
ಹೆದ್ದಾರಿ ಹಿಡಿದು ಪರಮಾರ್ಥ-ಪರಮಾರ್ಥವ
ಬುದ್ಧಿ ತಿದ್ದಿಕೊಳ್ಳಲು ಮುಂದೆ ಅನುವಾಗೊ ೪೭

ತತ್ತ್ವದೇವತೆಗಳು ತತ್ತತ್ವಕಾರ್ಯಜಿ-
ವೋತ್ತಮನಾಜ್ಞೆಯಿಂ ತಾವ್ ಗೈವರೊ-ತಾವ್ಗೈ
ಯುತ್ತಲಿರೆ ನಾನೆತ್ತ ಮೃತ್ತಿಕಾಪ್ರತಿಮೆಯೋ ೪೮

ಒಂದೊಂದು ರೀತಿಯಿಂ ಚೆಂದಾಗಿ ಯೋಚಿಸು
ಮಂದಮತಿಯು ನೀನು ಹಿಂದೆಂತೂ-ಹಿಂದೇನು

ಮುಂದೇನು ಇಂದೆ ಗೋವಿಂದನಾ
ವಂದನೆಯೊಂದಲ್ಲದಿನ್ನಿಲ್ಲ ೪೯

ಡಾಂಭಿಕತನ ಬಿಟ್ಟು ಡಿಂಬದೊಳು ಸರ್ವದಾ
ಅಂಬುಜನಾಭನೇ ಇಂಬಾಗಿ-ಇಂಬಾಗಿ ಸರ್ವತ್ರ
ತುಂಬಿಕೊಂಡಿಹನೆಂದು ನಲಿದಾಡೋ ೫೦

ತುಷ್ಟಿಯಾಗಿರು ನೀನು ಕೊಟ್ಟಷ್ಟು ಲಾಭಕ್ಕೆ
ದುಷ್ಟವಿಷಯಗಳಿಗೆ ಎರಗಾದೆ-ಎರಗಾದೆ ಇರಲು ಸಂ-
ತುಷ್ಟ ನಾಗುವನಯ್ಯ ಶ್ರೀಕೃಷ್ಣ ೫೧

ಕಾಯ ನಿನ್ನದು ಅಲ್ಲ ಮನವು ಅಧೀನವಲ್ಲ
ಹೇಯವಿಲ್ಲದೆ ಮಾಯಕೊಳಗಾಗಿ ಮರುಳಾಗದಲೆ-ಮರುಳಾಗದಲೆ
ಮಾಯಾರಮಣನ್ನ ನೆನೆಯೊ ನಿರ್ಭಯದಿಂದ ೫೨

ಹಲವು ಶಾಸ್ತ್ರವ ನೋಡಿ ತಲೆಹರಟೆಯ ಬಿಟ್ಟು
ಅಲವಬೋಧರ ತತ್ತ್ವಸುಧೆಯನ್ನು- ಸುಧೆಯನ್ನು ಸವಿದು ನಿ-
ರ್ಮಲ ಜ್ಞಾನ ದೊಳು ನಲಿದಾಡೊ ೫೩

ಪರರ ದೂಷಣೆಯಿಂದ ಪಾರುಗಂಡದ್ದೇನು
ಪರರೆಲ್ಲ ಪರಗತಿಗೆ ಸಾಧಕರೆ-ಸಾಧಕರೆ
ಪವಮಾನರೆಂದು ನೆರೆನಂಬು ೫೪

ಹರುಷದಿಂದಲಿ ಮಾಡ್ದ ಪರಹಿಂಸೆ ಫಲವೆಲ್ಲ
ಕೊರಗುತಲಿ ಇಹದಲ್ಲೆ ಉಣಬೇಕು-ಉಣಬೇಕು ತಪ್ಪದು
ದುರಿತ ಫಲ ಬಿಡದೋ ಎಂದೆಂದೂ ೫೫

ಜ್ಞಾನಿಗಳು ಹರಿಗುರು ಮುನಿದರೆ ಅದು ಹಾನಿ
ಜ್ಞಾನವಿಲ್ಲದ ಪಶು ನರನಾದೆ-ನರನಾದೆ
ಮುಂದೆ ನರಕಭಾಜನನಾಗಿ ನರಳೂವೆ ೫೬

ಕುಂದುಕೊರತೆಯ ತಿಳಿಯೆ ನಿಂದಕರು ಇರಬೇಕು
ಕುಂದಲ್ಲ ನಿಂದನೆಯು ಎಂತೆಂದು-ಎಂತೆಂದು
ಮುಂದೆ ನಾ ನಿಂದೆಗೊಳಗಾಗದಲೆ ಇಹುದೆಂದೂ ೫೭

ಗ್ರಾಮಸಾರವ ಹೀರ್ವ ಗ್ರಾಮಸೂಕರದಂತೆ
ತಾಮಸ ಜನರದನು ಶುದ್ಧಿಯಾ-ಶುಧ್ಧಿ-
ಯಾಮಾಡೆ ಮನಶುಧ್ಧವಾಗುವುದಕೆ ಸಾಧ್ಯವೊ ೫೮

ಹುಚ್ಚುಪರಟೆಯ ಬಿಟ್ಟು ಅಚ್ಯುತನ ನೆರೆನಂಬು
ಉಚ್ಚರಿಸು ಹರಿನಾಮ ಸ್ಮರಣೆಯಾ-ಸ್ಮರಣೆಯಮಾಡಿ ನೀತಿಳಿಯೊ
ಅಚ್ಯುತನ ಭಕ್ತಿಯಲಿ ಅನುದಿನಾ ೫೯

ಕಣ್ಣು ಕಿವಿ ನಾಲಗೆ ಮಣ್ಣುಪಾಲನು ಮಾಡಿ
ಹೆಣ್ಣು ಹೊನ್ನು ಮಣ್ಣಿನಾಶೆಯಾ-ಆಶೆಯಾ ಮಾಡಿ
ಉಣ್ಣುವೆಯಾ ದುಃಖ ಈ ಜನುಮದೀ ೬೦

ಇಟ್ಟುತೊಟ್ಟುಮೆರೆದು ಹೊಟ್ಟೆಹೊರೆಯಲು
ಕಷ್ಟಪಟ್ಟು ಭ್ರಷ್ಟ ಹುಟ್ಟೀದೆ-ಹುಟ್ಟೀದೆ ಮುಂದೆ ಯಮ
ಪಟ್ಟಣಕೆ ಕಾಲಿಟ್ಟು ಕೊಟ್ಟಕೊನೆಗೆ ನೀ ಕೆಟ್ಟೆಯೋ ೬೧

ಶಪಥದಿಂದಲಿ ನಾನು ಜಪತಪವ್ರತನೇಮ
ಕೋಪತಾಪಗಳಿಂದ ಒಡಗೂಡಿ-ಒಡಗೂಡಿ ಮಾಡಿದ್ದು
ಜಡದೇಹಕಾಯಾಸಕೂಡುವುದಲ್ಲದೆ ಫಲವಿನಿತಿಲ್ಲ ೬೨

ತನ್ನಮನಸು ತನ್ನ ಅಧೀನವಿಲ್ಲದವ
ಅನ್ಯರ ಮನವಾ ನೋಯಿಸಿ-ನೋಯಿಸಿ ತಾ ಮುಂದೆ
ಬನ್ನಪಟ್ಟು ನರಕ ಘನ್ನಯಾತನೆಯ ಕೈಕೊಳ್ಳುವಾ ೬೩

ಮುನ್ನ ಮಾಡಿದ ಕರ್ಮ ಬೆನ್ನುಬಿಡುವ್ರೋ ತನಕ
ಸನ್ಮನವ ತನ್ನಲ್ಲಿ ನಿಲಿಸೀ-ನಿಲಿಸೀ ನೆನೆಯೊ
ಶ್ರೀನಾರಾಯಣನ ಸ್ಮರಣೆ ಸುಮ್ಮನೆ ನೀನು ಅನುದಿನ ೬೪

ಸಂದೇಹ ಬರದಂತೆ ಮುಂದಾಡಿ ತೋರ್ವ ಗುರು
ವಂದನೆಯ ಮಾಡಿ ಮುದದಿಂದ-ಮುದ-
ದಿಂದ ತಿಳಿದು ಹರಿಪಾದಾರವಿಂದ ಭಕ್ತನೆನಿಸೊ ದೃಢದಿಂದ ೬೫

ಕೊಟ್ಟುದನು ಕೈಗೊಳ್ವ ಮುಟ್ಟಿಪೂಜಿಸೆ ದೊರೆಯ
ತುಷ್ಟನಾಗುವ ಅಲ್ಪಭಕ್ತಿಗೇ-ಭಕ್ತಿಗಲ್ಲದಲೆ ಇ-
ನ್ನೆಷ್ಟು ಮಾಡಿದರು ಹರಿ ತುಷ್ಟನಾಗಿ ಕೊಡನು ಅಭೀಷ್ಟವ ೬೬

ಲಕ್ಷಣವಿಲ್ಲದ ಅವಲಕ್ಷಣ ಪುರುಷನೆ ಕ್ಷ-
ಣಕ್ಷಣಕೆ ದ್ವಾತ್ರಿಂಶಲ್ಲಕ್ಷಣ-ಲಕ್ಷಣಾವುಳ್ಳ ಗುರು-
ಪ್ರಾಣದೇವನ ನೆನೆದು ಕರುಣದಿಂದಲಿ ನೀನು ಕಡೆಹಾಯೊ ೬೭

ಏನಿದ್ದರೇನಯ್ಯ ಶ್ರೀನಿವಾಸನ ದಯ
ತಾನಿದ್ದರಲ್ಲೇ ಸತ್ಸಾಧನ-ಸತ್ಸಾಧನವು ಎಲ್ಲ ನಿ-
ಧಾನದಿಂದಲಿ ನೀನೆ ನಿನ್ನೊಳು ತಿಳಿದು ನೋಡಯ್ಯ ೬೮

ಕತ್ತಲಾಯಿತು ಒಳಗೆ ಹತ್ತಿಬಂದಾಪತ್ತು
ಎತ್ತೆತ್ತ ತಿರುಗಲದು ತಪ್ಪಾದು-ತಪ್ಪಾದು
ಅಜ್ಞಾನಕತ್ತಲೆಗೆ ಶ್ರೀಪತಿಯೆ ಹದ್ದೀಪ ೬೯

ಧರ್ಮವಿಲ್ಲದೆ ನುಡಿದ ಮರ್ಮಮಾತುಗಳಿಂದ
ಕರ್ಮ ಬೆಳೆದು ಬೆಳೆದು ಭವದಿಂದ-ಭವದಿಂದ
ಕರ್ಮಫಲ ಜನ್ಮಜನ್ಮಾಂತರಕು ಬಿಡದಯ್ಯ ೭೦

ಪಶುವಂತೆ ಶಿಶುತನದಿ ಬೆಳೆದುದಾಯಿತು ದೇಹ
ಹಸನಾಗಿ ಇಂದ್ರಿಯಗಳು ವಿಷಯದೊಳು-
ವಿಷಯದೊಳು ಬಿದ್ದು
ನಶಿಸಿ ಹೋದರು ದೇಹದಾಸೆ ಬಿಡಲೊಲ್ಲದು ಈ ಜೀವ ೭೧

ಸತ್ತು ಹುಟ್ಟೀ ಮತ್ತು ಸತ್ತು ಹುಟ್ಟುತಲಿ ಬೇ
ಸತ್ತು ಬಂದರು ಜನ್ಮವೆತ್ತುತಾ-ಎತ್ತುತಾ
ಅನೇಕ ಜನ್ಮ ಕಲ್ಪಾಂತಪರಿಯಂತ ಸುತ್ತುತಾ ೭೨

ಹೆತ್ತ ತಾಯಿ ತನ್ನ ಕೂಸನ್ನೆತ್ತಿಕೊಂಡು
ಮುತ್ತಿಟ್ಟು ಅದನು ಪೊರೆವಂತೆ-ಪೊರೆವಂತೆ ಹರಿ ತನ್ನ
ಭೃತ್ಯರನು ಅನವರತ ಸಲಹುವಾ ೭೩

ಭವಬಂಧ ನಾನಾದೆ ಭವಮೋಚಕನು ನೀನಹುದೊ
ಭವಹಾರಿ ಎಂಬುವ ಬಿರುದನ್ನು-ಬಿರುದನ್ನು ಕೇಳಿ
ತವಶರಣೆಂಬೆ ತವಸೇವಕರ ಸೇವೆಯಾದರೂ ನೀಡಯ್ಯ ೭೪

ಹಿಂದೆ ಮಾಡಿದ ಕರ್ಮ ಒಂದೆಣಿಸದೆ ಎನ್ನ
ಕುಂದುಗಳನೆಲ್ಲ ಕಳೆಯಯ್ಯ-ಕಳೆಯಯ್ಯ
ಮುಂದೆ ದುಷ್ಕರ್ಮಕ್ಕೆ ಎನ್ನ ಬಿಡದೆ ಸಲಹಯ್ಯ ೭೫

ಮುನ್ನ ನಿನ್ನೊಡಲಲಿಟ್ಟು ಬನ್ನಪಡಿಸದೆ ಕಾಯ್ದೆ
ಇನ್ನು ಈ ದೇಹದೊಳು ನೀನಿದ್ದೂ-ನೀನಿದ್ದೂ
ಎನ್ನ ಕೈಬಿಡದೆ ಘನ್ನ ಅಪರಾಧಗಳೆಣಿಸದೆ ರಕ್ಷಿಸೂ ೭೬

ಕಾರಣಾಹ್ವಯನಾಗಿ ಕಾರ್ಯರೂಪದಲ್ಲಿದ್ದು
ಶರೀರ ವ್ಯಾಪರ ನೀ ಮಾಡಿ-ನೀ ಮಾಡಿ
ಮಾಡಿಸುವೆ ಪಾರುಗಾಣಿಸೋ ಭವ ಶರಧಿಯ ೭೭

ಸಂದುಹೋಯಿತು ಆಯು ಒಂದು ಸಾಧನ ಅರಿಯೆ
ಕುಂದಿತೆನ್ನಯ ಕರಣ ಗೋವಿಂದ-ಗೋವಿಂದ ನೀ
ತಂದೆ ತಾಯಿಯಂದದಲಿ ಮುಂದೆ ಸಲಹೆಂದೆ ೭೮

ವರ್ಣಾಶ್ರಮೋಚಿತ ಕರ್ಮ ಮಾಡಲು ಜ್ಞಾನ
ಪೂರ್ಣವಾಗುವುದಯ್ಯ ನಿರ್ಣಯಾ-ನಿರ್ಣಯಾ
ಜ್ಞಾನಿಯ ಕರ್ಮ ಜ್ಞಾನಕಾರಣವಹುದು ೭೯

ಕರ್ಮವಿಕರ್ಮ ಅಕರ್ಮವೆಂತೆಂಬ ತ್ರಿ-
ಕರ್ಮಗಳಲಿ ನಾ ಮರ್ಮವ-ಮರ್ಮಗಳಲ್ಲಿನ ಸ-
ದ್ಧರ್ಮವನರಿಯೆ ರಕ್ಷಿಸೊ ೮೦

ಅರ್ಥಾನುಸಂಧಾನವಿಲ್ಲದ ಶಾಸ್ತ್ರಾರ್ಥ
ವ್ಯರ್ಥವಾಗಿ ತನ್ನ ಪುರುಷಾರ್ಥ-ಪುರುಷಾರ್ಥ ಕೆಡಿಸುವುದು
ಪ್ರಾರ್ಥಿಸುವೆ ಕೊಡದಿರು ಅಯಥಾರ್ಥ ೮೧

ಕರ್ಮಗಳು ನಿವೃತ್ತ ಧರ್ಮವಾಗಲು
ಅಂತಃಕರಣ ಶುದ್ಧಿಯು ಅದರಿಂದ-ಅದರಿಂದ ವಿಷಯ
ವೈರಾಗ್ಯ ಶ್ರವಣಮನನಧ್ಯಾನವೂ ೮೨

ಶ್ರವಣ ಮನನವು ಧ್ಯಾನಾನಂತರದಿ ಜ್ಞಾ-
ನವೂ ತದ್ವಾರ ಮೋಕ್ಷವು ಇಂತೆಂದೂ-ಇಂತಿಹುದು
ಶ್ರುತಿ ನಿವೃತ್ತಂ ಶೇವ ಮಾಸ್ತು ಎಂತೆಂದೂ ೮೩

ಭಕ್ತಿಮಾರ್ಗವಲ್ಲ ಮುಕ್ತಿದ್ವಾರಕಿಲ್ಲ
ಯುಕ್ತಾಯುಕ್ತಾ ಜ್ಞಾನ ಮೊದಲಿಲ್ಲ-ಮೊದಲಿಲ್ಲ ಕೊನೆಯಿಲ್ಲ ಅಪ
ಸಕ್ತವಾದಕ್ಕೆ ಗತಿಯಿಲ್ಲ ೮೪

ಕಂಟಕವ ಹರಿಸೊ ಶ್ರೀ ವೇಂಕಟೇಶನೆ ನಿನ್ನಾ
ಬಂಟನೆಂದೆನಿಸಿ ಸಲಹಯ್ಯ-ಸಲಹಯ್ಯ ಅನಿಮಿತ್ತ
ನೆಂಟ ನಿನ್ಹೊರತು ಇನ್ನುಂಟೆ ಜಗದೊಳು ಹೆದ್ದೈವ ೮೫

## ೭೮

ಓಂ ನಮೋ ನಾರಾಯಣಾಯ
ತೇ ನಮೋ ನಮೋ ನಮೋ ಪ

ಓಂ ನಮೋ ಓಂಕಾರಾದಿ ನೀ ಘನ್ನ
ಮಹಿಮ ಅಷ್ಟಾಕ್ಷರಾತ್ಮಕನೆ ಅ.ಪ

ಪ್ರಣವ ಪ್ರತಿಪಾದ್ಯ ನೀ ಅಷ್ಟಾಕ್ಷರದೊಳು ವಿಶ್ವತೈಜಸ
ಪ್ರಾಜ್ಞ ತುರ್ಯಾತ್ಮ ಅಂತರಾತ್ಮ ಪರಮಾತ್ಮ ಜ್ಞಾನಾತ್ಮ
ವರ್ಣಾತ್ಮಕ ನೀ ಓಂಕಾರದೊಳು ಅಉ
ಮನಾದಬಿಂದು ಘೋಷ ಶಾಂತ
ಅತಿಶಾಂತದೊಳು ಪ್ರತಿಪಾದ್ಯಮೂರುತಿ ಹರೆ ೧

ಪ್ರಣವದೊಳು ಆದಿವರ್ಣದಿಂದಭಿವ್ಯಕ್ತಿ
ಷೋಡಶ ಸುಸ್ವರಗಳ್ ಅನಂತ ವೇದಗಳ
ಕಾಲಗಳ್ವ್ಯಕ್ತವೊ
ಪ್ರಾಣ ಲಕುಮಿಯಭಿಮಾನಿಗಳನಂತ ವೇದಗಳಿಂ
ದನವರತ ನಿನ್ನಾಗುಣಗಳ ನುತಿಪರೋ
ವಿಶ್ವಮೂರುತೀ ಹರೆ ೨

ವರ್ಣದ್ವಿತೀಯದೊಳು ನೀ ಪ್ರತಿಪಾದ್ಯ ಅಭಿವ್ಯಕ್ತವಾದ
ವಯ್ಯ ಕವರ್ಗ ವರ್ಗವೈದು ಪಂಚಭೂತಗಳಂ
ವರ್ಣದೊಳಭಿಮಾನಿಗಳ್ ಭೂತಕ ಗಣಪ ಪ್ರಹವವಾಯು
ವಹ್ನಿ ಶನಿಯು ವರುಣಾರು ಗುಣಗಳ ನುತಿಪರೊ
ತೈಜಸ ಮೂರುತೇ ೩

ಪ್ರತಿಪಾದ್ಯನೆ ಮಕಾರ ವಾಚ್ಯ ಶ್ರೀ ಪ್ರಾಜ್ಞ ನಿನ್ನಿಂದಭಿ-
ವ್ಯಕ್ತಿ ಚವರ್ಗ ಪಂಚಕ ಜ್ಞಾನೇಂದ್ರಿಯ ವೈದು
ತತ್ತದಭಿಮಾನಿ ಆಶ್ವಿನಿ ವರುಣ ಸೂರ್ಯ ಪ್ರಾಣ ದಿಗ್ದೇ-
ವತೆಗಳಿಹರು ಪ್ರತಿಗಾಣೆನೊ ಶ್ರೀ ಪ್ರಾಜ್ಞಮೂರುತಿ ಹರೆ ೪

ನಾದವಾಚ್ಯಪ್ರತಿಪಾದ್ಯ ತುರ್ಯನೆ ಅಭಿವ್ಯಕ್ತ
ಪಂಚವರ್ಣ ಟವರ್ಗ ಕರ್ಮೇಂದ್ರಿಯಗಳ್
ತದಭಿಮಾನಿಗಳು ಆದರು ಸ್ವಯಂಭುವ ಮನು ಜಯಂತ
ದಕ್ಷ ವಹ್ನಿ ದೇವತೆಗಳು ಅದುಭುತ ಮಹಿಮ
ಶ್ರೀ ತುರ್ಯ ಮೂರುತೆ ೫

ಬಿಂದುವಾಚ್ಯ ಪ್ರತಿಪಾದ್ಯ ನೀನಾತ್ಮ ಬಿಂದುವಿಂದ ತವರ್ಗ
ಪೊಂದಿಕೊಂಡಿಹುದು ತನ್ಮಾತ್ರಪಂಚಕ
ಗಂಧ ರಸ ರೂಪಸ್ಪರ್ಶ ಶಬ್ದಗಳಿಗೆ
ಪಂಚವಾಯುಗಳಿಹರಯ್ಯ
ಬಂಧ ಮೋಚಕ ನೀ ಕಾರಣ ಹರೆ ೬

ಘೋಷದಿಂದಲಭಿವ್ಯಕ್ತಿ ಪಂಚಮನೋ
ವೃತ್ತಿಗಳದರಭಿಮಾನಿ
ಓಷಧೀಧರ ಖಗಪ ಶೇಷೇಂದ್ರ ಕಾಮರು
ಘೋಷವಾಚ್ಯ ನೀನಂತರಾತ್ಮ ಪ್ರತಿಪಾದ್ಯನಹುದೋ
ಪಕಾರ ಪಂಚವರ್ಣ
ದೋಷರಹಿತ ಮನೋಧಾಮದಿ ನೀ ದೊರೆ ೭

ಪರಮಾತ್ಮನೆ ನೀ ಶಾಂತವಾಚ್ಯ
ಪ್ರತಿಪಾದ್ಯನಹುದೋ ಅಭಿವ್ಯಕ್ತಿಯ
ಕಾರಾದಿ ಸಪ್ತವರ್ಣ ಸಪ್ತಧಾತುಗಳಲ್ಲಿ
ನಿರುತದಿ ಯಜ್ಞರಾಮ ಲಕುಮಿ ಪತಿಯು
ವರಹ ಶೇಷ ಷಡ್ಗುಣಸಾರ
ಇರುವರಿವರ ಪರಿ ಅರಿಯೆನೊ ಹರಿಯೆ ೮

ಅತಿ ಶಾಂತದೊಳು ಪ್ರತಿಪಾದ್ಯನಾಗಿಹೆ ಜ್ಞಾನಾತ್ಮ
ಹಕಾರಾದಿ ತ್ರೈವರ್ಣ ಅದರಿಂದ ಗುಣಕ್ರಿಯವೊ
ತತುಕ್ರಿಯ ಜಾಗೃತ ಸ್ವಪ್ನ ಸುಷುಪ್ತಿ ವಿಶ್ವಾದಿರೂಪದಿಂದ
ತೋರುವ ಶ್ರೀವೇಂಕಟೇಶ
ಉರಗಾದ್ರಿವಾಸವಿಠಲ ಮೂರುತೇ ೯

## ೭೯

## ಸುಳಾದಿ

### ಧ್ರುವತಾಳ

ಕ್ಷೇತ್ರಕ್ಷೇತ್ರಗಳಲ್ಲಿ ಕ್ಷೇತ್ರಜ್ಞನಾರೆಂದು
ಕ್ಷೇತ್ರದೊಳು ಜ್ಞೇಯವಸ್ತುವನ್ನೇ ತಿಳಿದು
ಗಾತ್ರವ ದಂಡಿಸಿ ಯಾತ್ರೆಯ ಮಾಡಿ
ಚಿತ್ರಚರಿತ ಹರಿಭಕ್ತರೊಡನೆ ಕೂಡಿ
ರಾತ್ರಿ ಹಗಲೆನ್ನದೆ ಸ್ತೋತ್ರಮಾಡುತ ಸಂ-
ವಿತ್ರನಾಗಿ ಸತತ ಪುತ್ರಕಳತ್ರರಿಂದಧಿಕ
ಪ್ರೀತಿಯ ನಿತ್ಯ ಇಟ್ಟು ಶ್ರೀಪತಿಪಾದ
ಭಕ್ತಿಯಿಂದಲಿ ನೆನೆದು ಎತ್ತಿ ಸಂಚರಿಸಲು
ಅತ್ತತ್ತ ಕ್ಷೇತ್ರವು ಉತ್ತಮೋತ್ತಮ ನಮ್ಮ
ಶ್ರೀ ವೇಂಕಟೇಶನು ಅತ್ತಿತ್ತ ಬಿಡದೆ ನಮ್ಮ
ಉದ್ಧರಿಪ ಭವದಿಂದ ೧

### ಮಟ್ಟತಾಳ

ಭೂತಪಂಚಕ ಮಹದಹಂಕಾರದಿ ಬುದ್ಧಿ
ಸತ್ವಾದಿಗುಣತ್ರಯ ಶ್ರೋತ್ರಾದಿ ಪಂಚಕ
ಮನಸು ಕರ್ಮೇಂದ್ರಿಯ ತತುಮಾತ್ರಗಳೆಲ್ಲ
ಕ್ಷೇತ್ರವೋ ಶ್ರೀಪತಿಗೆ ನಿತ್ಯಾಭಿಮಾನಿಗಳು
ಕ್ಷೇತ್ರಕ್ಕೆ ಇಹರಯ್ಯ ತತ್ವಾಭಿಮಾನಿಗಳೆಂದೆನಿಸುವರು
ಇವರ ಅಂತರದಿ ಹರಿ ತಾ ನಿರಂತರದಿ ನಿಂತು
ತತ್ತತ್ಕಾರ್ಯಗಳ ಪ್ರೇರಿಸಿ ಮಾಡಿಸುವ
ಬಿತ್ತರಿಸಲು ಸಲ್ಲ ಕ್ಷೇತ್ರಜ್ಞನಾ ಮಹಿಮೆ
ಚಿತ್ತಜಪಿತ ನಮ್ಮ ಶ್ರೀವೇಂಕಟೇಶನೆ
ನಿತ್ಯ ಸರ್ವತ್ರದಿ ವ್ಯಾಪ್ತ ನಿರ್ಲಿಪ್ತ ೨

### ತ್ರಿವಿಡಿತಾಳ

ಭಿನ್ನ ಜೀವರೊಳು ಅಭಿನ್ನ ತಾನಾಗಿ
ಭಿನ್ನರೂಪಕ್ರಿಯವ ಭಿನ್ನ ಭಿನ್ನವೇ ಮಾಡಿ
ಭಿನ್ನಜೀವರ ಇಚ್ಛೆಗನುಸರಿಸಿ ಪ್ರೇರಿಸಿ
ಭಿನ್ನಕಾರ್ಯಗಳ ಫಲ ಭಿನ್ನವನ್ನೆ ಇತ್ತು
ತನ್ನಿಚ್ಛೆಯಿಂದ ಚೇತನ ಅಚೇತನದಲ್ಲಿ
ನನ್ನಿಯಿಂದಲಿ ಚರಿತ ತನ್ನ ಕಿಳಿಗೊಡದಲೆ
ಘನ್ನಕಾರ್ಯವನೆಸಗಿ ಜೀವರನುಭವಕೀವ
ಪನ್ನಂಗಶಯನ ಶ್ರೀ ವೇಂಕಟೇಶನು ಸರ್ವ
ಕ್ಷೇತ್ರದೊಳಿದ್ದು ನನ್ನಿಯಿಂದಲಿ ಪೊರೆವ ೩

### ಅಟ್ಟತಾಳ

ಪ್ರಕೃತಿ ಮೊದಲಾದ ತತ್ವಂಗಳೆಲ್ಲ
ಅಕಳಂಕ ಶ್ರೀಹರಿಗೆ ಕ್ಷೇತ್ರಂಗಳಾಗಿಹವು
ಸಕಲಾಭಿಮಾನಿಗಳು ದೇಹಕ್ಷೇತ್ರದೊಳಿಹರು
ಪ್ರಕೃತಿ ಪರಿಣಾಮದಿಂ ಜೀವಸ್ವರೂಪ ವೈ
ತಕ್ಕ ಕ್ಷೇತ್ರ ವಿಕಾರವಿದಕಿಹುದಯ್ಯ
ಸುಖದುಃಖ ಧೈರ್ಯೇಚ್ಛ ಚೇತನ ಶರೀರವು
ತಕ್ಕ ಅಭಿಮಾನಿಗಳು ನಿಂತು ನಡಿಸುವರಯ್ಯ
ಪಕ್ಕಿವಾಹನನಿಂದ ಪ್ರೇರಿತವು ಪ್ರಕೃತಿಯು
ಮಿಕ್ಕಮಾತೇನು ಶ್ರೀಹರಿಗಿದು ಕ್ಷೇತ್ರವು
ಪ್ರಕೃತಿಜನ್ಯವಾದ ದೇಹವಿಲ್ಲದೆ ಜೀವ
ತಕ್ಕ ಸಾಧನವನ್ನು ಮಾಳ್ಪುದಿಲ್ಲೆಂದಿಗು
ಲೋಕೇಶಪಿತ ನಮ್ಮ ಶ್ರೀ ವೇಂಕಟೇಶನ
ಅಜಾಂಡಾಂತರ್ಬಹಿ ಸರ್ವಕ್ಷೇತ್ರಜ್ಞನಯ್ಯ ೪

**ಆದಿತಾಳ**

ಅಣುಮಹತ್ತಿಗಿಂತ ಅಣುಮಹತ್ತಾಗಿ
ಪಾಣಿಪಾದದಿ ಪೂರ್ಣ ದೇಹಶಕ್ತಿಯ ತನು
ಪೂರ್ಣಶಕ್ತಿಯೆಂತೊ ಇಂದ್ರಿಯ ಶಕ್ತಿ
ಪೂರ್ಣ ಅಂಗದ ಶಕ್ತಿ ಎಂತೋ ಅಂತಿರ್ಪುದಯ್ಯ
ಕಾಣಿಸಿಕೊಳ್ಳದಲೇ ಕಾರ್ಯ ನಡೆಯುವುದಯ್ಯ
ಗುಣಗಣ ಪರಿಪೂರ್ಣ ಬ್ರಹ್ಮಾದಿವಂದ್ಯನು
ಕ್ಷಣದೊಳು ತಾ ನೆನೆಸೆ ಬ್ರಹ್ಮಾಂಡ ಕೋಟಿಗಳು
ಗಣನೆಯಿಲ್ಲದೆ ಸೃಷ್ಟಿಲಯವ ಗೈಸಲು ಬಲ್ಲ
ತೃಣ ಮೊದಲು ಬ್ರಹ್ಮಾದಿ ಜೀವಗಣಗಳನ್ನು
ಕ್ಷಣ ಬಿಡದಲೆ ರಕ್ಷಿಸುವ ಶ್ರೀ ವೇಂಕಟೇಶಾ ೫

**ಜತೆ**

ಜ್ಞೇಯವಸ್ತುವು ಸರ್ವನಿಯಾಮಕನು ನೀನೆ
ಶ್ರೀಯರಸನೆ ಕಾಯೋ ಶ್ರೀ ವೇಂಕಟೇಶನೆ

## ೮೦

ಧೇನಿಸೂ ಶ್ರೀಹರಿಯ ಮಹಿಮೆ ನೀ ಧೇನಿಸೊ ಪ

ಧೇನಿಸು ಶ್ರೀಹರಿಯ ಲೀಲಾ ಸೃಷ್ಟಿ
ಮಾನಸದಲಿ ನೆನೆಯೋ ಪರಿಯಾ ||ಆಹಾ||
ತಾನೆ ತನ್ನಯ ಲೀಲಾಜಾಲತನದಿ ತನ್ನ
ಆನಂದದೊಳಿಪ್ಪ ಶ್ರೀ ಮುಕುಂದ ನನ್ನ ಅ.ಪ

ಮೂಲ ನಾರಾಯಣ ದೇವ ತಾನು
ಆಲದೆಲೆಯೊಳು ಲೀಲಾ ತೋರಿ
ಬಾಲತನದಿ ತಾ ನಲಿವಾ ಅನೇಕ
ಕಾಲ ಪರ್ಯಂತರದಿ ಸರ್ವ ||ಆಹಾ||

ಎಲ್ಲ ಜಗವ ತನ್ನ ಒಡಲೊಳಡಗಿಸಿ
ಲೋಲನಾಗಿ ಬಾಲಕ್ರೀಡೆಯಾಡುವಪರಿಯಾ ೧

ಇಂತು ಶಯನಗೈದ ಹರಿಯ ಅ-
ನಂತ ವೇದಗಳಿಂದ ತ್ವರಿಯಾ ದುರ್ಗ
ಸಂತಸದಿಂದ ಸಂಸ್ತುತಿಯ ಮಾಡೆ
ಕಂತುಪಿತನು ತಾನೆಚ್ಚರಿಯ ॥ಆಹಾ॥
ಅಂತೆ ತೋರ್ದ ವಾಸುದೇವಾದಿ ಚತುರಾ-
ನಂತವತಾರ ಸಿರಿ ರೂಪಗಳ ಸಹಿತ ೨

ಸಕಲ ರೂಪಗಳ ತನ್ನೊಳೈಕ್ಯಾ ಮಾಡಿ
ಸಕಲ ಲಕುಮಿ ರೂಪಗಳಲಿ ಐಕ್ಯಾ ಇಟ್ಟು
ಸಕಲ ಮರುತರ್ಗೆ ತನುಮುಖ್ಯಾ ಇತ್ತು
ಸಕಲ ಕ್ರೀಡೆಯೊಳು ಸೌಖ್ಯಾ ॥ಆಹಾ॥
ಲಕುಮಿಯ ಸ್ತುತಿಗೆ ಒಲಿದು ತಾನೇತ-
ನ್ನ ಕಡೆಗಣ್ಣಿಂದ ಪಂಚಜೀವರ ನೋಡಿದಾ ೩

ಶುದ್ಧಸೃಷ್ಟಿಯೆಂಬುದೊಂದು ಪರಾ-
ಧೀನ ವಿಶೇಷವು ಎಂದು ಮತ್ತೆ
ಒಂದು ಮಿಶ್ರ ಸೃಷ್ಟಿಯೆಂದು-ಒಂದು
ಕೇವಲ ಸೃಷ್ಟಿಯೆಂದೂ ॥ಆಹಾ॥
ಮೋದದಿಂದೆಸಗೆ ದುರ್ಗಾರೂಪವಾದ
ತಮಾಂಧಕಾರವ ಪ್ರಾಶಿಸಿದ ವಿವರಾ ೪

ತನ್ನೊಳೈಕ್ಯವಾಗಿದ್ದ ಮಹ
ಘನ್ನ ಚತುರ ಮೂರುತಿ ತೋರ್ದ ಇನ್ನು
ತಾನೆ ಪ್ರಕಟನಾಗಿ ನಿಂದ ಆಗ
ಉನ್ನಂತ ಚತುರ ನಾಮದಿಂದ ॥ಆಹಾ॥
ಜನುಮ ಸ್ಥಿತಿ ಮೃತಿ ಮೋಕ್ಷದನಾಗಿರ್ಪ
ಅನಿರುದ್ಧಾದಿ ಚತುರಮೂರ್ತಿಗಳ ವ್ಯಾಪಾರ ೫

ಪುರುಷನಾಮಕ ಪರಮಾತ್ಮ ತಾ
ಹರುಷದಿ ಪ್ರಕೃತಿಯು ಸೂಕ್ಷ್ಮವೆಲ್ಲವ
ತರವರಿತು ಘನಮಾಡ್ದ ಮಹಿಮಾ ಸೃಷ್ಟಿ
ತರತರ ಮಾಡ್ದ ಮಾಹಾತ್ಮ ||ಆಹಾ||
ಪ್ರಾಕೃತ ವೈಕೃತ ದೇವತೆ ಸುಮಾನ ಈ
ಮೂರುವಿಧ ಸೃಷ್ಟಿಯಾನೆಸಗಿದ ಪರಿಯ ನೀ ೬

ಮಹದಹಂಕಾರ ತತ್ವ ಪಂಚ
ಮಹಭೂತಗಳು ಮನಸ್ತತ್ವ ಇನ್ನು
ಮಹದಶೇಂದ್ರಯಗಳ ತತ್ವ ಮತ್ತೆ
ಮಹತಾಮಿಶ್ರಾಂಧ ತಾಮಸ ತತ್ವ ||ಆಹಾ||
ಇಹದು ಈ ಪರಿಯಲ್ಲಿ ಪ್ರಾಕೃತ ಸೃಷ್ಟಿಯು
ಮುಹುರ್ಮುಹು ಇದನೆ ಆಲಿಸಿ ನಿನ್ನೊಳು ೭

ವೈಕೃತದೋಳು ಸಕಲ ವೃಕ್ಷಾ ತಿರ್ಯಕ್
ಸಕಲ ಪ್ರಾಣಿಗಳ್ ಮನುಜ ಕಕ್ಷಾ ಎಲ್ಲ
ವಿಕೃತ ಸೃಷ್ಟಿಯ ಮಾಡ್ದ ಅಧ್ಯಕ್ಷಾ ಇನ್ನು
ಸುರಸಮಾನ ಸೃಷ್ಟಿಯ ಅಪೇಕ್ಷಾ ||ಆಹಾ||
ಸಕಲ ಸುರಾಸುರಪ್ಸರ ಗಂಧರ್ವರು
ಪಿತೃಗಳು ಯಕ್ಷರಾಕ್ಷಸರ ಪರಿಯವರಾ ೮

ಪುನ್ನಾಮ ವಿರಂಚಿ ಬ್ರಹ್ಮಾನು ಅಂದು
ಘನ್ನವಾಸುದೇವ ತಾನು ಸೃಷ್ಟಿ
ಯನ್ನ ಪ್ರಕಟಮಾಡಿದನು ಮುಂದೆ
ಅನಿಲದೇವನು ಸಂಕರುಷಣನ ||ಆಹಾ||
ಅನಿಲನೆ ಸೂತ್ರನಾಮಕವಾಯುವಾಗಿಹ
ಭಾವೀ ಬ್ರಹ್ಮನೀತನೆ ನಿತ್ಯಗುರುವೆಂದು ೯

ಪ್ರದ್ಯುಮ್ನನಿಂದ ಸರಸ್ವತಿ ಇನ್ನು
ಶ್ರಧ್ಧಾನಾಮಕಳು ಭಾರತಿ ಸೃಷ್ಟಿ-

ಯಾದ ವಿವರ ತಿಳಿಯೊ ಪೂರ್ತೀ ಇದೇ
ಪ್ರದ್ಯುಮ್ನನ ಸೃಷ್ಟಿಯ ಕೀರ್ತಿ ||ಆಹಾ||
ಶ್ರದ್ಧಾದೇವಿಯೊಳು ಸೂತ್ರನ ವೀರ್ಯದಿಂ-
ದುದ್ಭವಿಸಿದ ಜೀವ ಕಾಲನಾಮಕನು ೧೦

ವಿರಂಚಿ ಬ್ರಹ್ಮಗಾಯತ್ರೀರಿಂದ
ಈರ ಬ್ರಹ್ಮರಸೃಷ್ಟಿ ಚರಿತ್ರೆ ಚಿತ್ರ
ವರ ಮಹತ್ತತ್ವದ ಗಾತ್ರ ಇವರ
ತರವೆಲ್ಲ ವಿಚಿತ್ರ ||ಆಹಾ||
ವಿರಂಚಿ ಬ್ರಹ್ಮ ಸರಸ್ವತಿಯಿಂದ ವೈ-
ಕಾರಿಕ ರುದ್ರ ಶೇಷಗರುಡರ ನೀ ೧೧

ಸೂತ್ರ ಶ್ರದ್ಧಾ ದೇವೇರಿಂದ ಪವಿ
ತ್ರತೈಜಸ ರುದ್ರ ಬಂದಾ ಪ-
ವಿತ್ರ ಶೇಷ ಗರುಡರೆಂದೂ ವರ
ಪುತ್ರರಾಗಿಹರತಿ ಚೆಂದಾ ||ಆಹಾ||
ಪುತ್ರನಾದ ಶೇಷ ಸಾವಿತ್ರಿ ಬ್ರಹ್ಮರಿಗೆ
ಪುತ್ರನಾದ ತಾಮಸ ರುದ್ರ ಶೇಷಗೆ ೧೨

ಪ್ರದ್ಯುಮ್ನ ಸೂಕ್ಷಶರೀರ ಕೊಟ್ಟು
ಉದ್ಧಾರ ಮಾಡಿದ ಜೀವರ ಅನಿ
ರುದ್ಧನ ಕೈಲಿ ಕೊಡಲವರಾ ಅನಿ
ರುದ್ಧನು ಮಾಡ್ದ ವಿಸ್ತಾರಾ ||ಆಹಾ||
ತದಪೇಕ್ಷ ಮೂಲಪ್ರಕೃತಿಯಿಂದ ಗುಣತ್ರಿ-
ವಿಧ ಕೊಂಡು ಮಹತ್ತತ್ವ ನಿರ್ಮಿಸಿದಾ ೧೩

ಮಹತ್ತತ್ವದಿಂದಹಂಕಾರ ತತ್ತ್ವ
ಮಹದಹಂಕಾರವು ಮೂರುತರ ಇದ-
ರೊಳು ಬ್ರಹ್ಮವೈಕಾರಿಕ ಶರೀರವಾಗಿ
ಹುದು ಈ ಪರಿ ಈ ರೂಪ ವಿವರಾ ||ಆಹಾ||

ಅಹುದು ತೈಜಸದಿಂದ ಶೇಷನ ದೇಹವು
ತಾಮಸದಿಂದಲಿ ರುದ್ರ ತಾನಾದನು ೧೪

ಎರಡನೆಯ ಸಾರಿ ಪ್ರದ್ಯುಮ್ನ ಅರ್ಧ
ನಾರೀ ರೂಪನಾಗಿ ಇನ್ನು ಎಡದಿ
ಸ್ತ್ರೀರೂಪ ಜೀವರುಗಳನ್ನು ಬಲದಿ
ಪುರುಷ ಜೀವರೆಲ್ಲರನ್ನು ।।ಆಹಾ।।
ಧರಿಸಿ ಅವರ ದೇಹಗಳನಿತ್ತು ಅ
ನಿರುಧ್ಧನ ಕೈಯೊಳಿತ್ತ ಪರಿಯನ್ನು ೧೫

ಅದರಂತೆ ಅನಿರುದ್ಧದೇವ ತಾ
ನದಕಿಂತ ಸ್ಥೂಲದೇಹವ ಮೂಲ
ಪ್ರಕೃತಿಯಿಂದ ಗುಣವಾ ಕೊಂಡು
ಅದುಭುತ ಮಹತ್ತತ್ವತೋರ್ವ ।।ಆಹಾ।।
ಅದುಭುತ ಮಹತ್ತತ್ವದಿಂದಹಂಕಾರ
ಉದಿಸಿದ ಪರಿಯನು ಮುದದಿಂದಲಿ ಅರಿತು ೧೬

ಪರಮ ಕರುಣೆಯಲೀ ರುದ್ರನು ಅರ್ಧ
ನಾರೀರೂಪ ತಾಳಿ ಇನ್ನೂ ಎಡದಿ
ಸುರರಸ್ತ್ರೀಗಳನ್ನು ಬಲದೀ
ಸುರಪುರಷರನ್ನೂ ।।ಆಹಾ।।
ಭರದಿ ಪುಟ್ಟಿಸಿ ಪ್ರದ್ಯುಮ್ನನ ಕೈಲಿತ್ತ
ಪರಿಪರಿ ಸೃಷ್ಟಿಯ ಕ್ರಮವರಿತು ನೀನೀಗ ೧೭

ಅನಿರುಧ್ದ ದೇವನು ಜೀವರ ಸ್ಥೂಲ
ತನುವ ಕೊಟ್ಟು ಪಾಲಿಪ ತದಭಿ–
ಮಾನಿ ಶ್ರೀ ಭೂ ದುರ್ಗಾ ಮಾಡಿ
ತಾನೆಲ್ಲರ ಸತತ ಪೊರೆವಾ ।।ಆಹಾ।।
ಅನವರತ ವಾಯು ಬ್ರಹ್ಮಸತಿಯರ
ಮಹತ್ತತ್ತ್ವಾಭಿಮಾನಿಗಳೆನಿಸಿದ ದೇವನ ೧೮

ಅಹಂಕಾರ ತತ್ತ್ವಾಭಿಮಾನಿ ಅದಕೆ
ಅಹಿಗರುಡರು ಅಭಿಮಾನಿ ಇನ್ನು
ಅನಿರುದ್ಧಾದಿ ರೂಪತ್ರಯವು ಇದಕೆ
ಇನ್ನು ನಿಯಾಮಕನು ಎನ್ನು ॥ಆಹಾ॥
ಮಹತ್ತತ್ವಾ ನಿಯಾಮಕ ವಾಸುದೇವನಿಂದ-
ನವರತ ಈ ಸೂಕ್ಷ್ಮಪ್ರಮೇಯ ಗ್ರಹಿಸಿ ನೀನು ೧೯

ಮನಸ್ತತ್ವಾಭಿಮಾನಿ ಸುರರಾ ಸೃಷ್ಟಿ
ಯನ್ನೆ ವೈಕಾರಿಕದಿಂದಲವರಾ ಮಾಡಿ
ಘನ್ನ ತೈಜಸದಿಂದಲಿಂದ್ರಿಯ ತತ್ವವೆ-
ಲ್ಲನೆಸಗಿದಂಥ ವಿವರಾ ॥ಆಹಾ॥
ಉನ್ನಂತ ತನ್ಮಾತ್ರ ಭೂತಪಂಚಕಗಳ
ತಾಮಸದಿಂದಲಿ ಉದಿಸಿದ ಪರಿಯನು ೨೦

ತತ್ವದೇವತೆಗಳಿನ್ನು ತಮಗೆ
ಯುಕ್ತಸ್ಥಾನಾದಿಗಳನ್ನು ಕೊಡೆ
ಉತ್ತಮೋತ್ತಮನನ್ನು ತಾವು
ಸುತ್ತಿ ಸ್ತುತಿಸಲು ಇನ್ನೂ ॥ಆಹಾ॥
ತತ್ವದೇವತೆಗಳ ಭಕ್ತಿಗೆ ಒಲಿದು
ತತ್ವರೆಲ್ಲರ ತೋರೆ ರೂಪದಿ ಧರಿಸಿಟ್ಟನು ೨೧

ರಜಸುವರ್ಣಾತ್ಮಕವಾದ ಘನ
ನಿಜ ಐವತ್ತು ಕೋಟಿ ಗಾವುದ ಉಳ್ಳ
ಅಜಾಂಡವನ್ನು ತಾ ತೋರ್ದ ತನ್ನ
ನಿಜಪತ್ನಿ ಉದರದಿ ಮಾಡ್ದ ॥ಆಹಾ॥
ಸೃಜಿಸಿ ಬ್ರಹ್ಮಾಂಡದಿ ತತ್ವಗಳೊಡಗೂಡಿ
ನಿಜವಾಗಿ ತಾನೊಳ ಪೊಕ್ಕ ವಿರಾಟನ್ನ ೨೨

ಪಾತಾಳಾದಿ ಸಪ್ತಲೋಕ ಕಡೆ
ಸತ್ಯಲೋಕ ಪರಿಯಂತ ರೂಪ

ತಾ ತಾಳಿದ ಆದ್ಯಂತ ಇಂತು
ನಿರತನು ಸಚ್ಚಿದಾನಂದ ॥ಆಹಾ॥
ಇಂತು ವಿರಾಟ ತನ್ನಂತರದೊಳು
ತತ್ವರೆಲ್ಲರ ತತ್‌ಸ್ಥಳದೊಳಿಟ್ಟು ಪೊರೆದನ್ನ ೨೩

ಲಕುಮಿಯಾತ್ಮಕ ವಾಯುವಿನಿಂದ-ಆಗ
ಸಕಲ ಉದಕ ಶುಷ್ಕದಿಂದ ಇರಲು
ತಕ್ಕ ಮುಕ್ತಾಮುಕ್ತರ ಭೇದದಿಂದ
ತಕ್ಕ ಸ್ಥಾನವೆ ಕಲ್ಪಿಸಿದ ಚೆಂದಾ ॥ಆಹಾ॥
ಅಕಳಂಕ ಪುನ್ನಾಮಕನು ಧಾಮತ್ರಯ
ಮೊದಲಾದ ನರಕ ಪಂಚಕಗಳ ಮಾಡಿದ ೨೪

ಉದಕ ಶೋಷಣೆಯನ್ನು ಮಾಡಿ ಇನ್ನುಮ-
ಹದಹಂಕಾರವ ಕೂಡಿ ಭೂತ
ಪಂಚಕವ ಮಿಳನ ಮಾಡಿ ಆಗ
ಹದಿನಾಲ್ಕೂದಳಾತ್ಮಕ ಪದ್ಮತೋರಿ ॥ಆಹಾ॥
ಅದುಭುತ ಪದುಮದಿ ಉದಿಸಿದ ಬ್ರಹ್ಮನು
ಚತುರ ನಾಲ್ಕುದಿಕ್ಕು ಮುದದಿಂದ ನೋಡಿದ ೨೫

ಪದುಮದಲಿ ಚತುರಾಸ್ಯನಾಗಿ ಅದು
ಭುತ ಮಹಿಮೆ ನೋಡುತ ತಾನೆ
ಮುದದಿಂದ ಮೊಗತಿರುಗಿಸುತಾ ಅದ
ಅದುಭುತ ಶಬ್ದಕೇಳುತ್ತಾ ॥ಆಹಾ॥
ತದಪೇಕ್ಷ ತಪವನಾಚರಿಸಿ ನಾಳದಿ ಬಂದು
ಪದುಮನಾಭನು ತಾನು ಮುದದಿಂದ ನೋಡಿದ ೨೬

ಪರಮಪುರುಷ ಉಕ್ತಿ ಲಾಲಿಸಿ ಮೆಚ್ಚಿ
ವರವ ಕೊಟ್ಟು ಪಾಲಿಸಿ ಸೃಷ್ಟಿ
ನಿರುತ ಮಾಡಲು ತಾ ಬೆಸಸೀ ತಾನು
ಅವನಂತರದೊಳು ನೆಲೆಸೀ ॥ಆಹಾ॥

ಹೊರಗೂ ಒಳಗೂ ನಿಂತು ಸೃಷ್ಟಿಲೀಲೆಯ
ತೋರ್ವ ಉರಗಾದ್ರಿವಾಸವಿಠಲ ವೇಂಕಟೇಶನ್ನ ೨೭

## ೮೧

ಧೇನಿಸೊ ಶ್ರೀಹರಿಯ ಮಹಿಮೆಯ ಪ

ಧೇನಿಸು ಲಯದ ವಿಸ್ತಾರ ಚತುರಾ
ನಾನಕಲ್ಪದ ವಿವರಾ ॥ಆಹಾ॥
ಧೇನಿಸು ಶತಾನಂದಗೆ ಶತ-
ಮಾನಕಾಲದಲ್ಲಿ ಇದ್ದು ನಡೆಸುವ ಹರಿಕಾರ್ಯ ಅ.ಪ

ಮೊದಲರ್ಧ ಶತಮಾನ ಸೂಕ್ಷ್ಮ ಸೃಷ್ಟಿ
ಪದುಮನ ತೋರಿದ ಮಹಾಮಹಿಮ ಆಗ
ಅದೆ ಪ್ರಥಮ ಪರಾರ್ಧವು ನೇಮ ಮೇಲೆ
ದ್ವಿತೀಯ ಭಾಗಕ್ಕೆಲ್ಲ ಬ್ರಹ್ಮ ॥ಆಹಾ॥
ಅದರೊಳು ತ್ರಿದಶ ಏಳರ್ಧ ವರ್ಷವು
ಪದುಮಜನಿಂದ ರಾಜ್ಯವನಾಳಿಸಿದ ಪರಿಯನು ೧

ದ್ವಾದಶಾರ್ಧವರುಷ ತಾ ಉಳಿಯೆ ಆಗ
ತೋರ್ದ ಅದುಭೂತವಾದ ಮಹಾಪ್ರಳಯ ಸೂಚ-
ನಾದಿ ಕಾರ್ಯವು ತಾ ಮೆರೆಯೆ ಶತ
ಅಬ್ದ ಅನಾವೃಷ್ಟಿ ತೋರಿರೆ ಆಹಾ॥
ಪದುಮಜಾಂಡದೊಳಿಹ ಪ್ರಜೆಗಳ ಸಂಹಾರ
ಉದಧಿ ಶೋಷಣೆಯಿಂದ ಸರ್ವಸಂಹಾರವು ೨

ಮೇರುಪರ್ವತ ಸ್ಥಳದಲ್ಲಿ ಇದ್ದ ವಿ-
ಧಿರುದ್ರಾದಿಗಳೆಲ್ಲರಲ್ಲಿ ಮಹ
ನರಸಿಂಹ ಆನಂದದಿಂದಲಿ ಆನಂದ
ತೋರುತ್ತ ಕುಣಿದಾಡುತ್ತಲಿ ॥ಆಹಾ॥
ಹರುಷೋದ್ರೇಕದಿಂದ ಸಂಗಡ ಕುಣಿಯುವ
ಸುರರವಯವಗಳ ತಾನಲಂಕರಿಸಿದನ ೩

ನರಹರಿ ನರ್ತನ ಮಾಡಿ ತನ್ನ
ಕರದಿ ತ್ರಿಶೂಲವನ್ನು ನೀಡಿ ದಿ-
ಕ್ಕರಿಗಳ ಪೋಣಿಸಿ ಆಡಿ ಸರ್ವರಲು-
ದರದೊಳಿಟ್ಟು ಕೂಡಿ ॥ಆಹಾ॥
ಪರಿಪರಿ ನಟಿಸುವ ನಿಟಿಲದೇವನ ಗ್ರಾಸ
ತ್ವರಿತದಿ ತಾ ಮಾಡಿ ಕ್ರೀಡಿಸುತಿರ್ಪನ್ನ ೪

ವಾಯುದೇವರ ಗದಾಪ್ರಹಾರದಿಂದ
ಭಯ ಹುಂಕಾರದಿಂದ ಜೀವರ ಲಿಂಗ
ಕಾಯ ಭಂಗಗೈದವರಾ ಅವರ
ಆಯತ ಸ್ಥಳದಲ್ಲಿಟ್ಟವರಾ ॥ಆಹಾ॥
ಲಯಕಾಲದಿ ಸಂಕರುಷಣ ಮುಖದಿಂದ
ಲಯವಾಗಲು ಅಗ್ನಿ ಪೊರಟು ದಹಿಪುದಾ ೫

ಕರಿಯ ಸೊಂಡಿಲಿನಂತೆ ಮಳೆಯ ಧಾರೆ
ನಿರುತ ಶತವರ್ಷಗರೆಯೆ ನೋಡೆ
ಸರ್ವತ್ರ ಜಲಮಯವಾಗೆ ಆಗ
ನೀರಜಾಂಡವೆಲ್ಲ ಕರಗೆ ॥ಆಹಾ॥
ಗರುಡ ಶೇಷ ಮಾರ್ಗವರಿತು ಬರುತಿರ್ಪ
ಸರ್ವಜೀವರ ತನ್ನ ಉದರದೊಳಿಟ್ಟನ್ನಾ ೬

ಅರಿಯೋ ನೀ ಶೇಷಮಾರ್ಗವನ್ನೂ ಇಲ್ಲಿ
ಸುರರು ಕುಬೇರನೊಳಿನ್ನು ಆತ
ವರುಣನಲ್ಲಿ ಲಯವನ್ನೂ ಚಂದ್ರ
ಹರಿಪಾರ್ಷಧರನಿರುದ್ಧನನ್ನು ಆಹಾ
ಅನಿರುದ್ಧ ಸನತ್ಕುಮಾರನ್ನ ತಾವು ಪೊಂದಿ
ಮಾರ ವಾರುಣಿಯು ಹರಿಮಡದಿಯರಲ್ಲಿ ಲಯವಾ ೭

ಖಗಪನೊಳವಶಿಷ್ಟ ಸುರರು ಮೊದಲು
ಅಗ್ನಿಯೊಳ್ ಲಯವನ್ನೈದುವರು ಆ

ಅಗ್ನಿ ತಾ ಸೂರ್ಯನ್ನ ಸೇರುವನು ಸೂರ್ಯ
ತಾ ಗುರುವನ್ನ ಸೇರುವನು ॥ಆಹಾ॥
ಆಗಲೇ ಸರ್ವಮನುಜರು ಪಿತೃಗಳು
ನಿರುಋುತಿಯೊಳು ಪೊಕ್ಕು ತಾ ಯಮನಲ್ಲಿ ಸೇರುವಾ ೮

ಯಮ ಪ್ರಿಯವ್ರತರಾಯರೆಲ್ಲ ಲಯ
ತಮ್ಮ ಸ್ವಾಯಂಭು ಮನುವಿನಲ್ಲಿ ಮತ್ತೆ ಮ-
ಹಿಮ ಭೃಗುವು ದಕ್ಷನಲ್ಲಿ ಲಯವು
ಆ ಮಹಾದಕ್ಷ ಸ್ವಾಯಂಭು ಇಂದ್ರನಲ್ಲೀ-ಆಹಾ
ಅಮರಪತಿಯು ತಾ ಸೌಪರಣಿಯನು ಪೊಂದಿ
ಈ ಮಾರ್ಗದಿ ತಾನು ಗರುಡನ್ನ ಸೇರುವುದು ೯

ಶೇಷಗರುಡರೊಡಗೂಡಿ ಆಗ
ಸರಸ್ವತಿಯನ್ನೆ ಪೊಂದುವರು ಮತ್ತೆ
ಆಸುವಿರಂಚಿ ವಾಯುಗಳು ತಾವು
ಸರಸ್ವತಿಯನ್ನೆ ಪೊಂದುವರು ಆಹಾ
ಈ ಸರಸ್ವತಿ ಕಾಲಬ್ರಹ್ಮನ್ನ ಸೇರುವ
ಈ ಸೂಕ್ಷ್ಮಲಯವನ್ನೆ ಕ್ರಮವರಿತು ನೀನೀಗ ೧೦

ಸೂತ್ರನಾಮಕ ವಾಯುದೇವ ರುದ್ರ
ಉಮೆಪ್ರದ್ಯುಮ್ನದ್ವಾರ ತ್ರಾತ
ಸಂಕುರುಷಣನಾ ದಯದಿ ಜಗ-
ನ್ಮಾತೆ ಲಕ್ಷ್ಮಿಯೊಳು ಸೇರುವರು ॥ಆಹಾ॥
ಚತುರಾಸ್ಯ ಜೀವರ ತನ್ನುದರದೊಳಿಟ್ಟು
ಅತಿಮೋದದಿಂದ ವಿರಾಟನ್ನೈದುವುದು ೧೧

ವಿರಾಟ್ ಬ್ರಹ್ಮನು ತಾನೆಲ್ಲಾ ತನ್ನ ಆ
ವರಣದಲ್ಲಿ ಇಪ್ಪಂಥ ತನ್ನ
ಧರೆಯಲ್ಲಿ ಲೀನವಾಗುವ ಆಗ

ಪರಿಪರಿಯಿಂದ ತನ್ಮಾತ್ರ ಆಹಾ
ಅರಿತು ಶಬ್ದಸ್ಪರ್ಶರೂಪರಸಗಂಧ
ಪರಿಪರಿಯಿಂದಲಿ ಲಯವನ್ನೈದುವುದಾ ೧೨

ಗಂಧದ್ವಾರ ಲಯತನ್ನ ಬಿಲದಿ ಜಾತ
ವೇದದಲ್ಲಿ ರಸ ಲಯವು ರೂಪ
ದದ್ವಾರ ಲಯ ವಾಯುವಿನೊಳು ಸ್ಪರ್ಶದ
ದ್ವಾರ ಲಯ ಆಕಾಶದೊಳು–ಆಹಾ–
ಶಬ್ದದ್ವಾರ ಲಯತಮ ಅಹಂಕಾರಾದಿ
ತದಾಂತರ್ಗತ ಭಗವದ್ರೂಪದಲ್ಲೈಕ್ಯವಾ ೧೩

ಅಹಂಕಾರತ್ರಯದಲಿ ಬಂದಾ ತತ್ತ್ವ
ದೇಹಸೂರರೆಲ್ಲರ ಲಯವು ಇಹ
ತತ್ವಾಂತರ್ಗತ ಭಗವದ್ರೂಪಕೆ ॥ಆಗ॥
ಅಲ್ಲಲ್ಲಿ ತನ್ನೊಳೈಕ್ಯವೂ–ಆಹಾ
ಅಹಂಕಾರತ್ರಯ ಮಹತ್ತತ್ವದಲ್ಲಿ ಲಯ
ಮಹತ್ತತ್ತ್ವವು ಮೂಲಪ್ರಕೃತಿಯಲ್ಲಿ ಲಯವು ೧೪

ವಾಸುದೇವಾದಿ ಚತುರ ರೂಪ ಮತ್ಸ್ಯ
ಕೇಶವ ವಿಶ್ವಾದಿ ರೂಪ ಅಜಿತ
ಶ್ರೀಶನನಂತಾದಿರೂಪ ಮತ್ತು
ಶ್ರೀಶನಷ್ಟೋತ್ತರ ರೂಪ ॥ಆಹಾ॥
ತಾ ಸಕಲರೂಪಗಳು ಮೂಲರೂಪದೊಳೈಕ್ಯ
ಶಾಶ್ವತನಾದ ಶ್ರೀ ಸಚ್ಚಿದಾನಂದನ್ನಾ ೧೫

ಗುಣಮಾನಿ ಶ್ರೀ ಭೂ ದುರ್ಗಾ ಅಂ–
ಭ್ರಣಿ ರೂಪವನ್ನೆ ತಾ ಧರಿಸೀ ಸಂ–
ಪೂರ್ಣನ್ನ ಸಾಮೀಪ್ಯ ಸೇರಿ ಪೂರ್ಣ
ಕಾಮನ್ನ ಎಡಬಿಡದೆ ನೋಡೀ ॥ಆಹಾ॥
ಕ್ಷಣ ಬಿಡದೊಡೆಯನ ಅಗಣಿತಗುಣಗಳ
ಕಡೆಗಾಣದೆ ನೋಳ್ಪ ನಿತ್ಯಮುಕ್ತಳ ಸಹಿತಾ ೧೬

ಏಕೋ ನಾರಾಯಣ ಆಸೀತ ಅ-
ನೇಕ ಜನರ ಸಲಹಲಿನ್ನು ತಾನೆ
ಸಾಕಾರದಲಿ ನಿಂದಿಹನು ಇಂತು
ವೇಂಕಟಾಚಲದಿ ಇನ್ನು ಮುನ್ನು ॥ಆಹಾ॥
ಏಕಮನಸಿನಿಂದ ಭಜಿಪ ಭಕ್ತರನ ತಾ ನಿ-
ರಾಕರಿಸದೆ ಕಾಯ್ವ ಶ್ರೀ ವೇಂಕಟೇಶಾ ನಿತ್ಯ ೧೭

## ೮೨

ನಾಮ ಮುದ್ರೆಯ ಧರಿಸೋ ಶ್ರೀಹರಿಯ ದಿವ್ಯ ಪ

ನಾಮ ಮುದ್ರೆಯ ಧರಿಸೆ ಆ ಯಮನಾಳುಗಳ
ಭೀಮವಿಕ್ರಮದ ಭಯ ಲೇಶವಿಲ್ಲವೋ ಅ.ಪ

ಚಕ್ರದೊಳು ಹೀಂಕಾರನಾಮಕನಾಗಿ
ನಕ್ರವೈರಿಯ ಕಾಯ್ವ ತಮವನ್ನು ಹರಿಸಿ
ವಿಕ್ರಮ ಕೃಧ್ಧೋಲ್ಕ ತಮಲೋಕದೊಳು ಇದ್ದು
ಚಕ್ರಧರಿಸದ ಜೀವರ ಕ್ರೂರತನದಲಿ ಶಿಕ್ಷಿಪಾ ೧

ಶಂಖದೊಳು ಪ್ರತೀಹಾರನಾಮಕ ಹರಿ ಇರುವ
ಶಂಕಿಸಬೇಡವೊ ಮೋಹವ ಹರಿಸುವ
ಶಂಕಿಸುವವನ ಪಾಪಪಂಕದೊಳಿಟ್ಟು
ಮಂಕುಕವಿಸಿ ಮಹೋಲ್ಕ ಶಿಕ್ಷಿಪನಯ್ಯ ೨

ಗದೆಯೊಳು ನಿಧನನಾಮಕ ಹರಿಯು ತಾನಿದ್ದೂ
ಒದಗುವ ಮನಮೋಹವನ್ನು ಹರಿಸುವ
ಮುದದಿ ಮರೆಯುವವರನಾ ವೀರೋಲ್ಕ ತಾ
ಸದೆ ಬಡಿಯುವನು ತನ್ನ ಗದೆಯಿಂದಲಿ ನಿತ್ಯ ೩

ಪದುಮನೊಳು ಪ್ರಸ್ತಾವನಾಮದಿ
ಮುದದಿ ಭಕ್ತರ ಅಂಧತಾಮಿಶ್ರವ ಹರಿಸುವ

ಪದ್ಮರಹಿತ ಮಾನವರ ದ್ವ್ಯುಲ್ಕರೂಪದಿ
ವಧಿಸುವ ತಾಮಿಶ್ರ ನರಕದೊಳು ನಿತ್ಯ ೪

ನಾರಾಯಣ ಮುದ್ರೆಯೊಳು ಉದ್ಗೀಥನು
ಹರಿಭಕುತರ ಅಂಧತಾಮಿಶ್ರ ಕಳೆವನು
ದುರುಳ ಕಲ್ಯಾದ್ಯರ ಸಹಸ್ರೋಲ್ಕ ರೂಪದಿ
ಕ್ರೂರತನದಿ ಅಂಧಂತಮದೊಳಿಡುವನು ೫

ನೇಮದಿ ದ್ವಾದಶ ಊರ್ಧ್ವಪುಂಡ್ರಗಳು
ಕಮಲ ತುಲಸಿಮಣಿಮಾಲೆಗಳ ಕೊರಳೊಳು
ವಿಮಲ ಮನಸಿನಿಂದ ಧರಿಸುವ ಮನುಜರಿಗೆ
ಯಮನಾಳುಗಳ ಭಯ ಲೇಶವಿಲ್ಲೆಂದಿಗೂ ೬

ಪಂಚರೂಪಾತ್ಮಕ ಹರಿಯನ್ನೆ ನೆನೆಯುತ
ಪಂಚ ಪಂಚ ಕರಣಗಳ ಕಾರ್ಯ ಒಪ್ಪಿಸೇ
ಪಂಚನರಕಬಾಧೆ ಕಿಂಚಿತ್ತಾದರು ಇಲ್ಲ
ಪಂಚಾನನನುತ ಶ್ರೀ ವೇಂಕಟೇಶನ ದಿವ್ಯ ೭

## ೮೩

ಪಂಚರೂಪಾತ್ಮಕ ನೀನೇ ಈ
ಪಾಂಚಭೌತಿಕ ದೇಹದಿ ಸಂಚರಿಸೂವೆ ಪ

ಪಂಚಕೋಶಗಳಲ್ಲಿ ಚರಿಸಿ ಹಂಚಿಕೆ ಕೊಡುವೆಯೊ
ಸ್ಥೂಲರಸವನು
ಪಾಂಚಭೌತಿಕ ದೇಹಕುಪಚಯ ಹಂಚಿಕಿಂದಲಿ
ಇತ್ತು ಸಲಹೂವೆ ಅ.ಪ

ರಸಪಾಯುಆಪಜಿಹ್ವೆನಾಸಿಕ ಗಂಧ
ಪೃಥುವಿ ಉಪಸ್ಥಯುಕ್ತ ಕೋಶವಹುದಯ್ಯ

ಅನ್ನಾಮಯವೆನ್ನುತ ಕೋಶಾಂತರ್ಗತ
ಅನಿರುದ್ಧದೇವನೆ ನಿರುತ
ಆ ಶನ್ಯೈಶ್ವರ ವರುಣ ಭೂದೇವಿಯಿಂದಲಿ ಸೇವಿಪ ಸತತ
ಲೇಶವಾದರು ಬಿಡದೆ ತಾ ಖಂಡಾಖಂಡ ರೂಪದಿ
ದೇಶ ಕಾಲಗಳಲ್ಲಿ ನೆಲೆಸಿ ಕೋಶಕಾರ್ಯವ ಗೈವೆ ಪ್ರಾಣನಿಂ
ನಾಶರಹಿತನಿರುದ್ಧದೇವನೆ ನಿನ್ನ ರೂಪವು ಈ ಸ್ಥೂಲದೊಳು
ಈ ಶರೀರದ ಶಿರವೆ ನಿನ್ನಯ
ಶಿರದ ಸ್ಥಾನವೆಂದು ಪೇಳುವರು ಈಶ ನಿನ್ನಯ
ಉಭಯಪಕ್ಷಗಳು
ಧೇನಿಸುತಿಹರು ಭುಜದ್ವಯ ಶ್ರೀಶ ನಿನ್ನಯ ಮಧ್ಯದೇಶವೆ
ಈ ಶರೀರದ ಮಧ್ಯಭಾಗವು ಪ್ರಸಿದ್ಧ ಪುರುಷನೆ
ಪುಚ್ಛ ಭಾಗವು ಪಾದವೆನಿಸುವುದು ಈಶ
ನಿನ್ನಿಂದೋಷಧಿಗಳು
ಓಷಧಿಗಳಿಂದನ್ನವೆಲ್ಲವು ಪೋಷಣೆ ಎಲ್ಲ
ಅನ್ನದಿಂದಲೆ ದೋಷದೂರ ನೀನನ್ನದನ್ನದಾ ೧

ಪಾಣಿತ್ವಗ್ವಾಯು ಸ್ಪರ್ಶ ನೇತ್ರ ತೇಜ ಪಾದರೂಪಗಳಿಂದಲಿ
ಕಾಣಿಸಿಕೊಳ್ಳುವುದು ಪ್ರಾಣಮಯದ ಕೋಶವು ತಾನಲ್ಲಿಹ
ಪ್ರದ್ಯುಮ್ನ ಮೂರುತಿ ಸತತ-ಗಣಪತಿ ಅಗ್ನಿ ವಾಯು
ಮರೀಚಿಗಳೆಲ್ಲರೂ ಸನ್ನುತಿಪರೋ
ಕ್ಷಣಬಿಡದೆ ಖಂಡಾಖಂಡರೂಪದಿ ಜೀವ
ಪ್ರಾಣಾಧಾರನಾಗಿಹೆ ತ್ರಾಣ ನಿನ್ನಿಂದ ಸ್ಥೂಲದೇಹಕೆ ಅ-
ಪಾನ ನಿಂದೊಡಗೂಡಿ ನೆಲೆಸಿಹೆ ಪ್ರಾಣಪತಿ ಪ್ರದ್ಯುಮ್ನ
ನಿನ್ನಯ ಶಿರದ ಸ್ಥಾನವು ಪ್ರಾಣನಲ್ಲಿಹುದೋ
ಎಣಿಸುವರೋ ವ್ಯಾನೋದಾನದೊಳ್
ದಕ್ಷಿಣೋತ್ತರಪಕ್ಷವಿರುತಿಹುದೋ
ಕಾಣಿಪುದು ಮಧ್ಯದೇಶವು ಆಗಸದೊಳು ಉ-
ದಾನ ವಾಯುವಿನಲ್ಲಿ ಇರುತಿಹುದೋ
ಧೇನಿಪೋರು ಪೃಥುವಿಯು ಪಾದವೆಂಬುದು ಸ-

ಮಾನ ವಾಯುವಿನಲಿ ಇರುತಿಹುದು
ಜ್ಞಾನ ರೂಪದಿ ಈ ಪರಿಯಲಿ ರೂಪವಿರುತಿಹುದು
ಪ್ರಾಣಿಗಳಿಗಾಯುಷ್ಯವಿತ್ತು ಪ್ರಾಣಪ್ರೇರಕನಾಗಿ ಪೊರೆಯುವೆ
ಪ್ರಾಣಧಾರಣೆ ನಿನ್ನದಯ್ಯಾ ಪ್ರಾಣನುತ ಪ್ರದ್ಯುಮ್ನಮೂರುತೆ ೨

ಚಿತ್ತ ಅಹಂಕಾರ ಬುದ್ಧಿ ಅಂತಃಕರಣ ಮನ ಅಹಂಕಾರ
ತತ್ವಯುತವಾಕ್ಯೋಕ್ತಾಗಸ ಶಬ್ದ
ಈತೆರ ಯುಕ್ತವಾದೀ ಕೋಶವು ಇದಕೆ
ಖ್ಯಾತವಾದ ಮನೋಮಯ ಕೋಶದೊಳು
ಸತತ ರುದ್ರೇಂದ್ರಾದಿ ಸುರರೆಲ್ಲರು ವಂದಿಸುತಿಹರು
ಖ್ಯಾತ ಸಂಕರುಷಣನೆ ಖಂಡಾಖಂಡರೂಪದಿ ನೆಲೆಸಿ ಕೋಶದಿ
ಪ್ರೀತಿಯಿಂದಲಿ ವ್ಯಾನನೊಡಗೂಡಿ
ಸತತ ಮನಸಿನ ಕಾರ್ಯ ಮಾಳ್ಪೆ ದಾತನು
ನೀನೆ ಯಜ್ಞಭುಕುವು
ಯಜುರ್ವೇದವೆ ನಿನ್ನ ಶಿರವಹುದು ಶ್ರುತಿಗಳೊಳು
ಋಕ್‌ಸಾಮವೇದಗಳೆಂಬುವೆ ನಿನಗೆ
ಭುಜದ್ವಯಂಗಳಾಗಿಹುದು ನುತಿಪ ಪಾಂಚರಾತ್ರಾಗಮ ವೆಂಬುದೆ
ನಿನ್ನಯ ಮಧ್ಯದೇಶವು ಅಥರ್ವ ಆಂಗೀರ
ನಾಮಕಂಗಳೆನಿಪುದೆ ನಿನ್ನ ಪಾದದ್ವಯಂಗಳು
ಖ್ಯಾತ ನಿನ್ನಯ ರೂಪ ಮಹಿಮೆಯ ತಿಳಿಯಲಸದಳವೋ
ಜಾತರಹಿತ ನಿನ್ನ ವರ್ಣಿಸೆ ಮಾತು ಮನಸಿಗೆ
ನಿಲುಕದಂತಿಹೆ ಖ್ಯಾತ ನೀನಹುದೊ ಮನೋಮಯ
ಪ್ರೀತಿಯಿಂದಲಿ ಸಲಹೋ ಎನ್ನನು ೩

ಮಹತ್ತತ್ವ ಪ್ರಾಚುರ್ಯದಿಂದಿಹ ಈ ವಿಜ್ಞಾನಮಯಕೋಶದಿ
ಶ್ರೀಹರಿ ವಾಸುದೇವಾ ನೀನೆ ನೆಲೆಸಿಹೆ
ಅಹರಹ ಬ್ರಹ್ಮ ವಾಯುಗಳಿಂದಲಿ
ಮಹಾಪೂಜೆ ವಂದನೆಗೊಳುತಿಹೆ–

ಖಂಡಾಖಂಡದಿ ತುಂಬಿಹೆ
ದೇಹದೊಳು ಉದಾನನಿಂದೊಡಗೂಡಿ
ಸಹಾಯನಾಗಿಹೆ ಜೀವಿಗಳಿಗೆ
ಮೋಹ ಹರಿಸಯ್ಯ ಮಾಯಾಪತಿಯೆ
ಬಾಹ ದುರಿತದಿಂ ಪಾರುಗಾಣಿಸೋ
ದೇಹ ದೇಹಿಯ ರೂಪ ನೀ ಸ್ವಗತಭೇದವಿವರ್ಜಿತನೆ
ಬ್ರಹ್ಮಾದಿವಂದ್ಯನೆ ಶ್ರುತಿಯ ಧರಿಸಿದೆ
ಶಿರವೆ ನಿನ್ನಯ ಶ್ರದ್ಧವೆಂಬೊರು
ಮಹಾ ಭುಜಂಗಳೆ ಋತುಸತ್ ಎಂದೆನಿಸಿಕೊಳುತಿಹುದು
ಇಹುದು ಮಧ್ಯದೇಶವೆ ಜಗಕೆ ಆಶ್ರಯವೆನಿಪ ಯೋಗಾವು
ಮಹವೆಂಬುದೆ ಪಾದವೆನಿಸಿತು ಸೂರ್ಯತೇಜದೊಳು
ಮಹಾಮಹಿಮನೆ ಪೊಗಳಲಳವೆ
ಮೋಹಪಾಶದಿ ಬಿದ್ದ ಜೀವರ
ಮಹಾ ಪ್ರಳಯದಿ ಉದರದೊಳಿಟ್ಟು
ಇಹಪರದಿ ರಕ್ಷಿಸುವೆ ದೇವ ೪

ನಂದಮಯ ಕೋಶವು ತನ್ಮಯ
ಅವ್ಯಕ್ತತತ್ವದಿಂದಲಿ ನನ್ನೀಯಿಂದ
ಆನಂದಮಯ ಮೂರುತಿ ನಾರಾಯಣನೀ
ಕೋಶಾಂತರ್ಗತನು ನೀನೆ ಸಮಾನನೊಡಗೂಡಿಹೆ
ಸನ್ನಿಧಿಯಲ್ಲಿ ಶ್ರೀಯು ನುತಿಸುತಿಹಳೋ
ಅನಾದಿಲಿಂಗವ ಭಂಗಗೈಸುವಳೋ
ಘನಮಹಿಮ ನಿನ್ನ ಅನುಸರಿಸಿ ತಾನಿಪ್ಪಳೋ
ಛಿನ್ನ ಭಕ್ತರಿಗೊಲಿಯಳೋ ಅವಿ
ಚ್ಛಿನ್ನ ಭಕ್ತರ ಜನನಿ ಎನಿಪಳೋ
ಶ್ರೀನಾರಾಯಣ ನಿನ್ನ ಶಿರ ಮುಕುತರಿಗೆ
ಪ್ರಾಪ್ಯನು ಎಂದು ಪ್ರಿಯವೆಂದು
ಘನ ದಕ್ಷಿಣೋತ್ತರ ಪಕ್ಷವೆನಿಪೋವು
ಮೋದ ಪ್ರಮೋದಗಳು ಘನ ಆನಂದವೆಂಬುದೆ

ತನ್ನ ಮಧ್ಯದ ಪ್ರದೇಶವೆಂಬೋದು
ಜ್ಞಾನ ಸುಖ ಆನಂದ ಪಾದಗಳು
ಬ್ರಹ್ಮನಾಮಕ ವಾಯುವೆಂಬುವರೋ
ಆನಂದಮೂರುತಿ ಮಹಿಮೆ ಎಂತಿಹುದೋ
ಭಿನ್ನನಾಮದಿ ಕರೆಸುತಲಿ ತಾ ಅ
ಭಿನ್ನನಾಗಿ ಚರಿಸಿ ಕೋಶದಿ
ಘನಕಾರ್ಯವ ನಡೆಸುತಿರ್ಪ
ಪನ್ನಗಾದ್ರಿ ಶ್ರೀ ವೇಂಕಟೇಶನೆ ೫

## ೮೪

ಪಂಚರೂಪಾತ್ಮಕ ಪ್ರಪಂಚ ಕಾರ್ಯಕನುವಾದ
ಪಂಚೀಕರಣಮಾಡಿ ತಾ ಸಂಚರಿಸುವ ಪ

ಪಂಚೀಕರಣತಿಳಿಯದೆ ಪ್ರಪಂಚದೊಳು ಮುಳುಗಿ ನಾ
ವಂಚಿತನಾದೆ ವಿರಿಂಚಿಭಕ್ತಿಗೆ ಅ.ಪ

ಸಚ್ಚಿದಾನಂದ ರೂಪ ವ್ಯಾಪ್ತರೂಪಿ ನಾರಾಯಣ ಅಪ-
ರಿಚ್ಛಿನ್ನ ಮೂಲಪ್ರಕೃತಿ ತ್ರಿಗುಣಗೈಸಿದ
ಅಚ್ಯುತ ತನ್ನಿಚ್ಛೆಯಿಂದ ವೈಕೃತಾಕಾಶಕ್ಕೆ
ಅಂಭ್ರಣಿದೇವಿಯರನೆ ಮುಖ್ಯ ಮಾಡಿದಾ ೧

ಗುಣರಾಶಿಯೊಳು ಸತ್ವಕ್ಕೆ ಶ್ರೀದೇವಿಯರು ಮುಖ್ಯ
ರಜಕೆ ಭೂದೇವಿ ತಮಕೆ ದುರ್ಗಾದೇವೇರು
ಸತ್ಯಜ್ಞಾನಾನಂದದಯೆ ಮೌನಪಂಚೇಂದ್ರಿಯ ಜಯ
ಅಕ್ರೌರ್ಯಗುರು ಸೇವೆಯೇ ಸತ್ವಕಾರ್ಯವು ೨

ತಮಕ್ರೋಧ ಅಹಂಕಾರ ಮದೋನ್ಮಾದ ಚಪಲೋದ್ಯೋಗ
ಡಂಭ ಸ್ವಚ್ಛಂದರಜದ ಕಾರ್ಯವು
ತಮದ ಕಾರ್ಯ ಅಜ್ಞಾನ ಮೋಹ ನಿದ್ರಾಲಸ್ಯ
ಬುದ್ಧಿಶೂನ್ಯ ತಾಪವಾದಿ ಹಿಂಸಾಕಾರ್ಯವು ೩

ಸತ್ವಪ್ರಾಚುರ್ಯದಿ ಮದ ಗುಣತ್ರಯವೈಷಮ್ಯಹೊಂದಿ
ಶ್ರೇಷ್ಠಕಾರ್ಯಕೆ ಮಹತ್ತತ್ವವಾಯಿತು
ಸಾತ್ವತಾಂಪತಿಯ ಇಚ್ಛೆಯಿಂದ ಮಹತ್ತತ್ವದಿ
ಅಹಂಕಾರ ತತ್ವವೆಂಬುದೇರ್ಪಟ್ಟಿತು ೪

ಮೂರಾಯಿತು ಅಹಂಕಾರ ವೈಕಾರಿಕ ತೈಜಸ
ತಾಮಸ ಅಹಂಕಾರ ವೆನುತಲಿ ಮೂರಹಂ-
ಕಾರದಿ ಮೂರು ರುದ್ರರೂಪಗಳು ಬ್ರಹ್ಮವಾಯು
ಶೇಷರಿಂದುದಯಿಸಿದರು ೫

ವೈಕಾರಿಕ ಅಹಂಕಾರದಿ ದೇವತಾ ದೇಹ ಮನಸು
ತೈಜಸದಿಂದ ದಶೇಂದ್ರಿಯ ಹುಟ್ಟಿತು
ಸಕಲಭೂತಪಂಚಕವು ಪಂಚತನ್ಮಾತ್ರಗಳು
ತಾಮಸಾಹಂಕಾರದಿಂದುತ್ಪನ್ನವಾದುವು ೬

ಸರ್ವ ಮಿಳಿತಮಾಡಿ ಬ್ರಹ್ಮಾಂಡವನೆ ಸೇರಿ
ಹರಿಯು ಪದ್ಮನಾಭರೂಪದಿಂದ ಶಯನಗೈದನು
ಸರ್ವಲೋಕೋದ್ಧಾರ ಹರಿಯು ನಾಭಿಯೊಳು ಪದ್ಮ
ತೋರಿ ಪದುಮದಲ್ಲಿ ಪದ್ಮಸಂಭವನಾಸೃಜಿಸಿದ ೭

ಸರ್ವರಂತರ್ಯಾಮಿ ಸಕಲಜೀವರನ್ನು ಸೃಷ್ಟಿಗೈಸಿ
ಜೀವಯೋಗ್ಯತಾ ಕಾರ್ಯ ನಡೆಸುತಿರುವನು
ಸರ್ವಜೀವಕಾರ್ಯವು ಪಂಚವಿಂಶತಿತತ್ವ ಈ-
ಶರಿಂದಲೆ ಕಾರ್ಯನಡೆಯುತಿರುವುದು ೮

ಶಬ್ದತನ್ಮಾತ್ರದಿಂದ ಆಕಾಶ ಹುಟ್ಟಿತು ವಾಯುಹುಟ್ಟಿತು
ಸ್ಪರ್ಶತನ್ಮಾತ್ರದಿ ರೂಪತನ್ಮಾತ್ರದಿ ಅಗ್ನಿಭೂತ ಹುಟ್ಟಿತು
ಆಗ ರಸತನ್ಮಾತ್ರದಿ ಅಪ್ಪು ಹುಟ್ಟಿತು ೯

ಪ್ರಥ್ವಿ ಹುಟ್ಟಿತು ಗಂಧತನ್ಮಾತ್ರದಿಂದಲಿ
ಈ ಪರಿವಿರಾಟದಿಂದುಯಿಸಿದವು ಆಕಾಶ
ಕೊಂದೆ ಶಬ್ದಗುಣವು ಮಾತ್ರ ಇರುವುದು
ಅಹುದು ವಾಯುವಿಗೆ ಶಬ್ದ ಸ್ಪರ್ಶವೆರಡುಗುಣಗಳು ೧೦

ತೋರುತಿರ್ಪುದಗ್ನಿ ಶಬ್ದಸ್ಪರ್ಶರೂಪ ಗುಣಗಳು
ಅಪ್ಪುಗಿಹುದು ಶಬ್ದಸ್ಪರ್ಶರೂಪರಸ
ಗುಣ ಶಬ್ದ ಸ್ಪರ್ಶ ರೂಪ ರಸ ಗಂಧವೈದು
ಪೃಥ್ವಿಗುಣವು ಈ ಪರಿ ಭೂತಪಂಚಕಗಳ ಅರಿವುದು ೧೧

ಪಂಚಭೂತಗಳು ತಮ್ಮ ಸ್ವಾಂಶಗಳ ಭಾಗಗೈಸಿ ಪ್ರ-
ಪಂಚ ಕಾರ್ಯಕಿತ್ತ ಪರಿಯದೆಂತೆನೆ ಆಕಾಶ
ದರ್ಧಭಾಗ ಭೂತ ಪ್ರೇತ ಪಿಶಾಚಿಗಳಿಗೂ ಉಳಿ
ದರ್ಧದೊಳ್ ಪಾದ ಪಾದವೆನ್ನೆ ಜೀವಕೋಟಿಗೂ ೧೨

ವಾಯು ತನ್ನರ್ಧಭಾಗ ಪಕ್ಷಿ ಪನ್ನಗಾದಿಳಿಗೂ
ಮಿಕ್ಕರ್ಧದೊಳು ಪಾದ ಭಾಗ ಜೀವಕೋಟಿಗೂ
ಅಗ್ನಿತನ್ನರ್ಧಭಾಗ ದೇವ ಋಷಿಗಳಿಗೂ
ಮಿಕ್ಕರ್ಧದೊಳ್ ಪಾದಭಾಗ ಜೀವಕೋಟಿಗೂ ೧೩

ಅಪ್ಪುತನ್ನರ್ಧಂಶ ಜಲಚರಪ್ರಾಣಿಗಳಿಗು
ಮಿಕ್ಕರ್ಧದೊಳು ಪಾದಭಾಗ ಜೀವಕೋಟಿಗೂ
ಪೃಥ್ವಿ ತನ್ನರ್ಧಂಶ ಜಡಜೀವಕೋಟಿಗೂ ಮಿಕ್ಕ
ರ್ಧದೊಳ್ ಪಾದಭಾಗ ಜೀವಕೋಟಿಗೂ ೧೪

ಪೃಥ್ವಿ ಅಪ್ಪು ತೇಜೋ ವಾಯು ಆಕಾಶಗಳು
ಸೂಕ್ಷ್ಮರೂಪದಿಂದೆರಡೆರಡಾದವು
ಆಕಾಶತನ್ನರ್ಧಾಂಶದಲ್ಲಿ ವಾಯ್ವಗ್ನಿ ಅಪ್ಪು ಪೃಥ್ವಿಗಳಿ
ಗೆ ಕೊಟ್ಟು ಸ್ವಾಂಶ ಅಂತಃಕರಣವೆನಿಸಿತು ೧೫

ವಾಯು ಸ್ವಾಂಶದಿಂದುದಾನವೆಂದೆನಿಸಿ ಮಿಕ್ಕ
ಪೃಥ್ವ್ಯ ಪ್ತೇಜಾಕಾಶಗಳಿಗೆ ತನ್ನ ಚಲನ ಕೊಟ್ಟಿತು

ಅಗ್ನಿ ತನ್ನಸ್ವಾಂಶದಿಂದ ಚಕ್ಷುಸೇಂದ್ರಿಯ
ವೆನಿಸಿ ವಾಯ್ವಾಕಾಶಅಪ್ಪು ಪೃಥ್ವಿಗುಷ್ಣ ಕೊಟ್ಟಿತು ೧೬

ಅಪ್ಪು ತನ್ನ ಸ್ವಾಂಶದಿಂ ರಸವೆಂದೆನಿಸಿ ಮಿಕ್ಕ
ವಾಯ್ವಾಕಾಶಾಗ್ನಿ ಪೃಥ್ವಿಗೆ ದ್ರವವ ಕೊಟ್ಟಿತು
ಪೃಥ್ವಿತನ್ನ ಸ್ವಾಂಶದಿಂ ಗಂಧವೆಂದೆನಿಸಿ ಮಿಕ್ಕ
ಅಪ್ತೇಜವಾಯ್ವಾಕಾಶಕೆ ಕಠಿಣ ಕೊಟ್ಟಿತು ೧೭

ಭೂತಪಂಚಕಗಳಿಗೆ ಸದ್ಯೋಜಾತ ವಾಮದೇವ
ಅಘೋರ ತತ್ಪುರುಷ ಈಶಾನ ರೂಪವು
ಅಧಿಷ್ಠಾನರಾಗಿ ಅವರಂತರ್ಯಾಮಿಯಾಗಿ
ಅನಿರುದ್ಧಾದಿ ಐದು ಭಗವನ್ಮೂರ್ತಿ ಇರುವುದು ೧೮

ನಾಮರೂಪ ವರ್ಣಗುಣ ಸ್ವಭಾವ ತೇಜ
ಸುಮುಖ ದೇವರಶಕ್ತಿ ಅಕ್ಷರ ಕ್ರಿಯಾ
ಎಂಬೀ ಹತ್ತು ಗುಣಗಳು ಭೂತ ಒಂದಕ್ಕೆ ತಿಳಿದು
ಉಪಾಸನ ಮಾಳ್ಪಾದೂ ಬುಧರು ಎಲ್ಲರು ೧೯

ನಾಮವೇ ಆಕಾಶ ರೂಪ ಒಟ್ಟು ಭಾವ ಬಯಲು
ವರ್ಣ ಕಪ್ಪು ಗುಣಶಬ್ದ ಕ್ರಿಯ ಅನುಗ್ರಹ
ಮುಖವೇ ಈಶಾನ ದೇವತೆ ಪರಶಿವಶಕ್ತಿ
ಪರಾಶಕ್ತಿ ಅಕ್ಷರವೇ ನಾದವು ೨೦

ನಾಮ ವಾಯುರೂಪ ಷಟ್ಕೋಣ ವರ್ಣನೀಲ
ಸ್ವಭಾವಚಲನ ಗುಣವು ಸ್ಪರ್ಶ ಕ್ರಿಯಾಸಂಚಾರ
ಮುಖ ತತ್ಪುರುಷ ದೇವತೆ ಸದಾಶಿವ ಶಕ್ತಿ
ಅಕ್ಷರ ಬಿಂದುವೆನಿಪುದು ೨೧

ನಾಮ ಅಗ್ನಿರೂಪ ಮುಕ್ಕೋಣವರ್ಣ ರಕ್ತವರ್ಣ
ಭಾವ ಉಷ್ಣಗುಣತೇಜ ಕ್ರಿಯಾಸಂಹಾರ

ಮುಖ ಅಘೋರ ದೇವತೆ ರುದ್ರಶಕ್ತಿ ಪಾರ್ವತಿ
ಅಕ್ಷರ ಮಕಾರ ೨೨

ನಾಮ ಅಪ್ಪುರೂಪ ಅರ್ಧೇಂದು ಶ್ವೇತವರ್ಣ
ಸ್ವಭಾವದ್ರವ ಗುಣ ಮಾಧುರ್ಯ
ಕ್ರಿಯ ರಸಮುಖ ವಾಮದೇವ ದೇವತೆ
ವಿಷ್ಣುಶಕ್ತಿ ಅಕ್ಷರಉಕಾರ ಎಂದು ಪೇಳ್ವರು ೨೩

ನಾಮವೇ ಪೃಥ್ವಿರೂಪ ಚತುಷ್ಕೋಣ ವರ್ಣ
ಹೇಮ ಸ್ವಭಾವವೇಕಠಿಣ ಕ್ರಿಯ ಸೃಷ್ಟಿ
ಗುಣವೆ ಗಂಧವು ಮುಖಸದ್ಯೋಜಾತ ದೇವತೆ
ಬ್ರಹ್ಮಶಕ್ತಿ ಸರಸ್ವತಿ ಅಕ್ಷರ ಅಕಾರವು ೨೪

ಉಕ್ತರೀತಿ ಹತ್ತು ಗುಣಗಳೊಳ್ ಭೂತ ಒಂದ-
ಕ್ಕೆತಿಳಿದು ಈ ಜ್ಞಾನೇಂದ್ರಿಯಗಳೆಂತಾದವು
ಎಂದರಿವುದು ಆಕಾಶಸಮಾನಾಂಶ ಅಗ್ನಿಯು
ಮುಖ್ಯಾಂಶದಿರೆ ಶ್ರೋತ್ರೇಂದ್ರಿಯ ಹುಟ್ಟಿ ತೋರುತಿರುವುದು ೨೫

ವಾಯುಸಮಾನಾಂಶ ಬಂದು ಅಗ್ನಿ ಮುಖ್ಯಾಂಶದಿರೆ
ತ್ವಗೇಂದ್ರಿಯವು ತಾನೆ ತೋರುತಿರುವುದು
ಅಪ್ಪು ಸಮಾನಾಂಶ ಬಂದು ಅಗ್ನಿ ಮುಖ್ಯಾಂಶದಿರೆ
ಜಿಹ್ವೇಂದ್ರಿಯವು ತೋರುತಿರುವುದು ೨೬

ಪೃಥ್ವಿಸಮಾನಾಂಶ ಬಂದು ಅಗ್ನಿ ಮುಖ್ಯಾಂಶದಿರೆ
ಘ್ರಾಣೇಂದ್ರಿಯವು ತಾನೆ ತೋರುತಿರುವುದು
ಅಗ್ನಿ ಸ್ವಾಂಶದಿಂದ ಚಕ್ಷುಷೇಂದ್ರಿಯವೆಂದು
ಹಿಂದೆಯೇ ಈ ವಿವರ ಪೇಳಿರುವುದು ೨೭

ಪೃಥ್ವಿಸಮಾನಾಂಶದೊಡನೆ ಆಕಾಶ ಸಮಾಂಶಸೇರೆ
ವಾಗೇಂದ್ರಿಯವೆ ತಾನೆ ತೋರುತಿರುವುದು ಪೃಥ್ವಿ

ಮುಖ್ಯಾಂಶದೊಡನೆ ವಾಯು ಸಮಾಂಶಸೇರೆ
ಘ್ರಾಣೇಂದ್ರಿಯವು ತಾನೆ ತೋರುವುದು ೨೮

ಪೃಥ್ವಿಮುಖ್ಯಾಂಶದೊಡನೆ ಅಗ್ನಿ ಸಮಾಂಶಸೇರೆ
ಪಾದೇಂದ್ರಿಯವು ತಾನೆತೋರುತಿರ್ಪದು
ಪೃಥ್ವಿ ಮುಖ್ಯಾಂಶರೊಡನೆ ಅಪ್ಪು ಸಮಾವಾಂಶ ಸೇರೆ
ಪಾಯೇಂದ್ರಿಯವೆಂದು ತೋರುತಿರ್ಪುದು ೨೯

ಪೃಥ್ವಿಸ್ವಾಂಶವೇ ಗುಹ್ಯೇಂದ್ರಿಯವೆಂದು ಪೂ
ರ್ವೋಕ್ತ ರೀತಿಗಣನೆ ತರುವುದು ಈ ರೀತಿ
ಕರ್ಮೇಂದ್ರಿಯಗಳೆಲ್ಲ ಪೃಥ್ವಿ ತತ್ವದಿಂದಲೇ–
ರ್ಪಟ್ಟು ಬೆಳಗುತಿರುವುದು ೩೦

ಆಕಾಶ ಸಮಾನಾಂಶ ಅಪ್ಪು ಮುಖ್ಯಾಂಶದಿರೆ ಶಬ್ದ
ವಾಯು ಸ್ವಯಾಂಶದಿ ಅಪ್ಪು ಮುಖ್ಯಾಂಶದಿ
ಸ್ಪರ್ಶತೋರ್ಪುದು ಅಗ್ನಿ ಸಮಾನಾಂಶ ಅಪ್ಪು ಮು
ಖ್ಯಾಂಶದಿರೂಪ ಗಂಧ ವಹುದು ಪೃಥ್ವಿ ಸಮಾಂಶ
ಅಪ್ಪು ಮುಖ್ಯಾಂಶದಿಂದಲೆ ೩೧

ಅಪ್ಪುಸ್ವಯಾಂಶವೇ ರಸವು ಎಂದೆನಿಸಿತು
ತನ್ಮಾತ್ರಪಂಚಕಕ್ಕೆ ಮೂಲ ಅಪ್ಪುತತ್ವವು
ಪ್ರಾಣಾದಿಪಂಚಗಳ ಮುಂದೆ ವಿವರಿಸಿಹುದು
ವಾಯುತತ್ವವೇ ಅದಕೆ ಮುಖ್ಯಕಾರಣ ೩೨

ವಾಯು ಮುಖ್ಯಾಂಶದೊಳು ಆಕಾಶ ಸಮಾನಾಂಶ
ಸೇರೆ ಸಮಾನ ವಾಯುವೆಂತೆಂದೇರ್ಪಟ್ಟಿತು
ವಾಯು ಮುಖ್ಯಾಂಶದೊಡನೆ ಅಗ್ನಿಸಮಾನಾಂಶ ಸೇರೆ
ವ್ಯಾನ ವಾಯು ಎಂತೆಂದೇರ್ಪಟ್ಟಿತು ೩೩

ವಾಯು ಮುಖ್ಯಾಂಶದೊಳು ಅಪ್ಪು ಸಮಾನಾಂಶ ಸೇರೆ
ಅಪಾನವಾಯುವೆಂತೆಂದೇರ್ಪಟ್ಟಿತು ವಾಯು

ಮುಖ್ಯಾಂಶದೊಡನೆ ಪೃಥ್ವಿಸಮಾನಾಂಶ ಸೇರಲು
ಪ್ರಾಣ ವಾಯು ಉತ್ಪನ್ನವಾಯಿತು ೩೪

ವಾಯುವಿನ ಸ್ವಯಾಂಶವೇ ಉದಾನವಾಯುವೆನಿಸಿತು
ಮುಂದೆ ವಿವರಿಸುವುದು ಜ್ಞಾನ ಪಂಚಕ ಈ ಜ್ಞಾನ
ಪಂಚಕಕ್ಕೆ ಆಕಾಶ ತತ್ವವೇ ಮುಖ್ಯಕಾರಣವೆಂದು
ಬುಧರು ಪೇಳ್ವರು ೩೫

ಆಕಾಶ ಮುಖ್ಯಾಂಶದಿ ವಾಯು ಸಮಾನಾಂಶ ಸೇರಿ
ದಾಗಲೆ ಮನಸು ಎಂಬುವುದು ಹುಟ್ಟಿತು
ಆಕಾಶ ಮುಖ್ಯಾಂಶದಿ ಅಗ್ನಿ ಸಮಾನಾಂಶ ಸೇರಿ
ದಾಗಲೆ ಬುದ್ಧಿ ಎಂಬುದು ಗೋಚರವಾಯಿತು ೩೬

ಆಕಾಶ ಮುಖ್ಯಾಂಶದೊಳು ಅಪ್ಪು ಸಮಾನಾಂಶ
ಸೇರೆ ಚಿತ್ತವೆಂಬುದು ವ್ಯಕ್ತವಾಯಿತು
ಆಕಾಶ ಮುಖ್ಯಾಂಶದೊಳು ಪೃಥ್ವಿಸಮಾನಾಂಶ
ಸೇರಿ ಅಹಂಕಾರವೆಂಬುದೇರ್ಪಟ್ಟಿತು ೩೭

ಆಕಾಶ ಸ್ವಾಂಶವೇ ಕರ್ತೃತ್ವವೆಂದೆನಿಸಿತು
ಈಪರಿಯ ತಿಳಿವುದು ಜ್ಞಾನಪಂಚಕ
ಜ್ಞಾನೇಂದ್ರಿಯ ಕರ್ಮೇಂದ್ರಿಯ ಪಂಚತನ್ಮಾ
ತ್ರಗಳಿಗೆ ಆಧ್ಯಾತ್ಮಿಕಾದಿಭೌತಿಕದೇವತೆಗಳ ತಿಳಿವುದು ೩೮

ಕಂಠದೊಳು ಪ್ರಾಣನೂ ಶ್ವಾಸೋಛ್ವಾಸಮಾಡಿಸುವ
ಅಪಾನಗುದದೊಳಿದ್ದು ಕಾರ್ಯ ಮಾಡುವ
ಅನ್ನಕಾರ್ಯ ವ್ಯಾನನು ಉದ್ಗಾರ ಮಾಳ್ಪ ಉದಾನನು
ಶಿಖಿ ನಖದಿ ದೇಹವ್ಯಾಪ್ತನಾಗಿಹ ಸಮಾನನು ೩೯

ಚತುರ್ವಿಧ ಅನ್ನಗಳನ್ನು ಭಾಗಗೈಸಿ ನಾಡಿಗಳಿಗೆ
ಸಾಗಿಸುವ ಕಾರ್ಯವು ಸಮಾನನಿಂದಲೆ

ಅನ್ನದೊಳು ರಸಾಂಶ ಸಾರ ನಿಸ್ಸಾರಾಂಶ
ವೆಂದು ರಸವು ತ್ರಿವಿಧವಾಗಿ ತೋರುತಿರ್ಪದು ೪೦

ಪ್ರಾಣಧಾರಣೆಗೆ ಅನ್ನದ ರಸಾಂಶವೇ ಮುಖ್ಯ
ಮಧ್ಯಮಾಂಶ ಮಾಂಸಕ್ಕೆ ನಿಸ್ಸಾರ ಮಲಕ್ಕೆ
ಉದಕದ ರಸಾಂಶವೇ ಮನಸ್ಸಿಗೂ ಮಧ್ಯ
ಮಾಂಶ ರಕ್ತವಾಗಿ ನಿಸ್ಸಾರಮೂತ್ರಾದಿಗೂ ೪೧

ಸರ್ಪಿ ರಸಾಂಶವೇ ಕಾಂತಿಗೂ ಮಧ್ಯಮಾಂಶ
ಮಾಂಸ ನಿಸ್ಸಾರಾಂಶ ಅಸ್ಥಿಚರ್ಮಗಳಿಗೂ
ಈರೀತಿ ರಸಸಾರ ನಿಸ್ಸಾರ ಭಾಗವು ಸ್ಥೂಲ
ದೇಹಕುಪಚಯವಾಗಿರುವುದು ೪೨

ಉಪಾಧಿ ದ್ವಾರದಿಂ ಬಂದ ಅಂತಃಕರಣಕಾರ್ಯ
ಗಳೇನೆಂದು ಚಿಂತಿಸುವುದು ಸಮಾನವಾಯು
ಬಂದು ಶ್ರೋತ್ರೇಂದ್ರಿಯ ದ್ವಾರ ಸಕಲಶಬ್ದವನ್ನೆ
ತಿಳಿದು ವಾಗೇಂದ್ರಿಯ ದ್ವಾರ ವಚನನಡೆವುದು ೪೩

ಮನಸಿನೊಡನೆ ಕೂಡಿ ಉದಾನವಾಯುವಿಗೆ ಬಂದು
ತ್ವಗೇಂದ್ರಿಯದಿಂದ ಸ್ಪರ್ಶ ತಿಳಿವುದು ಸ್ಪರ್ಶತಿಳಿ-
ದನಂತರ ಘ್ರಾಣೇಂದ್ರಿಯದ ದ್ವಾರ ಸಕಲ
ಕಾರ್ಯಗಳನ್ನೆ ಮಾಡುತಿರುವುದು ೪೪

ಬುದ್ಧಿಯೊಡನೆ ಕೂಡಿಕೊಂಡು ವ್ಯಾನವಾಯುವಿಗೆ ಬಂದು
ಚಕ್ಷುಶೇಂದ್ರಿಯದ ದ್ವಾರ ರೂಪತೋರ್ಪದು
ರೂಪತಿಳಿದ ನಂತರ ಪಾದೇಂದ್ರಿಯ ದ್ವಾರದಿಂದ
ಸಕಲಗಮನಾದಿ ನಡೆಯುತ್ತಿರುವುದು ೪೫

ಚಿತ್ತ ಸಂಗಡದಿ ಕೂಡಿ ಅಪಾನವಾಯುವಿಗೆ
ಬಂದು ಜಿಹ್ವೇಂದ್ರಿಯದ್ವಾರದಿಂದ ರಸವು ತಿಳಿ-

ವುದು ರಸವು ತಿಳಿದ ನಂತರ ಪಾಯು
ಇಂದ್ರಿಯ ದ್ವಾರ ಮಲವಿಸರ್ಜನ ೪೬

ಅಹಂಕಾರದಿ ಬಂದು ಪ್ರಾಣವಾಯುವಿನೊಡನೆ ಸೇರಿ
ಘ್ರಾಣೇಂದ್ರಿಯ ದ್ವಾರದಿಂದ ಗಂಧತಿಳಿವುದು
ಗಂಧಜ್ಞಾನದನಂತರ ಗುಹ್ಯೇಂದ್ರಿಯದ ದ್ವಾರ
ಸಂಬಂಧಾದಿ ಭೋಗವಾಗುವುದು ೪೭

ಸುಖಿಯಾಗಿ ದುಃಖಿಯಾಗಿ ಕರ್ತೃವಾಗಿ ಭೋಕ್ತನಾಗಿ
ಜಾತಿನಾಮ ವರ್ಣಾಶ್ರಮಾಚಾರದಿಂದಲಿ
ಸಾಧನಮಾಡುತಿರಲು ಸದ್ಗುರೂಪದೇಶವಾಗೆ
ಜಗದ್ಗುರು ಪ್ರಾಣನ ಕೃಪೆಯು ಆಹೋದು ೪೮

ಶ್ರವಣ ಮನನವಾಗಿ ತನ್ನ ದೇಹ ಕಾರ್ಯ
ತನ್ನದಲ್ಲವೆಂಬನುಸಂಧಾನವೇ ಮಾಡುತಿರಲು
ಭಗವದನುಗ್ರಹದಿ ತನ್ನ ಸಂಚಿತಾಗಾಮಿ
ಕ್ಷಯಿಸಿ ಪ್ರಾರಬ್ಧಭೋಗ ಮಾಡುತಲಿರುವನು ೪೯

ಪ್ರಾರಬ್ಧನಾಶದಿಂದ ದೇಹವಿಯೋಗ ಕಾಲದಲ್ಲಿ
ಸರ್ವತತ್ವಕಾರ್ಯವೆಲ್ಲ ಲಯವಾಗೋದು
ಆಕಾಶ ಅಗ್ನಿಗೂ ವಿಯೋಗಕಾಲ ಬರಲು
ಆಕಾಶತತ್ವದಲ್ಲಿ ಆಕಾಶ ಸೇರುತಿದೆ ಶ್ರೋತ್ರ ಲಯವು ೫೦

ವಾಯುವಿಗೂ ಅಗ್ನಿಗೂ ವಿಯೋಗಕಾಲ ಬರಲು
ವಾಯುತತ್ವದಲ್ಲಿ ವಾಯು ಸೇರೆ ತ್ವಗೇಂದ್ರಿಯವೆ ತಾನೇ
ಲಯವನ್ನೈದುವುದು ಅಪ್ಪುವಿಗೂ ಅಗ್ನಿಗೂ
ವಿಯೋಗಕಾಲ ಬರಲು ಅಪ್ ತತ್ವದಲ್ಲಿ ಅಪ್ ಸೇರೆ
ಜಿಹ್ವೇಂದ್ರಿಯವೆ ಲಯವನ್ನೈದಿತು ೫೧

ಪೃಥ್ವಿಗೂ ಅಗ್ನಿಗೂ ವಿಯೋಗಕಾಲ ಬರಲು
ಪೃಥ್ವಿತತ್ವದಲ್ಲಿ ಪೃಥ್ವಿಸೇರೆ ಘ್ರಾಣೇಂದ್ರಿಯವೆ

ಲಯವನ್ನೈದಿತು ಅಗ್ನಿ ಸ್ವಯಾಂಶವೆ ಚಕ್ಷುಸೇಂ-
ದ್ರಿಯವು ತನ್ನತತ್ವದಲ್ಲಿ ತಾನೆ ಲಯವನ್ನೈದಿತು ೫೨

ಆಕಾಶ ಪೃಥ್ವಿಗೂ ವಿಯೋಗಕಾಲ ಬರಲು ಆಕಾಶತತ್ವ
ಆಕಾಶದಲ್ಲಿ ಸೇರೆ ವಾಕು ಲಯವನ್ನೈದಿತು ವಾಯು-
ವಿಗೂ ಪೃಥ್ವಿಗೂ ವಿಯೋಗ ಸಮಯದಲ್ಲಿ ವಾಯು
ತತ್ವದಲ್ಲಿ ವಾಯು ಸೇರೆ ಘ್ರಾಣೇಂದ್ರಿಯವೆ ಲಯವನ್ನೈದಿತು ೫೩

ಅಗ್ನಿಗೂ ಪೃಥ್ವಿಗೂ ವಿಯೋಗಕಾಲ ಬರಲು ಅಗ್ನಿತತ್ವದಲ್ಲಿ
ಅಗ್ನಿಸೇರೆ ಪಾದಲಯವನ್ನೈದಿತು ಅಪ್‌ಗೂ ಪೃ-
ಥ್ವಿಗೂ ವಿಯೋಗಕಾಲ ಬರಲು ಅಪ್‌ತತ್ವದಲ್ಲಿ ಅಪ್‌ಸೇರೆ
ಪಾಯು ಇಂದ್ರಿಯವೆ ಲಯವನ್ನೈದಿತು ೫೪

ಪ್ರಥ್ವಿಸ್ವಯಾಂಶವೇ ಗುಹ್ಯೇಂದ್ರಿಯವು ತಾನೆ ತನ್ನ
ತತ್ವದಲ್ಲಿಲಯವನ್ನೈದಿತು ಆಕಾಶ ಅಪ್ಪಿಗೂ
ವಿಯೋಗಕಾಲ ಬರಲು ಆಕಾಶತತ್ವದಲ್ಲಿ ಆಕಾಶಸೇರೆ
ಶಬ್ದ ಲಯವನ್ನೈದಿತು ೫೫

ವಾಯುವಿಗೂ ಅಪ್ಪಿಗೂ ವಿಯೋಗಕಾಲ ಬರಲು
ವಾಯುತತ್ವದಲ್ಲಿ ವಾಯು ಸೇರೆ ಸ್ಪರ್ಶ
ಲಯವನ್ನೈದಿತು ಅಗ್ನಿಗೂ ಅಪ್ಪಿಗೂ ವಿಯೋಗಕಾಲ ಬರಲು
ಅಗ್ನಿತತ್ವ ಅಗ್ನಿಯಲ್ಲಿ ಸೇರೆ ರೂಪ ಲಯವಾಯಿತು ೫೬

ಪೃಥ್ವಿಗೂ ಅಪ್ಪಿಗೂ ವಿಯೋಗಕಾಲ ಬರಲು
ಪೃಥ್ವಿತತ್ವ ಪೃಥ್ವಿಯಲ್ಲಿ ಸೇರೆ ಗಂಧಲ-
ಯವನ್ನೈದಿತು ಅಪ್‌ಸ್ವಯಾಂಶವೇ ರಸವೆಂದೆನಿಸಿ
ತಾನೆ ತನ್ನ ತತ್ವದೊಳ್ ಲಯವನ್ನೈದಿತು ೫೭

ಆಕಾಶ ವಾಯುವಿಗೂ ವಿಯೋಗಕಾಲ ಬರಲು
ಆಕಾಶತತ್ವ ಆಕಾಶದಲ್ಲಿ ಸೇರೆ ಸಮಾನವಾಯು

ಲಯವನ್ನೈದಿತು ಅಗ್ನಿಗೂ ವಾಯುವಿಗೂ ವಿ-
ಯೋಗಕಾಲ ಬರಲು ಅಗ್ನಿತತ್ವದಲ್ಲಿ
ಅಗ್ನಿಸೇರೆ ವ್ಯಾನವಾಯು ಲಯವನ್ನೈದಿತು ೫೮

ಅಪ್ಪಿಗೂ ವಾಯುವಿಗೂ ವಿಯೋಗಕಾಲ ಬರಲು
ಅಪ್‌ತತ್ವದಲ್ಲಿ ಅಪ್ಪುಸೇರೆ ಅಪಾನವಾಯು ಲಯವನ್ನೈದಿತು
ವಾಯು ಸ್ವಯಾಂಶವೇ ಉದಾನವಾಯುವೆಂದೆನಿಸಿ ತಾನೆ
ತನ್ನತತ್ವದೊಳು ಲಯವನ್ನೈದಿತು ೫೯

ವಾಯು ಆಕಾಶಕ್ಕೂ ವಿಯೋಗಕಾಲ ಬರಲು ವಾಯುತತ್ವದಲ್ಲಿ
ವಾಯುಸೇರೆ ಮನಸು ಲಯವನ್ನೈದಿತು ಅಗ್ನಿ ಆಕಾಶಕ್ಕೂ
ವಿಯೋಗಕಾಲ ಬರಲು ಅಗ್ನಿತತ್ವ ಅಗ್ನಿಯಲ್ಲಿ ಸೇರೆ
ಬುದ್ಧಿಲಯವನ್ನೈದಿತು ೬೦

ಅಪ್ಪು ಆಕಾಶಕ್ಕೂ ವಿಯೋಗಕಾಲ ಬರಲು ಅಪ್ಪುತತ್ವ
ಅಪ್ಪುವಿನಲ್ಲಿ ಸೇರೆ ಚಿತ್ತ ಲಯವನ್ನೈದಿತು
ಪೃಥ್ವಿ ಆಕಾಶಕ್ಕೂ ವಿಯೋಗಕಾಲ ಬರಲು ಪೃಥ್ವಿತತ್ವ
ಪೃಥ್ವಿಯಲ್ಲಿ ಸೇರೆ ಅಹಂಕಾರ ಲಯವನ್ನೈದಿತು ೬೧

ಪೃಥ್ವಿಗೂ ವಾಯುವಿಗೂ ವಿಯೋಗಕಾಲ
ಬರಲು ಪೃಥ್ವಿತತ್ವದಲ್ಲಿ
ಪೃಥ್ವಿ ಸೇರೆ ಪ್ರಾಣ ಲಯವನ್ನೈದಿತು ಪೃಥ್ವಿ ಅಪ್ಪಿನಲ್ಲಿ ಲಯ
ಅಪ್ ಅಗ್ನಿಯೊಳು ಲಯ ಅಗ್ನಿ ವಾಯುವಿನಲ್ಲಿ ಲಯ
ವಾಯುಆಕಾಶದಲ್ಲಿ ಲಯವು ೬೨

ಆಕಾಶ ತಾಮಸಾಹಂಕಾರದಲ್ಲಿ ಅಲ್ಲಿಂದಹಂಕಾರದಲ್ಲಿ
ಮೂಲಅಹಂಕಾರದಿ ಮೂಲಅಹಂಕಾರವು ಮಹ-
ತತ್ವದಲ್ಲಿ ಲಯವಾಗಿ ಲಕ್ಷ್ಮೀ ಉದರದ್ವಾರಾ ಶ್ರೀ
ಹರಿಯ ಉದರವು ೬೩

ವಿಷಯವೈರಾಗ್ಯಕೆ ಹೃಷೀಕೇಶನ ದಯವು ಬೇಕು
ವಿಷಯ ಲಂಬಿಸಿಹುದೆಂದು ಕ್ಷಮೆಯ ತಾಳ್ವುದು

ಕೃಷಿಯ ಮಾಡಿ ಹಿಂದೆಬರೆದ ಪಂಚೀಕರಣ
ವಿಷಯದೊಳು ವಿಷಮಪ್ರಾಸಿದ್ದರೂ ಭೂಷಿಸುವುದು ೬೪

ಹರಿಯ ಉದಕಸೇರುವ ಪರಿಯ ಲಯವ ಚಿಂತಿಸುವಗೆ
ಪದವಿಯನೀವ ಶ್ರೀ ವೇಂಕಟೇಶನು ಸರ್ವ ತತ್ವರಂ-
ತರದಿ ಉರಗಾದ್ರಿವಾಸವಿಠಲಸ್ವಾಮಿ ಸರ್ವ
ಕಾರ್ಯಗಳೊಳಮಾಡಿ ಮಾಡಿಸುತಿರ್ಪ ೬೫

## ೮೫

ಯಜನವಾಗಲಿ ನಾನು ಭುಜಿಸುವುದು ಎಲ್ಲ ಪ

ಅಜಪಿತನೆ ಅದರ ಅನುಸಂಧಾನವನು ಅರಿಯೆ ಅ.ಪ

ದೇಹವೆಂಬುದೆ ಯಜ್ಞಶಾಲೆಯಾಗಿ
ಮಹಯಜ್ಞಕುಂಡವು ಎನ್ನ ವದನವಾಗಿ
ಆವಹನೀಯಾಗ್ನಿಯು ಮುಖದಲ್ಲಿ ಹೃದಯದೊಳು
ಗಾರ್ಹಸ್ಪತೀ ದಕ್ಷಿಣಾಗ್ನಿಯು ಸುನಾಭಿಯಲ್ಲಿ ೧

ದಕ್ಷಿಣ ಕುಕ್ಷಿಯೊಳು ಸುರಭಿ ಉತ್ತರ
ಕುಕ್ಷಿಯೊಳು ಸೋಮಾಗ್ನಿ ಅರಿ ಪಂಚಾಗ್ನಿಯೊಳು
ಆಕ್ಷಣದಿ ಪ್ರಾಣಾದಿ ಪಂಚರೂಪಗಳು ಹೋತಾಉದ್ಗಾತಾದಿ
ಋತ್ವಿಕ್ಕುಗಳಾಗಿ ನಿಂತಿಹರೆಂದು ೨

ಆಹುತಿಯ ಕೊಡತಕ್ಕ ಶೃಕಶೃಕ್‌ಶ್ರುವಗಳು ಬಾಹುಗಳು
ಇಹಭೋಜ್ಯವಸ್ತುವೆಲ್ಲ ಆಹುತಿಯು
ದೇಹಗತ ತತ್ವರು ಪರಮಾತ್ಮ ಬ್ರಾಹ್ಮಣರು
ಜೀವ ದೀಕ್ಷಿತನು ಬುದ್ಧಿತತ್ವಪತ್ನಿ ೩

ಅಹಂಮಮತಾದಿ ಅರಿಷಡ್ವರ್ಗಗಳು
ವುಹಯಜ್ಞದ ಯೂಪಸ್ಥಂಭದ ಪಶುಗಳು

ಅಹರಹ ಬಹ ನೀರಡಿಕೆಯು ಕುಡಿವನೀರೆಲ್ಲವು
ಯಜನಕಾರ್ಯದ ಮಧ್ಯ ಪರಿಷಂಚಾಮಿ ೪

ಇಷ್ಟಾದರನುಸಂಧಾನವನೆ ಕೊಡುಕಂಡ್ಯ
ಶ್ರೇಷ್ಠಮೂರುತಿ ಶ್ರೀ ವೇಂಕಟೇಶ
ನಿಷ್ಠೆಯೆನ್ನೊಳಗಿಲ್ಲ ಉರಗಾದ್ರಿವಾಸವಿಠಲ
ಹೊಟ್ಟೆಹೊರೆವುದು ನಿನಗೆ ತುಷ್ಟವಾಗಲಿ ದೇವ ೫

## ೮೬

ಸತ್ಯಸಂಕಲ್ಪ ತ್ವಚಿತ್ತಾನುಸಾರ ತ್ವ
ಚಿತ್ತ ವೃತ್ತಿಯು ನಿನಗೆ ಸರ್ವತ್ರದಿ ಪ

ಉತ್ತಮೋತ್ತಮ ನೀನೆಗತಿ ಎಂ-
ದೆತ್ತಿ ಶೃತಿ ಸ್ಮೃತಿ ಸಾರುತಿಹುದು
ಉತ್ತರಿಸು ಭವಶರಧಿಯಲಿ
ಎತ್ತಿ ಕಡೆಹಾಯಿಸುವುದೀಗಲೆ ಅ.ಪ

ಜಗದಾಖ್ಯವೃಕ್ಷಕ್ಕೆ ಆದಿಕಾರಣನಾಗಿ
ಜಗದೇಕವಂದ್ಯ ನೀನಾಧಾರನೋ
ಜಗತರುವಿಗೆ ಸತ್ವರಜತಮವೆಂಬೀ ಗುಣತ್ರಯಗಳು
ಪ್ರಮುಖ ಬೇರುಗಳು
ತ್ವಗಾದಿ ಜ್ಞಾನೇಂದ್ರಿಯಗಳೆಂಬೀ ಐದು ಬಿಳಲುಗಳೂ
ಬಗೆ ಬಗೆ ಜರೆಹುಟ್ಟು ಮರಣ ವೃದ್ಧಿ ಹ್ರಾಸಾದಿ
ಷಡೂರ್ಮಿಗಳೂ
ಬಿಗಿದಿಹವು ಮೇಧ ಮಜ್ಜಾದಿ ಸಪ್ತಧಾತುಗಳೆಲ್ಲ
ಹೊದಿಕೆಗಳು ಪಂ
ಟೆಗಳು ಎಂಟು ಆಗಸಾದಿ ಭೂತಪಂಚಕ ಬುದ್ಧಿ
ಮನ ಅಹಂಕಾರವೆಂದು
ಆಗಿಹುದು ನೇತ್ರಶ್ರೋತ್ರಾದಿಗಳಾದಿ ನವಗೋಳಕಗಳೇ
ಪೊಟ್ಟರೆಗಳು ೧

ಪ್ರಾಣಾಪಾನ ವ್ಯಾನೋದಾನ ಸಮಾನವೆಂಬೀ
ಪ್ರಾಣಾದಿಪಂಚಕವು
ಪ್ರಾಣನಿಗೆ ಉಪಪ್ರಾಣನಾಗಿಹ ನಾಗ ಕೂರ್ಮ
ಕೃಕಳಾದಿ ಪಂಚವಾಯುಗಳು
ಪರ್ಣಗಳು ಹತ್ತೆನಿಸಿ ವೃಕ್ಷಕೆ ದುಃಖ ಸುಖವೆಂಬೆರಡು
ಹಣ್ಣುಗಳು ಹಣ್ಣಿನೊಳು ಧರ್ಮಾರ್ಥ ಕಾಮ
ಮೋಕ್ಷಗಳೆಂಬೊ ರಸಗಳು
ಕಾಣುತಿದೆ ವೃಕ್ಷದಿ ಜೀವಪರಮಾತ್ಮರೆಂಬೆರಡು
ಪಕ್ಷಿಗಳು ವಿಹರಿಸುತಲಿಹವು
ತ್ರಾಣವಿಲ್ಲದೆ ಜೀವಖಗವು ಉಣಘತಲಿರುವುದು
ಕರ್ಮಫಲವನು
ಪ್ರಾಣಪತಿಯನು ಕಾಣದಾತನು ಪೂರ್ಣಕರುಣಾ
ಕಟಾಕ್ಷವಿಲ್ಲದೆ ೨

ಅಡಿ ಮೇಲಾಗಿಹ ಗಿಡದೊಡೆಯ ನೀ ಗಿಡದೊಳು
ಕಡೆ ಮೊದಲು ಬಿಡದೆ ನೀ ವ್ಯಾಪಿಸಿಹೆ
ಅಡಿಗಡಿಗೆ ಜೀವರೊಡಗೂಡಿ ಬಂದವರನು
ಗಿಡದ ಗೂಡಲು ಅಡಗಿಸಿರುವೆಯೋ
ನಿನ್ನೊಡಗೂಡಿ ಒಂದೇ-
ಕಡೆಯಾಡುತಿಹ ಬಡಜೀವಿ ನಾನಯ್ಯ
ಪಡೆದ ಫಲವದು ಬೆಂಬಿಡದೆ ಭೋಗಕೆ ಬರುತಲಿಹುದಯ್ಯ
ದೃಢಮನದಿ ಅದನು ಬಿಡಲು ಯೋಚಿಸೆ
ಬಡಿದು ಉಣಿಸುವೆಯೊ
ಬಿಡದಿರುವೆ ಎನ್ನೊಡೆಯಾ ಒಡೆಯ ನಿನ್ನೆದುರಿನಲಿ ನಾ
ಬಿಡದೆ ನಿನ್ನ ನೆಳಲಿನಂತಿಹೆ ಜಡಮತಿಯ
ಪರಿಹರಿಸಿ ರಕ್ಷಿಸೊ
ಮೃಡನುತ ಶ್ರೀ ವೇಂಕಟೇಶಾ ೩

## ೮೭

ಸಪ್ತಕೋಟಿ ಮಹಾಮಂತ್ರಾರ್ಥ ಹೃದಯಾಬ್ಜ
ಚಕ್ರಮಂಡಲದೊಳು ಪ್ರತಿಪಾದ್ಯ ಪ

ಹೃದಯಾಬ್ಜ ಮಿತ್ರ ಘೃಣೀ ಎಂದು ಸ್ತೋತ್ರ
ತ್ರಿಕೋಣದೊಳು ಹ್ರೀಂ ಶ್ರೀಂ ಕ್ಲೀಂ ಮಾತ್ರ
ಮುದದಿಂದ ಜ್ಞಾನೇಛ್ಛಾ ಕ್ರಿಯಾ ಶಕ್ತಿ ತ್ರಯಗಳು
ತದಭಿಮಾನಿಗಳ ನೆನೆದುದಳದಿ ಸೂರ್ಯ
ಸೋಮಾಗ್ನಿಗಳ್ಮೇಲೆ ಕರಿ ಅಜ ರಥ ವೀಥಿಗಳಧಕರಿಸಿ
ಅದರ ಮೇಲೊಂದು ಮಂಡಲ ನಿರ್ಮಿಸಿ ಷಟ್ಸರೋ-
ಜದಳಗಳನೆ ರಚಿಸಿ ಇದರೋಳು ಪೂರ್ಣ ಜ್ಞಾನೈಶ್ವರ್ಯ
ಪ್ರಭಾನಂದ ತೇಜ ಸತ್ಯಮೂರ್ತಿಗಳ್ಚಿಂತಿಸೀ
ವತ್ಸರ ಋತು ಮಾಸ ತಾರಾರಾಶಿಗಳ ಗುಣಿಸಿ
ಬದಿಯಲಿ ಏಕಾ ಪಂಚಾಶದ್ವರ್ಣ ತಿಳಿಯೋದಿದು ವ್ಯಾಪ್ತಿ ೧

ಮೇಲೊಂದು ಮಂಡಲದ ಅಷ್ಟದಳಗಳಲಿ
ಅಷ್ಟ ಬೀಜಾಕ್ಷರಗಳನೆ ರಚಿಸೀ ಶನಿ ರಾಹು ಗುರು
ಬುಧ ಶುಕ್ರ ಸೋಮ ಮಂಗಳ ಕೇತುಗಳ ನಿರ್ಮಿಸಿ
ವಲಯದಿ ಪ್ರಣವದಷ್ಟಕ್ಷರಗಳ ನಿರ್ಮಿಸಿ
ವಿಶ್ವಾದ್ಯಷ್ಟರೂಪನನೆ ಚಿಂತಿಸಿ ಅದರಿಂದಭಿವ್ಯಕ್ತ
ವರ್ಣಗಳ್‌ಭಜಿಸೀ ವರ್ಗಕೆ ತತ್ವತನ್ಮಾನಿಗಳನೆ ಚಿಂತಿಸಿ
ಅಷ್ಟಾಕ್ಷರಾತ್ಮಕನ ದೃಢಮನಸಿನಿಂದ ಸ್ತುತಿಸಿ
ಕಾಲ ಅಧಿಕಾರಭೇದದಿಂದುಪಾಸನ ಯೋಗ್ಯತೆಯಂತೆ
ಇದು ವ್ಯಾಪ್ತಿ ೨

ಮೇಲೊಂದು ಮಂಡಲ ದ್ವಾದಶದಳದೊಳ್
ದ್ವಾದಶ ಬೀಜಾಕ್ಷರ ಕೇಶವಾದಿ ದ್ವಾದಶನಾಮ
ವರ್ಣವಿಭಾಗವು ರಾಶಿಗಳ ವಿವರ ವಲಯದಿ
ತಾರಾಯೋಗಗಳ್ವಿಸ್ತಾರ ಮೇಲ್ಮಂಡಲದೊಳು
ಚತುರ್ವಿಂಶತಿ ಬೀಜಾಕ್ಷರ ಕೇಶವಾಗಿನಾಮ

ತಾರೆರಾಶಿಗಳೆಣಿಸೀ ಮೇಲೆ ಐವತ್ತೊಂದು
ಅಜಾದಿಗಳ ಚಿಂತಿಸಿ ಅಲ್ಲಿಹ ಶ್ರೀ ವೇಂಕಟೇಶಾತ್ಮಕ
ಶ್ರೀ ಉರಗಾದ್ರಿವಾಸವಿಠಲ ೩

## ೮೮

## ಪ್ರಮೇಯ ಪ್ರಕರಣ

ಸುವ್ವಿ ಸುವ್ವಿ ಉರಗಾದ್ರಿವಾಸ ಶ್ರೀ ವೆಂಕಟೇಶ ಸುವ್ವಿ
ಶ್ರೀ ಸಚ್ಚಿದಾನಂದಾತ್ಮಕಾನೆ ಸುವ್ವಿ ಪ

ಮೂಲನಾರಾಯಣ ಮೂಲಪ್ರಕೃತಿಯನ್ನು
ಮೂರುಭಾಗಗೈಸಿ ಸೃಷ್ಟಿಮಾಡಿದನೆ ಸುವ್ವಿ
ಸೃಷ್ಟಿಯೊಳು ಗುಣವ್ಯಷ್ಟಿಸಮಷ್ಟಿಯಿಂದ
ಸೃಷ್ಟಿಸಿದ ಜಗಸಂಸೃಷ್ಟನೆನಿಸಿದಸುವ್ವಿ ೧

ಸತ್ವರಜತಮ ಸಂಯುಕ್ತದಿಂದ ಕರ್ಮ
ಮುಕ್ತಿ ಪರ್ಯಂತ ಜನ್ಮಕರ್ಮಂಗಳು ಸುವ್ವಿ
ಕರ್ಮಂಗಳು ಸವೆದು ಉತ್ಕ್ರಾಂತ ಮಾರ್ಗ ಪಿಡಿದು
ತಮ್ಮ ಸ್ವರೂಪ ಕರ್ಮನೆಸಗುವರೋ ಸುವ್ವಿ ೨

ಮಹದಹಂಕಾರದಿಂದ ವೈಕಾರಿಕದಿಂದ ವ್ಯಸ್ತ-
ರಾದರು ತತ್ವದೇವತೆಗಳು ಸುವ್ವಿ
ದೇವತೆಗಳಾದರು ಮೇಲೆ ರಾಜಸಾಹಂಕಾರದಿಂದ
ಇಂದ್ರಿಯಾದಿಗಳೆಲ್ಲ ಸೃಷ್ಟಿಯಾದವು ಸುವ್ವಿ ೩

ಭೂತಪಂಚಕವು ತನ್ಮಾತ್ರಪಂಚಕಗಳು ತಾಮ-
ಸಾಹಂಕಾರಗಳುದಿಸಿದವೆನ್ನು ಸುವ್ವಿ
ಉದಿಸಿದಹಂಕಾರತ್ರಯದೊಳು ಬಂದು ಸರ್ವಸೃಷ್ಟಿ
ಅದುಭುತವಾದುದು ಅನಿರುದ್ಧನಿಂದ ಸುವ್ವಿ ೪

ಎಲ್ಲಜೀವರು ಮುನ್ನಾಸೃಷ್ಟಿಗೆ ಬಾರದಿರೆ
ಇನ್ನು ಸುಪ್ತಾವಸ್ಥೆಯಲ್ಲಿ ಸುಮ್ಮನಿರ್ಪರೋ ಸುವ್ವಿ
ಸುಮ್ಮನಿಪ್ಪ ಸರ್ವಜೀವರ ಗುಣಸಾಮ್ಯದಿ ಅವರ
ಸೃಷ್ಟಿಗೆ ತಂದ ಗುಣವೈಷಮ್ಯದಿಂದಲೀ ಸುವ್ವಿ ೫

ಭೇದಪಂಚಕವು ನಿತ್ಯತಾರತಮ್ಯ ಸತ್ಯ ವಿಧಿ
ಮೊದಲು ತೃಣಾಂತ ಜೀವರು ತ್ರಿವಿಧವು ಸುವ್ವಿ
ತ್ರಿವಿಧಜೀವರು ನಿತ್ಯ ತ್ರಿವಿಧಕಾರ್ಯ ಅರಿತು
ತ್ರಿವಿಧಸಾಧನದಂತೆ ತ್ರಿವಿಧಗತಿಯು ಸುವ್ವಿ ೬

ಜೀವರು ಅನಾದಿಯು ಸಾವು ನೋವುಗಳಿಲ್ಲ ಆ-
ವಾವಸ್ಥೆಗಳೆಲ್ಲ ಸ್ಥೂಲ ದೇಹಕೆ ಸುವ್ವಿ
ಸ್ಥೂಲದೇಹವ ಧರಿಸಿ ಪೂರ್ವಕರ್ಮದಂತೆ ಸಾಧನದಿಂ-
ದಲೆ ಕರ್ಮಕ್ಷಯವಹುದು ಸುವ್ವಿ ೭

ವೃದ್ಧಿಹ್ರಾಸಗಳಿಲ್ಲ ಶುದ್ದ ಜೀವಸ್ವರೂಪ
ವಿಧಿಮೊದಲು ತೃಣಾಂತ ಪರಿಮಿತಿ ಒಂದೆ ಸುವ್ವಿ
ಪರಿಮಿತಿ ಒಂದೇ ರೀತಿ ಗುಣಕ್ರಿಯ ವಿವಿಧರೀತಿ ಅ-
ದರಂತೆ ಜಡ ಪ್ರಕೃತಿ ಕಾರ್ಯವು ಪರಿಪರಿ ಇಹುದು ಸುವ್ವಿ ೮

ಸರ್ವಸ್ವತಂತ್ರನು ದೇವ ಅಸ್ವತಂತ್ರನು ಜೀವ
ಸರ್ವತ್ರ ಹರಿವ್ಯಾಪ್ತನಿರ್ಲಿಪ್ತನು ಸುವ್ವಿ
ನಿರ್ಲಿಪ್ತನು ಅನಂತಾನಂತಗುಣಗಣಪೂರ್ಣ ಅವ್ಯಯ
ಅಪ್ರಮೇಯ ಅಚ್ಯುತಾನಂತ ಸುವ್ವಿ ೯

ಅನಂತಾನಂತರೂಪಾನಂತ ಚೇತನ ಜಡದಿ
ಅಂತರಾತ್ಮ ತಾ ನಿರಂತರ ನಿಂತಿಹ ಸುವ್ವಿ
ನಿಂತು ತದಾಕಾರದಿ ತದ್ಭಿನ್ನ ತನ್ನಾಮದಲಿ
ಕಂತುಪಿತನು ತಾ ನಿಂತಿಹನೆನ್ನು ಸುವ್ವಿ ೧೦

ಇಂಥಾಜೀವರಿಗೆ ಲಿಂಗದೇಹ ಅನಾದಿಯಲ್ಲಿದ್ದು
ಜ್ಯೋತಿರ್ಮಯವಾಗಿ ಪ್ರಕಾಶಿಸುವುದು ಸುವ್ವಿ

ಪ್ರಕಾಶದ ಜೀವಕ್ಕೆ ಗಜ್ಜಗಬೀಜದಂತೆ ತ್ರಿಗುಣಾ
ವರ್ಣವು ಲಿಂಗಕ್ಕಾವರ್ಣವು ಸುವ್ವಿ ೧೧

ಗುಣಬದ್ಧನಾದುದರಿಂದ ಗುಣಕಾರ್ಯ ಫಲಗಳಿಂದೆ ಶೀ
ತೋಷ್ಣಸುಖದುಃಖಾನುಭವವಾಗುವುದೆನ್ನು ಸುವ್ವಿ
ಅನುಭವದಭಿಮಾನ ಸಾಧನದಂತೆ ಜೀವಾ ಜೀವ
ಜನುಮಜನುಮಾಂತರದ ವಾಸನವಿಹುದು ಸುವ್ವಿ ೧೨

ಸತ್ವಜೀವರ ಲಿಂಗಕ್ಕೆ ಸತ್ವಾವರಣವೇ ಪ್ರಥಮ
ದ್ವಿತೀಯಾವರಣವೆ ರಜ ತೃತೀಯ ತಮವೆನ್ನು ಸುವ್ವಿ
ತಮೋ ಆವರಣವೆ ಪ್ರಥಮ ರಜ ಸತ್ವವು
ತದುಪರಿ ತ್ರಿವಿಧಾವರ್ಣವು ತಮೋಜೀವರಿಗಿಹುದು ಸುವ್ವಿ ೧೩

ರಜೋ ಜೀವರಿಗೆ ರಜವು ಪ್ರಥಮಾವರಣದಿ
ಇಹುದು ತಮಸತ್ವಾವರಣಾನಂತರವಿಹುದು ಸುವ್ವಿ
ತಮರಜಸತ್ವಾವರಣತ್ರಯಗಳು ಲಿಂಗಕ್ಕೆ ನಿತ್ಯ
ಇರಲು ತ್ರಿವಿಧಬದ್ದರಾಗಿ ಸುತ್ತುತಿಪ್ಪರು ಸುವ್ವಿ ೧೪

ಸತ್ವಾವರ್ಣದಿ ವಿಶ್ವರಜತಮ ತೈಜಸ ಪ್ರಾಜ್ಞ
ನಿತ್ಯದಿ ಜೀವನವಸ್ಥಾ ತೋರಿಸುವರು ಸುವ್ವಿ
ತೋರಿಸುವರು ಜೀವರ ಜಾಗ್ರಸ್ವಪ್ನಾ ವಸ್ಥೆಯೊಳು
ಶ್ರೀಭೂದುರ್ಗಾ ಲಿಂಗಕಭಿಮಾನಿಗಳುಸುವ್ವಿ ೧೫

ಸತಿಸಹಿತರಾಗಿ ಬ್ರಹ್ಮವಾಯು ಬಿಡದೆ ನಿತ್ಯ
ಭಕ್ತಿಯಿಂದ ಹರಿಯಾರಾಧಿಸುವರೋ ಸುವ್ವಿ
ನಿತ್ಯಭಕ್ತಿಯಿಂದ ಸ್ತುತಿಯ ಮಾಡಿ ಜಗ–
ಕತೃವಿನಾಜ್ಞೆಯಿಂ ತೃಪ್ತರಾಗೋರೋ ಸುವ್ವಿ ೧೬

ಜ್ಞಾನ ಕರ್ಮೇಂದ್ರಿಯ ಭೂತಪಂಚಕಗಳು
ಮನಸು ಎಂದು ಇನಿತು ಕೂಡಿ ಷೋಡಶಕಳೆಗಳು ಲಿಂಗಕ್ಕೆ ಸುವ್ವಿ

ಷೋಡಶಕಳೆಗಳಿಂದ ಕೂಡಿ ಲಿಂಗವು ಇಹದು
ಕಳೆಗಳಲ್ಲಿನ ಭಗವದ್ರೂಪವ ತಿಳಿಯೋ ಸುವ್ವಿ ೧೭

ಮನಸಿಗೆ ಶ್ರವಣಕೆ ಶ್ರೀ ಕೇಶವನಾರಾಯಣ ತ್ವ-
ಕ್‌ನೇತ್ರಕೆ ಮಾಧವ ಗೋವಿಂದನೆ ಸುವ್ವಿ
ಗೋವಿಂದನು ನೇತ್ರಕೆ ಜಿಪ್ವೆ ಘ್ರಾಣದಿ
ವಿಷ್ಣುಮಧುಸೂದನ ತ್ರಿವಿಕ್ರಮನೆನ್ನು ಸುವ್ವಿ ೧೮

ಹಸ್ತ ಪಾದಕ್ಕೆಲ್ಲ ವಾಮನ ಶ್ರೀಧರ ಗುಹ್ಯಕ್ಕೆ
ಹೃಷೀಕೇಶ ಮೂರುತಿ ಇಹರೋ ಸುವ್ವಿ
ಮೂರುತಿ ಇಹರೋ ಮತ್ತೆ ಗುದದೊಳು ಪದ್ಮನಾಭ
ಮುದದಿಂದ ಜ್ಞಾನ ಕರ್ಮೇಂದ್ರಿಯದಲ್ಲಿ ಸುವ್ವಿ ೧೯

ಶಬ್ದದೊಳು ದಾಮೋದರ ಸ್ಪರ್ಶದಿ ಸಂಕರ್ಷಣನು
ರೂಪದೊಳು ವಾಸುದೇವ ಮೂರುತಿ ಇಹರೋ ಸುವ್ವಿ
ರೂಪಗಳಲಿ ತಿಳಿಯೊ ಪ್ರದ್ಯುಮ್ನ ಅನಿರುದ್ಧಾನು
ರೂಪಸುಗಂಧಗಳಲಿ ಈರೂಪಗಳಹವೋ ಸುವ್ವಿ ೨೦

ಷೋಡಶ ಕಳೆಗಳಲ್ಲಿ ಅಭಿಮಾನಿಗಳಂತರದಲ್ಲಿ ನೀ
ಬಿಡದೆ ನೆನೆಸು ಈ ಭಗವದ್ರೂಪಗಳಲ್ಲಿ ಸುವ್ವಿ
ಭಗವದ್ರೂಪಗಳಲಿ ಧೃಡಭಕುತಿಯಿಂದಲಿ
ಎಡೆಬಿಡದೆ ನಡೆನುಡಿಗಳಲ್ಲಿ ಸುವ್ವಿ ೨೧

ಆಚ್ಛಾದಿಕವು ಜೀವರಿಗೆ ಎರಡುಂಟು ನಿತ್ಯದಲ್ಲಿ
ಜೀವನ ಮರೆಯಮಾಡಿದ ಜೀವಾಚ್ಛಾದಿಕ ಸುವ್ವಿ
ಜೀವಾಚ್ಛಾದಿಕ ಇದೆ ಹರಿಚ್ಛಾಬಂದಕಾಲದಿ
ಬಿಚ್ಚಿ ಹೋಗುವುದು ನಿಶ್ಚಯ ಕೇಳೋ ಸುವ್ವಿ ೨೨

ಪರಮಾಚ್ಛಾದಿಕವೆಂಬುದು ನಿರುತವು ತಪ್ಪಿದ್ದಲ್ಲ
ಹರಿಇಚ್ಛಾ ಇಂಥಾದ್ದೆ ಇಂಥಾದ್ದೆನ್ನು ಸುವ್ವಿ
ಇಂತಿದ್ದರು ಹರಿಯು ಒಮ್ಮೆ ಇಚ್ಛೆಮಾಡಿದರೆ ಒಮ್ಮೆ
ಒಮ್ಮೆ ತೋರಿದರೆ ಒಮ್ಮೆ ತೋರದಿಹನೋ ಸುವ್ವಿ ೨೩

ಲಿಂಗದೇಹಕ್ಕೆ ತಮ ಮೋಹ ಮಹಮೋಹ ತಾಮಿಶ್ರ
ಅಂಧತಾಮಿಶ್ರವೆನ್ನು ಸುವ್ವಿ
ತಾಮಿಶ್ರದಿ ಪಂಚ ನರಕಂಗಳಲ್ಲಿರ್ಪ ಕೃದ್ದೋಲ್ಕಾದಿ
ಪಂಚಭಗವದ್ರೂಪವಿಹುದೋ ಸುವ್ವಿ ೨೪

ದೈತ್ಯರಿಗವಕಾಶ ಲಿಂಗದೊಳೆಂದಿಗಿಲ್ಲ
ದೈತ್ಯಾರಿಜನಾರ್ದನ ಹರಿ ಅಲ್ಲೆ ಇಹನು ಸುವ್ವಿ
ದೈತ್ಯಾರಿ ಜನಾರ್ದನನು ಲಿಂಗವ ರಕ್ಷಿಸುತ್ತ
ನಿತ್ಯನಿರ್ಲಿಪ್ತನಾಗಿ ನಿಂತಿಹನೋ ಸುವ್ವಿ ೨೫

ವಿಧಿಮೊದಲು ತೃಣಾದಿ ಜೀವರ ಲಿಂಗದಲಿ
ದಗ್ಧಪಟದ ತೆರದಿ ವಿಧಿಗೆ ಲಿಂಗವು ಸುವ್ವಿ
ವಿಧಿಗಿಹ ಲಿಂಗದ ಕಾರ್ಯ ಹರಿಯ ಪ್ರೀತ್ಯರ್ಥವು
ಲಿಂಗಗುಣದ ಕಾರ್ಯವೆಂದಿಗಿಲ್ಲವೋ ಸುವ್ವಿ ೨೬

ಲಿಂಗದೇಹಕೆ ಮುಂದೆ ಅನಿರುದ್ಧದೇಹವು
ಅಂಗಿಯ ತೊಟ್ಟಂತೆ ಸಂಗಮಾದುದು ಸುವ್ವಿ
ಅದರಿಂದ ಅನಿರುದ್ಧದೇಹ ಇಹುದು ಸಪ್ತಾವರಣ
ಆವರಣಗಳಲ್ಲಿ ವಿವರಣೆ ತಿಳಿಯೋ ಸುವ್ವಿ ೨೭

ಅನಿರುದ್ಧ ಪ್ರದ್ಯುಮ್ನ ಆವರಣಗಳೆರಡು
ಸಂಕರ್ಷಣ ವಾಸುದೇವ ನಾರಾಯಣ ಸುವ್ವಿ
ಒಂದೊಂದೆ ಇನಿತು ಅವರಣ ಸಪ್ತಾದಲ್ಲಿರುವ
ಸರ್ವತತ್ತ್ವ ವ್ಯಕ್ತವಾದವು ನೀ ಮತ್ತೆ ತಿಳಿಯೋದು ಸುವ್ವಿ ೨೮

ಮಹತ್ತತ್ವ ತಿಳಿ ಶ್ರೀ ವಾಸುದೇವಾವರಣದಿ
ನಾರಾಯಣಾವರಣದಿ ಅವ್ಯಕ್ತ ತತ್ವವು ಸುವ್ವಿ
ಅವ್ಯಕ್ತ ತತ್ವಾದಿಚತುರ್ವಿಂಶತಿ ತತ್ವದಲಿ
ಕೇಶವಾದಿ ಚತುರ್ವಿಂಶತಿ ರೂಪವಿಹುದು ಸುವ್ವಿ ೨೯

ತತ್ವಂಗಳಲಿ ತತ್ತದಭಿಮಾನಿಗಳಂತರದಿ
ನಿತ್ಯ ಹರಿಯು ತನ್ನ ಸತಿಯರಿಂದಲಿ ಸುವ್ವಿ

ಸತಿಯರಿಂದಲಿ ಕೂಡಿ ಕೃತ್ಯವ ನಡೆಸಿ ಅಭಿ
ವ್ಯಕ್ತಮಾಡಿಸುತ್ತಿರುವನು ಹರಿ ಸತ್ಯವೆನುಸುವ್ವಿ ೩೦

ಹೃದಯದೊಳಿರುತಿರ್ಪ ಅನಿರುದ್ಧದೇಹದೊಳು
ಮುದದಿಂದ ದೈತ್ಯದಾನವಾದಿಗಳಿರುವರು ಸುವ್ವಿ
ದೈತ್ಯರೆಲ್ಲರು ಪಾಪಕಾರ್ಯಗಳ ಮಾಳ್ಪರು
ಪುಣ್ಯಕಾರ್ಯಗಳೆಲ್ಲ ಸುರರಿಂದಾಹುದು ಸುವ್ವಿ ೩೧

ಲಿಂಗದೇಹದ ರಕ್ಷಣೆ ಅನಿರುದ್ಧದೇಹವು
ಲಿಂಗದೇಹದ ಸಂಗಡ ಭಂಗವಿರುವುದು ಸುವ್ವಿ
ಭಂಗವಾಗಲು ವಿಷಯ ಸಂಗರಹಿತನಾಗು
ರಂಗ ಅಂತರದಿ ತಿಳಿಯಗೊಡುವನು ಸುವ್ವಿ ೩೨

ಜೀವಪ್ರಕಾಶವು ಲಿಂಗಾನಿರುದ್ಧದೊಳು
ಷೋಡಶಕಳೆಗಳಿಂದ ವ್ಯಾಪಿಸಿಹುದು ಸುವ್ವಿ
ವ್ಯಾಪಿಸಿಹುದು ಮುಂದೆ ಸ್ಥೂಲದೇಹವು ಒಂದು
ಸ್ಥೂಲಜಡದೇಹದ ಕಾರ್ಯ ಅಭಿವ್ಯಕ್ತವಾಹುದು ಸುವ್ವಿ ೩೩

ಸ್ಥೂಲ ದೇಹದೊಳು ಸುಷುಮ್ನಾಧಾರ ಹಿಡಿದು
ಸಪ್ತಕಮಲಗಳಲ್ಲುಂಟು ತಿಳಿಯೋ ಸುವ್ವಿ
ಸಪ್ತಕಮಲದಿ ಮೊದಲು ಮೂಲಾಧಾರದಿ ನಾಲ್ಕು
ದಳ ಕಮಲ ಹವಳವರ್ಣವಿದೆ ಭೂಲೋಕವೆನ್ನು ಸುವ್ವಿ ೩೪

ನೀಲ ವರ್ಣದ ಆರುದಳ ಕಮಲ ನಾಭಿಯಲ್ಲಿ
ವಾಯುಮಂಡಲವಿದೆ ಭುವರ್ಲೋಕವು ಸುವ್ವಿ
ಭುವರ್ಲೋಕ ಇಲ್ಲಿ ವಾಯುಬೀಜಾಕ್ಷರದಲ್ಲಿ
ಪಾಪಪುರುಷನ ಶೋಷಿಸಲು ಜಪಿಸು ನಿತ್ಯ ಸುವ್ವಿ ೩೫

ಹೃದಯಕಮಲದಿ ಎಂಟುದಳ ಉಂಟು ರವಿಭಾ
ಸತ್ರಿಕೋಣ ಅಗ್ನಿಮಂಡಲವಿಹುದಿಲ್ಲಿ ಸುವ್ವಿ
ಇಹುದು ಸುವರ್ಲೋಕ ಇಲ್ಲಿ ಅಗ್ನಿ ಬೀಜಾಕ್ಷರ
ದಿಂದ ಪಾಪಪುರುಷನ ದಹಿಸೆ ಜಪಿಸು ನಿತ್ಯ ಸುವ್ವಿ ೩೬

ಹೃದಯಕಮಲದ ಮಧ್ಯ ಕರ್ಣಿಕಮಧ್ಯದಲ್ಲಿ
ಮೂಲೇಶನಿಪ್ಪ ಸ್ಥೂಲಾಂಗುಷ್ಟ ಮೂರುತಿ ಸುವ್ವಿ
ಮೂರುತಿ ಮೂಲೇಶನ ಪಾದಮೂಲದಲ್ಲಿಪ್ಪ
ಪ್ರಾಣನ ಪಾದಮೂಲದಿ ಅನಿರುದ್ಧ ದೇಹವೇ ಸುವ್ವಿ ೩೭

ಈ ಪವನ ದೇವ ನಿತ್ಯ ಜಪಿಸುವ ಹಂಸಮಂತ್ರ
ಇಪ್ಪತ್ತೊಂದು ಸಾವಿರದಾರುನೂರು ಸುವ್ವಿ
ಆರುನೂರು ಜಪ ಮೂರು ಮೂರು ವಿಧಜೀವರೊಳು
ಮೂರು ವಿಧ ನಡೆಸಿ ಮೂರ್ಗತಿ ನೀಡುವ ಸುವ್ವಿ ೩೮

ಅಷ್ಟದಳಗಳ ಮೇಲೆ ಅಷ್ಟಭುಜನಾರಾಯಣ
ನಿಷ್ಟೆಯಿಂದಲಿ ಚರಿಸಿ ಜೀವರಿಷ್ಟವ ತೋರುವ ಸುವ್ವಿ
ಜೀವರಿಷ್ಟದೊಳು ಪೂರ್ವದಳದಲಿ ಪುಣ್ಯ
ನಿದ್ರಾಲಸ್ಯವು ಶ್ರೀ ಆಗ್ನೇಯ ದಳದಲಿ ಸುವ್ವಿ ೩೯

ಆಗ್ನೇಯದಳದ ಮುಂದೆ ಯಮದಿಕ್ಕಿನಲ್ಲಿ
ಕ್ರೂರ ಬುದ್ಧಿಯು ಜೀವಗಾಗುವುದೆನ್ನು ಸುವ್ವಿ
ನೈಋತ್ಯ ದಳದಲ್ಲಿ ಪಾಪ ಬುದ್ಧಿಯನೆಸಗುವ ಜೀವ
ನಿರುತ ದಳದಲ್ಲಿ ಸಂಚರಿಸುವ ಸುವ್ವಿ ೪೦

ವರುಣದಳದಲ್ಲಿ ಬರೆ ಕ್ರೀಡಾಬುದ್ಧಿಯನೀವ
ವಾಯುವ್ಯದಲ್ಲಿ ಗಮನಾಗಮನವು ಸುವ್ವಿ
ಗಮನಾಗಮನದಿಮೇಲೆ ರತಿಬುದ್ಧಿಯ
ಉತ್ತರದಲಿ ದಾನಬುದ್ಧಿಯು ಈಶಾನ್ಯದಲಿ ಸುವ್ವಿ ೪೧

ಮಧ್ಯಕೆ ಬರಲು ವೈರಾಗ್ಯವೆಸಿದ್ಧ ಕೇಶರಕೆ
ಬರಲು ಸ್ವಪ್ನಾವಸ್ಥೆಯು ಸುವ್ವಿ
ಸ್ವಪ್ನಾನಂತರದಿ ಕರ್ಣಿಕೆಯಲ್ಲಿ ಜಾಗ್ರತಿಯು
ಮಧ್ಯದೊಳು ಸುಷುಪ್ತಾವಸ್ಥೆಯು ಸುವ್ವಿ ೪೨

ಉರದಲ್ಲಿ ಮುತ್ತಿನವರ್ಣ ಎರಡಾರುದಳಕಮಲದಿ
ವಿರುಪಾಕ್ಷನಭಿಮಾನಿ ನರಸಿಂಹನ ಪೂಜಿಪ ಸುವ್ವಿ
ನರಸಿಂಹನ ಪೂಜಿಪ ಈ ಲೋಕ ಮಹರ್ಲೋಕ
ದ್ವಾದಶದಳದಿ ಕಲಾಭಿಮಾನಿಗಳಿಹರು ಸುವ್ವಿ ೪೩

ಕಂಠದಲಿ ಎರಡೆಂಟರಷ್ಟದಳಕಮಲ
ಉಂಟು ಕಮಲ ರಕ್ತವರ್ಣ ಜನಲೋಕವು ಸುವ್ವಿ
ಜನಲೋಕದಲಿ ಶೇಷ ಸಂಕರ್ಷಣ ಮೂರ್ತಿಯನು
ನಿತ್ಯ ಸ್ತುತಿಸುತ ತಾ ಭೃತ್ಯನಾಗಿಹನೊ ಸುವ್ವಿ ೪೪

ಭ್ರೂಮಧ್ಯ ದ್ವಿದಳಕಮಲ ಉಂಟೊಂದಿಲ್ಲಿ
ತಾ ಮಧುಪುಷ್ಪದಂತೆ ಪೊಳೆಯುತ್ತಿಹುದು ಸುವ್ವಿ
ಮಧುಪುಷ್ಪದಂತೆ ಪೊಳೆವ ಸ್ಥಳವೆ
ತಪೋಲೋಕವೆನ್ನು ಸುವ್ವಿ ೪೫

ಶಿರದೊಳು ಸಾವಿರದಳಕಮಲವು ವಜ್ರದ ಕಲಾ
ವರುಣ ಮಂಡಲವಿದೆ ಸತ್ಯಲೋಕವೆ ಸುವ್ವಿ
ಸತ್ಯಲೋಕದಿ ಬ್ರಹ್ಮ ನಿತ್ಯಅಭಿಮಾನಿಯು
ಉತ್ತಮೋತ್ತಮ ಶ್ರೀರಂಗನ ಪೂಜಿಸುವನು ಸುವ್ವಿ ೪೬

ಓಂಕಾರ ವರ್ಣವು ನಿತ್ಯಅಷ್ಟಾಕ್ಷರಗಳ ಯುಕ್ತ
ಅಷ್ಟಾಕ್ಷರಗಳ ಭಗವದ್ರೂಪಗಳಿಹವು ಸುವ್ವಿ
ರೂಪಗಳಲ್ಲಿ ವಿಶ್ವ ತೈಜಸ ಪ್ರಾಜ್ಞ ತುರ್ಯ
ಆತ್ಮ ಅಂತರಾತ್ಮ ಪರಮಾತ್ಮ ಜ್ಞಾನಾತ್ಮ ಸುವ್ವಿ ೪೭

ಓಂಕಾರದಿಂದಲೇ ಏಕ ಪಂಚಾಶದ್ವರ್ಣವು ವ್ಯಕ್ತ
ಸಕಲ ಸ್ವರವರ್ಣ ಶಬ್ದಪ್ರತಿಪಾದ್ಯನು ಸುವ್ವಿ
ಪ್ರತಿಪಾದ್ಯನು ಶ್ರೀಹರಿಯು ದೇಹವೃಕ್ಷದಿ ಬಂದು
ಸುಖ ದುಃಖ ಫಲಗಳ ನಿರ್ಮಿಸಿಹನು ಸುವ್ವಿ ೪೮

ಸುಷುಮ್ನ ನಾಡಿಯು ಮೊದಲು ತುಂದಿಯೊಳು
ಆದಿಯಾಗಿ ಮುಂದೆ ಶಿರ ಪರಿಯಂತ ವ್ಯಾಪಿಸಿಹುದು ಸುವ್ವಿ
ಇಹುದು ಈ ನಾಡಿಗೆ ನಾಲ್ಕು ದಿಕ್ಕಿನಲ್ಲಿರುವ ನಾಲ್ಕು
ನಾಡಿಯಿಂದಲಿ ಪಂಚಪ್ರಭೇದವು ಸುವ್ವಿ ೪೯

ವಜ್ರಿಕ ಆರ್ಯಕ ವೈಧೃತಿ ಪ್ರಕಾಶನಿ ಎಂಬ
ನಾಲ್ಕು ನಾಡಿಗಳೊಂದಕ್ಕೆ ಇಪ್ಪತ್ತೈದಾದುವು ಸುವ್ವಿ
ಇಪ್ಪತ್ತೈದರಂತೆ ಕೂಡಿ ಎಲ್ಲ ನಾಡಿ ನೂರು ಒಂದು
ಮುಖ್ಯನಾಡಿ ಆದುವೆನ್ನು ಸುವ್ವಿ ೫೦

ನೂರ ಒಂದು ನಾಡಿಭಾಗಗಳನ್ನೆ ಮಾಡಿ ಎಪ್ಪ-
ತ್ತೆರಡುಸಾವಿರ ನಾಡಿಗಳಾದವು ಸುವ್ವಿ
ನಾಡಿಗಳಲ್ಲಿ ಇಡಾನಾಡಿ ಎಡದಲ್ಲಹುದು
ನಾಡಿಯೊಳು ಪಿಂಗಳಾನಾಡಿ ಬಲದಲ್ಲಿಹುದು ಸುವ್ವಿ ೫೧

ಎಡಬಲದಲ್ಲಿ ಶ್ರೀಹರಿ ತಾನು ಸ್ತ್ರೀಪುಂರೂಪದಲ್ಲಿದ್ದು
ಒಡಗೂಡಿ ತನ್ನೊಳು ತಾ ಕ್ರೀಡಿಸುವನು ಸುವ್ವಿ
ಕ್ರೀಡಿಸುವ ನಾಡಿಯೊಳು ನಾಡೀನದಿಗಳೊಳು
ಬಿಡದೆ ಶ್ರೀಹರಿಯ ಅಡಿಯ ನಂಬಿರುವುದು ಸುವ್ವಿ ೫೨

ಸಾವಿರದೆಂಭತ್ತು ಅಸ್ಥೀ ಶರೀರದೊಳು ಯು-
ಕ್ತವಾದವು ಪರ್ವ ಸಂಧಿ ಕೀಲುಗಳಲ್ಲಿ ಸುವ್ವಿ
ಕೀಲುಗಳಲ್ಲಿದ್ದು ಸ್ಥೂಲಕಾರ್ಯಕ್ಕೆಲ್ಲ
ಶಕ್ತಿಯನಿತ್ತು ದೇಹ ಯುಕ್ತವಾಯಿತು ಸುವ್ವಿ ೫೩

ಸ್ಥೂಲಕಾಯವು ಸಪ್ತಧಾತುಗಳಿಂದಲಿ ಯುಕ್ತ
ಅಲ್ಲಿರುವ ಸರ್ವಭಗವದ್ರೂಪಗಳ ತಿಳಿಯೋ ಸುವ್ವಿ
ಭಗವದ್ರೂಪಗಳಲ್ಲಿ ಸ್ಥಾನಭೇದಗಳಲ್ಲಿ ಮಾ-
ತೃಕಾನ್ಯಾಸದಂತೆ ಗ್ರಹಿಸು ನಿತ್ಯ ಸುವ್ವಿ ೫೪

ಅನ್ನಮಯ ಅನಿರುದ್ಧ ಪ್ರಾಣಮಯ ಪ್ರದ್ಯುಮ್ನ
ಮನೋಮಯ ಸಂಕರ್ಷಣ ವಿಜ್ಞಾನಮಯ ಸುವ್ವಿ
ವಿಜ್ಞಾನನಮಯಕೆ ವಾಸುದೇವ ಆನಂದಮಯಕೆ
ಶ್ರೀ ನಾರಾಯಣ ಇನಿತು ಪಂಚಕೋಶ ಸ್ಥೂಲದೇಹದಿ ಸುವ್ವಿ ೫೫

ಮುಖ್ಯರಸಗಳಲ್ಲಿ ಸ್ವಾಖ್ಯರಸವು ಹರಿಗೆ
ಮಿಕ್ಕದ್ದು ತತ್ವರಿಗೆ ಸ್ವರೂಪರಸವು ಸುವ್ವಿ
ಸ್ವರೂಪರಸವು ಸುರರಿಗೆ ಜಡರಸಜೀ–
ವರಿಗೆ ತಕ್ಕಂತೆ ಸ್ಥೂಲದೇಹಕ್ಕುಪಚಯವು ಸುವ್ವಿ ೫೬

ನವಕೋಟಿ ರೋಮಗಳು ಈ ಸ್ಥೂಲ ದೇಹದೊಳು
ಅವಕಾಶದಿಂದಲಿ ತಾ ತುಂಬಿಹವು ಸುವ್ವಿ
ತುಂಬಿಹ ರೋಮದೊಳಗೆ ಕೂಪಂಗಳಿಹವು
ಭಾವಿಸುತ್ತಲಿ ನಿತ್ಯನಂದವಿರುವುದು ಸುವ್ವಿ ೫೭

ಮೂರು ಅರ್ಧ ಮೊಳದುದ್ದ ಇದ್ದ ಈ ದೇಹದೊಳು
ಭೂತಪಂಚಕಗಳ ಭಾಗವಧಿಕವಾಹುದು ಸುವ್ವಿ
ಭಾಗಾಧಿಕದಿಂದ ಗುಣ ಒಂದು ಬಂದೂ
ಎಂದಾದರೊಂದುದಿನ ನಾಶವಾಗುವುದು ಸುವ್ವಿ ೫೮

ಬದ್ಧಜೀವರು ಗುಣಬದ್ಧರಾಗಿರುವರು ವಿಧಿ
ಬದ್ಧರಾಗಿಹರೆಲ್ಲ ಉದ್ಧಾರಾಹೋರು ಸುವ್ವಿ
ಉದ್ಧಾರಾಗಲು ಅನಿರುದ್ಧನ ನೆರೆನಂಬಿ
ಮಧ್ವಮತದೊಳಿದ್ದು ಸುಖಿಸು ನಿತ್ಯ ಸುವ್ವಿ ೫೯

ಭೇದಪಂಚಕವು ಶುದ್ಧತಾರತಮ್ಯ ತಿಳಿದು
ಶ್ರೀದ ಸಗುಣಸರ್ವಜ್ಞನೆಂದು ತಿಳಿ ಸುವ್ವಿ
ಸರ್ವಜ್ಞ ಸ್ವತಂತ್ರದಿ ಸೃಷ್ಟ್ಯಾದಿಕರ್ತ ಎಂದು
ಸರ್ವಾಂತರ್ಯಾಮಿ ಎಂದು ನಂಬಿಕೊಂಡಿರು ಸುವ್ವಿ ೬೦

ವಿಶ್ವ ಬಲಗಣ್ಣಿನೊಳು ತೈಜಸ ಕಂಠದೊಳು
ಪ್ರಾಜ್ಞ ಹೃದಯದಲ್ಲಿದ್ದು ಪೊರೆವನು ಸುವ್ವಿ
ಪೊರೆವನು ಪ್ರತಿದಿನ ಸ್ಥಿತಿಕಾಲ ಗುಣಕಾಲ
ಕರ್ಮದ ಅನುಭವ ತಿಳಿಸುವ ಸುವ್ವಿ ೬೧

ಜೀವನನಾದಿಕರ್ಮ ಜ್ಞಾನೇಚ್ಛಾ ಪ್ರಯತ್ನಗಳು
ಸೃಷ್ಟಿಗೆ ಬಂದಾರಭ್ಯ ಹರಿ ವ್ಯಕ್ತಮಾಡಿಸುವನು ಸುವ್ವಿ
ವ್ಯಕ್ತಮಾಡಿ ಜೀವರ ಕರ್ಮಪ್ರವಾಹದಲ್ಲಿಟ್ಟು ಅಭಿ-
ವ್ಯಕ್ತಮಾಡುವ ಹರಿ ಸ್ವತಂತ್ರನು ಸುವ್ವಿ ೬೨

ಜಲಜನಾಭಗೆ ಎರಡು ಅಧಿಷ್ಠಾನವು
ಎಲ್ಲ ಜಡವು ಮತ್ತೆ ಚೇತನಗಳು ಸುವ್ವಿ
ಜಡ ಚೇತನ ಎರಡು ಭಾಗಗಳಿಹವು ತಿಳಿದು
ಚಿಂತಿಸುವುದು ಅಧಿಷ್ಠಾನಭೇದವು ಸುವ್ವಿ ೬೩

ಜಡದೊಳು ಶುದ್ಧಜಡಗಳ ಸಹಜಾಚಲ-
ಗಳನ್ನು ಕರಚರಣದಿ ಜಡಪ್ರತೀಕವು ಸುವ್ವಿ
ಪ್ರತೀಕದೊಳು ಚೇತನ ಪ್ರತಿಮೆಯು ಸ್ತ್ರೀ ಪುರು-
ಷರುಗಳ ಗೋಳಕದಂತರದಿ ಹರಿಚಿಂತಿಸುತ್ತಿರು ಸುವ್ವಿ ೬೪

ಚೇತನದೊಳು ಪಂಚಗೋಳಕದಿ ಚಿಂತಿಸುವುದು
ದೇಹಗೋಲಕ ಜೀವಗುರು ಪುಷ್ಕರ ಪ್ರಾಣರ ಸುವ್ವಿ
ಪ್ರಾಣ ಗೋಳಕದ ಅಂತರದಲಿ ಹರಿಯನು
ನಿರಂತರ ಧೇನಿಸುತ್ತಿರುವುದು ಸುವ್ವಿ ೬೫

ಜಡಪ್ರತಿಮೆಗಳಲ್ಲಿ ಪ್ರತಿಮೆಗೋಳಕ ಒಂದು
ಗುರುಗೋಳಕ ಒಂದು ಗುರು ಗೋಳಕ ಭಾರ-
ತೀರಮಣಗೋಳಕವು ಸುವ್ವಿ
ಗೋಳಕತ್ರಯಗಳಲ್ಲಿ ಅಂತರ್ಯಾಮಿಯ ಚಿಂ-
ತಿಸುತ್ತ ಭ್ರಾಂತಿಯ ಕಳೆದು ನಿಶ್ಚಿಂತನಾಗು ಸುವ್ವಿ ೬೬

ವಿಷಯಾಸೆಯನು ದಹಿಸಿ ಮೀಸಲ ಮನವನೆ ಇರಿಸಿ
ವಾಸನಾಮೂರ್ತಿಯ ನಿಲ್ಲಿಸಿ ಪೂಜಿಸುತ್ತಿರು ಸುವ್ವಿ
ಪೂಜಿಸು ನಿತ್ಯದಲಿ ಹೃದಯಸದನದಲಿ
ಗೋಳಕತ್ರಯದಲ್ಲಿ ಚಿಂತಿಸು ನಿತ್ಯ ಸುವ್ವಿ ೬೭

ವಾಸನಾ ಪ್ರತಿಮೆಯ ಅಪರೋಕ್ಷಾನಂತರದಿ
ಪ್ರತಿಮಾಂತರ್ಗತ ಚಿದಾನಂದ ಮೂರ್ತಿ ಸುವ್ವಿ
ಚಿದಾನಂದನಪರೋಕ್ಷಾನಂತರದಿ ಈ ದೇಹಾ
ಕಾರದ ಮೂರ್ತಿ ಅಗ್ರೇಶನ ನೆನಸು ಸುವ್ವಿ ೬೮

ಅಗ್ರೇಶನ ನೆನೆದು ಅನುಗ್ರಹ ಸಂಪಾದಿಸೆ
ಜೀವಾಂತರ್ಗತ ಬಿಂಬಮೂರುತಿ ಸುವ್ವಿ
ಬಿಂಬಅಪರೋಕ್ಷಾನಂತರದಿ ಸಂಚಿತಾಗಾಮಿಗಳು
ನಿರ್ಲೇಪ ಪ್ರಾರಬ್ಧಕರ್ಮ ಭೋಗಿಸುತ್ತಿರುವುದೆ ಸುವ್ವಿ ೬೯

ಪ್ರಾರಬ್ಧ ಭೋಗದಲಿ ಜನುಮ ಕರ್ಮಂಗಳಲಿ
ನಿರ್ಮಮನಾಗಿರುವುದು ಕರ್ಮಫಲದಲಿ ಸುವ್ವಿ
ಕರ್ಮದ ಲೇಪವು ಇಲ್ಲ ಜ್ಞಾನದ ತಿರೋಧಾನವಿಲ್ಲಾ
ಆವಾವ ಯೋನಿಗಳಲ್ಲಿ ಜನಿಸಿದಾಗಲು ಸುವ್ವಿ ೭೦

ಬಿಂಬಕ್ರಿಯವನೆ ತಿಳಿದು ಪ್ರತಿಬಿಂಬದ ಕ್ರಿಯವೆನ್ನುತ್ತ
ಅಂಬುಜನಾಭಗೆ ದ್ವಂದ್ವಕರ್ಮವನರ್ಪಿಸು ಸುವ್ವಿ
ದ್ವಂದ್ವಕರ್ಮದ ಮರ್ಮವ ಅಂಬುಜನಾಭನು ನೋಡಿ
ಇಂಬುತೋರುವನಯ್ಯ ಹೃದಯಾಂಬರದಲಿ ಸುವ್ವಿ ೭೧

ಸತ್ಯಸಂಕಲ್ಪನು ಏನಿತ್ತುದೇ ಪುರುಷಾರ್ಥವು
ಅತ್ಯಧಿಕ ಭಕ್ತಿಯಿಂದ ತೃಪ್ತನಾಗಿರು ಸುವ್ವಿ
ತೃಪ್ತನಾಗಿರುತಿದ್ದು ಶ್ರುತ್ಯರ್ಥವನೆ ತಿಳಿದು
ಕೃತ್ಯಗಳ ನಡೆಸಿ ಹರಿಗಿತ್ತು ಸುಖಿಸು ಸುವ್ವಿ ೭೨

ಪರಿಪರಿಚಿಂತನೆ ಕ್ರಮವ ಮರುತ ಮತದಂ-
ತರಿತು ಪಿರಿಯರಿಂದಲಿ ತಿಳಿದು ಹರಿಯನೆ ನುತಿಸು ಸುವ್ವಿ
ಹರಿಯನೆ ನುತಿಸಲು ತ್ವರಿಯಾ ದುರಿತವ ಹರಿಸಿ ಕಾಯ್ವ
ಸರ್ವಸಾಧನವನೀವ ಯೋಗ್ಯತೆಯಂತೆ ಸುವ್ವಿ ೭೩

ಸ್ವತಂತ್ರನು ದೇವ ಅಸ್ವತಂತ್ರನು ಜೀವ ದತ್ತ-
ಸ್ವಾತಂತ್ರವಿದೆ ಸ್ವರೂಪದಲ್ಲಿ ಸುವ್ವಿ
ಸ್ವರೂಪ ಸ್ವತಂತ್ರ್ಯಕ್ಕೆ ಸ್ವತಂತ್ರವಾಚ್ಯನು ಶ್ರೀಶ
ಬಿಂಬನೆಂದೆನಿಸಿ ನಿತ್ಯವಾಗಿರುತಿರ್ಪನು ಸುವ್ವಿ ೭೪

ಅನಾದಿಯಿಂದಲಿ ಕರ್ಮ ತಾ ಪ್ರಕೃತಿಬಂಧದಿಂದ
ಜನ್ಮಜನ್ಮಕ್ಕೆ ಉಪಾದಾನವು ಸುವ್ವಿ
ಉಪಾದಾನಾದಿ ಕಾರಣ ಪುಣ್ಯ ಪಾಪಂಗಳು
ಹಾನಿವೃದ್ಧಿಗೆ ಕಾರಣವೆನ್ನು ಸುವ್ವಿ ೭೫

ಗುಣಕಾಲ ಯೋಗ್ಯತೆಯಂತೆ ಕರ್ಮಪ್ರವಾಹದೊಳಿರಲು
ಕಡೆಹಾಯುವುದುಂಟೆ ಅನಂತ ಜನ್ಮಕೆ ಸುವ್ವಿ
ಅನಂತಜನ್ಮದ ಕರ್ಮವನೆಲ್ಲ ಬಲ್ಲ ಶ್ರೀ ನಲ್ಲ-
ನೊಲುಮೆ ಮಾಡೆ ನಾಶಮಾಡುವ ಸುವ್ವಿ ೭೬

ಕರ್ಮಂಗಳಲ್ಲಿ ನಿತ್ಯನೈಮಿತ್ತಿಕ ಕಾಮವೆಂದು
ಕರ್ಮದ ವಿವರ ವಿಸ್ತಾರವಿರುವುದು ಸುವ್ವಿ
ವಿಸ್ತಾರದಿ ನಿತ್ಯಕರ್ಮ ಬಿಡದೆ ನಡೆಸುವುದು
ಮುಖ್ಯ ಉತ್ತಮಸಾಧನ ಇದೇ ಮತ್ತೆ ಕೇಳೋ ಸುವ್ವಿ ೭೭

ಸ್ನಾನಸಂಧ್ಯಾವಂದನ ಜಪ ವೀತಿಹೋತ್ರ ಶ್ರವಣ
ಧ್ಯಾನ ಕೀರ್ತನೆಗಾನ ಇದೇ ನಿತ್ಯಕರ್ಮವು ಸುವ್ವಿ
ನಿತ್ಯಕರ್ಮವು ಕಾಲತ್ರಯದಲಿ ಮಾಡಿ ಕೃತ-
ಕೃತ್ಯನಾಹೋನು ಸತ್ಯ ಕೇಳೋ ಸುವ್ವಿ ೭೮

ನೈಮಿತ್ತಿಕ ಕರ್ಮದೊಳು ಮನ್ವಾದಿ ಅಯನಂಗಳು ಪೂ
ರ್ಣಿಮ ಪೈತೃಕ ವತ್ಸರ ಕರ್ಮಗಳು ಸುವ್ವಿ
ವತ್ಸರದಿ ಮತ್ತೆ ಉಪರಾಗ ದ್ವಾದಶಿ ಆದಿ
ತಿಥಿತ್ರಯದ ಕರ್ಮವಾವುದು ಸುವ್ವಿ ೭೯

ಭೋಗಾಪೇಕ್ಷೆಯೆ ಮುಖ್ಯಕಾಮನ ಕ-
ರ್ಮಂಗಳಲಿ ವಿತ್ತಕಾಂಕ್ಷೆಯುತವು ಸುವ್ವಿ
ಕಾಂಕ್ಷೆಯಿಂದಲಿ ಎಲ್ಲಾ ಕುಕ್ಷಿಪೋಷಣೆ-
ಗಾಗಿ ಮುಮುಕ್ಷುಮಾರ್ಗಕ್ಕೆ ನಿರ್ಲಕ್ಷಿಸುವುದು ಸುವ್ವಿ ೮೦

ನಿತ್ಯನೈಮಿತ್ತಿಕದೊಳು ಸಬೀಜನಿರ್ಬೀಜಕ
ರ್ಮದ ವಿವರ ಪೇಳುವುದಯ್ಯ ಸುವ್ವಿ
ಕರ್ಮದೊಳು ಕಾಮ್ಯಾದಿಸಬೀಜ ಕರ್ಮ
ಪುಣ್ಯಬೀಜಕರ್ಮವೆಂದೆರಡುವಿಧ ಪೇಳ್ವರು ಸುವ್ವಿ ೮೧

ಶಮದಮವಿದ್ದರು ಸರಿಯೆ ಕರ್ಮನೆಸಗುವಾಗ
ಪುಣ್ಯಪಾಪವು ಬಿಡದೆ ಹತ್ತಿಬರುವುದು ಸುವ್ವಿ
ಬರುತಿರ್ಪುದು ಮಹಾತ್ಮರಿಗೆ ಬಿಡದು ಕರ್ಮಂಗಳಲಿ
ಕರ್ಮಂಗಳ ಪಾಡೇನು ಪೇಳಲೊಶವೆ ಸುವ್ವಿ ೮೨

ಆರ್ತಜನರ ಕ್ಲೇಶ ಹರಿಸಿ ಉಪಕಾರದಲಿ
ಸತ್ವಗುಣ ಪ್ರವರ್ತರುತ್ತಮರು ಸುವ್ವಿ
ಉತ್ತಮರು ಮಾತಾಪಿತೃ ಸಹಜಾತ ಬಾಂಧವ-
ರ ತೃಪ್ತಿಪಡಿಸಲು ಪುಣ್ಯಬೀಜ ಪಾಪವು ಸುವ್ವಿ ೮೩

ಜ್ಞಾತಾಜ್ಞಾತವೆಂಬೊ ನಿರ್ಬೀಜ ಪುಣ್ಯವು ವಿವಿಧ
ಭೂತಳದೊಳು ಜನಕುಂಟೆಂಬುದು ಸುವ್ವಿ
ಉಂಟೆಂಬರು ಖ್ಯಾತ ದಾನಧರ್ಮವನೆಸಗಲು
ಜ್ಞಾತಬೀಜದ ಪುಣ್ಯಕರ್ಮವಿರುವುದು ಸುವ್ವಿ ೮೪

ಅಜ್ಞಾತ ನಿರ್ಬೀಜ ಪುಣ್ಯವು ಎಂತೆಂದೆನೆ
ಪೋತತನದಿ ರತ್ನ ಭೂಷಣ ತೊಡಿಗೆಯಂತೆ ಸುವ್ವಿ
ಭೂಷಣತೊಡಿಗೆ ಜ್ಞಾನವಿಲ್ಲದೆ ಪೋಪಂತೆ ಸಾ-
ಧನವಿನಿತಿಲ್ಲದೆ ಕೆಟ್ಟುಪೋಪುದು ಸುವ್ವಿ ೮೫

ಜ್ಞಾತನಾದಮೇಲೆ ಪಾತಕಿ ಪುಣ್ಯನಹರೋ ಈಪರಿ ಅ-
ಜ್ಞಾತ ನಿರ್ಬೀಜ ಪುಣ್ಯ ಸುವ್ವಿ
ಪುಣ್ಯವು ಈ ಪರಿಅಜ್ಞಾತ ನಿರ್ಬೀಜವು
ಎಂತೋ ಕರ್ಮದ ಬೀಜ ತಿಳಿಯಲರಿಯದು ಸುವ್ವಿ ೮೬

ಜ್ಞಾತ ಅಜ್ಞಾತದ ನಿರ್ಬೀಜ ಪಾಪದ ವಿವರ
ಪ್ರೀತಿಯಿಂದಲಿ ಕೇಳಿ ತಿಳಿಯೊ ಮನಕೆ ಸುವ್ವಿ
ತಿಳಿಯೊ ಜ್ಞಾತ ನಿರ್ಬೀಜಪಾಪವು
ಪಾತಕಮಾಡದೆ ಸತ್ಕರ್ಮವಾವುದು ಮತ್ತೆ ಕೇಳೂ ಸುವ್ವಿ ೮೭

ಜ್ಞಾತ ನಿರ್ಬೀಜದ ಪಾಪದ ನಿದರ್ಶನ
ತೀರ್ಥಯಾತ್ರೆ ಕಾಲದಲ್ಲಿ ಸುವ್ವಿ
ಕಾಲತ್ರಯದಲ್ಲಿ ಯಾತನಂತೆ ತಿರುಗಿ ವಿ-
ಧಿತೋರದ ಸತ್ಕರ್ಮವಾವುದು ಅದು ಸುವ್ವಿ ೮೮

ಜ್ಞಾನರಹಿತ ನಿರ್ಬೀಜ ಪಾಪವ ತಿಳಿಯೋ
ಮಾರ್ಗದೊಳು ಪೋಪ ಆತುರದಲ್ಲಿ ಸುವ್ವಿ
ಆತುರದಲ್ಲಿ ಪೋಪಾಗ ಕ್ರಿಮಿಕೀಟ ಘಾತಕವು
ಘಾತಿಸಿದ ಪಾಪವೇ ಅಜ್ಞಾತ ನಿರ್ಬೀಜವು ಸುವ್ವಿ ೮೯

ದೈಹಿಕ ದೇಶಿಕ ಕಾಲಿಕ ಸ್ವಾಭಾವಿಕ ಕರ್ಮದಲಿ
ವಿಹಿತಾವಿಹಿತವು ತಿಳಿದು ಆಚರಿಸುವುದು ಸುವ್ವಿ
ಆಚರಿಸುವ ಕರ್ಮದೊಳು ಕರ್ಮಾಂತರ್ಗತನ ತಿಳಿದು ಸು-
ವಿಚಾರದಿಂದಲಿ ಫಲ ಯಾಚಿಸದಿರು ಸುವ್ವಿ ೯೦

ಗುರುಭಕ್ತಿ ತಾರತಮ್ಯ ವಿಷ್ಣು ವೈಷ್ಣವಜ್ಞಾನ
ನಿರುತಕರ್ಮಗಳು ವಿಧಿವಿಹಿತ ಸುವ್ವಿ
ವಿಧಿವಿಹಿತ ಮಾರ್ಗದಲಿ ನಿಶ್ಚಲಮನದಿಂದೆ-
ಸಗಿ ನಿರ್ಮಮನಾಗಿರು ಕರ್ಮಫಲಗಳಲ್ಲಿ ಸುವ್ವಿ ೯೧

ಭಿನ್ನಾಧಿಷ್ಠಾನದ ದಾರು ಪಾಷಾಣದಲಿ ವಹ್ನಿ
ಭಿನ್ನವಿಲ್ಲದೆ ಎಂತು ಅಡಗಿರ್ಪುದು ಸುವ್ವಿ
ಅಡಗಿರ್ಪುದದರಂತೆ ಭಿನ್ನರಹಿತವಾಗಿ
ಶ್ರೀನಿಧೆ ಸರ್ವಾಂತರ್ಯಾಮಿ ಎನ್ನು ಸುವ್ವಿ ೯೨

ಸೂಕ್ಷ್ಮಸ್ಥೂಲ ಸೃಷ್ಟಿಗೆ ಕಾರಣವೆರಡುಂಟು
ಸೂಕ್ಷ್ಮಸೃಷ್ಟಿಯು ಅನಿರುದ್ಧ ದೇಹದ ಪರಿಯಂತ ಸುವ್ವಿ
ದೇಹಕ್ಕೆ ಉಪಾದಾನ ಕಾರಣವು ಲಿಂಗದೇಹ ಸ್ಥೂಲ-
ದೇಹಕ್ಕೆ ಜಡಪ್ರಕೃತಿ ಅಜಾಂಡಾವರಣವೆನ್ನು ಸುವ್ವಿ ೯೩

ಕಾರ್ಯಗಳೇನೆಂಬೆ ಲಿಂಗೋಪಾದಾನ
ಕಾರ್ಯವು ಅನಿರುದ್ಧಾ ದೇಹವದರೊಳು ಇರುತಿರ್ಪುದು ಸುವ್ವಿ
ಇರುತಿರ್ಪುದಿದಕೆ ಮೂಲ ಜಡಪ್ರಕೃತಿ ಉಪಾದಾನ-
ಕಾರ್ಯ ಬ್ರಹ್ಮಾಂಡದೊಳು ಕಾರ್ಯಗಳಹವು ಸುವ್ವಿ ೯೪

ಅನಾದಿ ಕರ್ಮದಂತೆ ದೇಹದ್ವಾರದಿ ಸಕಲ
ಪಾಪಪುಣ್ಯ ಭೋಗಕೆ ಕರ್ತೃಜೀವನು ಸುವ್ವಿ
ಕರ್ತ ಕಾರ್ಯ ಕಾರಣದಿ ಯಾವತ್ತರಲ್ಲಿ ಹರಿ
ಪತ್ನಿಯರೊಡಗೂಡಿ ಕ್ರೀಡಿಸುತಿರ್ಪನು ಸುವ್ವಿ ೯೫

ಪ್ರೇರ್ಯಪ್ರೇರಕನಾಗಿ ಸ್ವರೂಪ ಸ್ಥೂಲದೊಳಿದ್ದು ತ್ರಿವಿಧರ
ಯೋಗ್ಯತೆಯಂತೆ ಕ್ರಿಯವ ನಡೆಸುವ ಸುವ್ವಿ
ಕ್ರಿಯವ ಪ್ರೇರಿಸಿ ನಡೆಸಿ ಮಾಡಿ ಮಾಡಿಸುತಿರ್ಪ ತಿ-
ಳಿಯಗೊಡದೆ ಬಿಂಬಕ್ರಿಯವನೆಲ್ಲ ಹರಿಯು ಸುವ್ವಿ ೯೬

ಈಶ್ವರೇಚ್ಛಾ ಮೊದಲು ಅಚ್ಛಾಧಿಕವು ಎರಡು
ಲಿಂಗ ಅವಿದ್ಯಾಕಾಯಕ ಎಂಬಿವೆ ತಿಳಿದು ಸುವ್ವಿ
ಎಂಬೋ ಏಳಾವರಣಗಳು ಜೀವನ ಮೇಲಿ
ಹುದು ಅನಾದಿಯಲ್ಲಿದ್ದು ಅಂಶಸ್ಥೂಲದಿ ತೋರ್ಪವು ಸುವ್ವಿ ೯೭

ಕ್ಲೇಶ ದೇಹಗಳೆಲ್ಲಾ ನಾಶಗೈಸಲು ಬಲ್ಲ
ಶ್ರೀ ವೆಂಕಟೇಶಾಭಿನ್ನ ಉರಗಾದ್ರಿವಾಸವಿಠಲ ಸುವ್ವಿ
ಉರಗಾದ್ರಿವಾಸ ವಿಠಲ ಹರಿಸುವ ಸಂಕಟ
ಪಟಲ ಹೃತ್ಕಮಲಸ್ಥ ಶ್ರೀಲೋಲ ಭಕ್ತವತ್ಸಲ ಸುವ್ವಿ ೯೮

## ೮೯

ಸ್ವಾತಂತ್ರ್ಯವೆನಗುಂಟೆ ಸರ್ವಾಂತರ್ಯಾಮಿ ಪ

ನಿಂತು ನೀ ನಡೆಸುವಿಯೊ ಜೀವಾಂತರ್ಯಾಮಿ ಅ.ಪ

ಜೀವ ಸ್ವರೂಪದಲಿ ಜೀವನಾಕಾರದೊಳಿದ್ದು
ಜೀವನ ಅನಾದಿಕರ್ಮ ಜೀವರಿಗೆ ಪ್ರೇರಿಸಿ
ಜೀವಕೆ ಚೇತನ ಕೊಟ್ಟು ಜೀವಕ್ರಿಯೆಗಳನ-
ಭಿವ್ಯಕ್ತಿ ಮಾಡಿ ಸತತ ಪೊರೆಯುವ ಕರುಣಿ ೧

ದತ್ತಸ್ವಾತಂತ್ರ್ಯ ತನಗಿತ್ತಿಹನು ದೇವನೆಂದು-
ನ್ಮತ್ತತನದಿ ತಾ ಕರ್ತನೆಂದೆನಿಸಿ ಸುತ್ತಲಹ
ನಿತ್ಯ ಅವಸ್ಥೆಗಳ ಪರಿಹರಕೆ
ಶಕ್ತನಾಗನು ಏಕೆ ಆಪತ್ತುಗಳು ಬರಲು ೨

ಬಾರದಿರೆ ಸೃಷ್ಟಿಗೆ ಕಾರ್ಯವಿಲ್ಲದೆ ಜೀವ
ಪೂರ್ಣವಾಗಿ ತಾ ಜಡನಂತಿಹಾ
ಕರಣದಲಿ ಶ್ರೀರಮಣ ಸೇರಿ ಚೇತನ ಕೊಟ್ಟು
ಕ್ರೀಡೆಗೋಸುಗ ಬಿಡುವ ಸರ್ವ ಜೀವರನಾ ೩

ಎನ್ನ ಅನಾದಿಕರ್ಮ ಎನ್ನದೆಂದಿಗು ಸರಿಯೆ
ನಿನ್ನದಲ್ಲಾ ಸ್ವಾಮಿ ಎನ್ನನುಭವಕೆ ಕೊಡುವೆ
ಮುನ್ನ ಪ್ರಳಯದಿ ನಿನ್ನ ಘನ್ನೊಡಲೊಳಿಂಬಿಟ್ಟೆ
ಎನ್ನ ಕರ್ಮಗ್ರಂಥಿ ಎನ್ನಿಂದ ಬಿಡಿಸೊ ೪

ಲಿಂಗದೇಹಕ್ಕಾಗಿ ತ್ರಿಗುಣ ಅಂಗಿಯ ಕೊಟ್ಟೆ
ಅಂಗಬೇಕೆಂದಿತ್ತೆ ಅನಿರುದ್ಧ ಲಿಂಗಾ
ಅಂಗಕಾರ್ಯಕೆ ಎನಗೆ ಸ್ಥೂಲಾಂಗಗಳ ಕೊಟ್ಟು
ಅಂಗೋಪಾಂಗದಲಿ ನೀನ್ಹಾಂಗೇ ಮೆರೆವೆ ೫

ವಿಷಯಗಳಿಂದ್ರಿಯಕೆ ವಿಷಮವಾಗಿಹವೋ ದೇವ
ಹೃಷೀಕಪನೆ ನಿನಗೆ ಇದು ಸಂತೋಷವೇನೊ
ತೃಷಿಹಸಿವು ಕೊಡದೆ ದುರ್ವಿಷಯಗಳಿಗೆ ಬಿಡದೆ
ಈಷಣತ್ರಯ ಹರಿಸಿ ಪೋಷಿಸೋ ದೇವಾ ೬

ತರುಛಾಯ ವೃತ್ತಿಯು ತರಣಿ ಬಿಟ್ಟಿಪ್ಪುದೆ
ತರಣಿಕಿರಣನನುಸರಿಸಿ ವೃತ್ತಿಯಹುದೊ
ಕರಣನಿಯಾಮಕ ನೀನೆ ಕಾರ್ಯವ ನಡೆಸಲು ದೇವ
ತ್ವರಿತದಲಿ ಸ್ಥೂಲದಲಿ ಕಾರ್ಯಾಭಿವ್ಯಕ್ತಿಯೊ ೭

ನೀನಿತ್ತ ಸ್ವಾತಂತ್ರ್ಯಕಾರ್ಯ ಮುಕ್ತಿಯಲ್ಲಿ
ನಾನತ್ತು ಫಲವೇನೊ ಸ್ಥಿತಿಕಾಲದಿ ನೀನಿಲ್ಲದಿನ್ನಿಲ್ಲ
ತ್ರಿಗುಣ ಬದ್ಧರ ಕಾರ್ಯ ನೀ ಚಲಿಸೆ
ಪ್ರತಿಬಿಂಬ ಕಾರ್ಯವಹುದೋ ೮

ಹೆಚ್ಚು ಮಾತೇನು ಜೀವನಿಚ್ಛೆಯನನುಸರಿಸಿ
ಅಚ್ಯುತ ತಾನೆ ಸ್ವೇಚ್ಛಚರಿಸಿ
ನಿಚ್ಚದಲಿ ಲಿಂಗಾನಿರುದ್ಧದಿ ತಾನಿದ್ದು
ಎಚ್ಚರಿಸಿ ಸ್ಥೂಲದಿಂದೆಚ್ಚರದಿ ನಡೆವುದೊ ೯

ನಿನ್ನ ಸಂಕಲ್ಪವಲ್ಲದಿನ್ನಿಲ್ಲ ಅನ್ಯಥಾಗುವುದುಂಟೆ
ಎಂದೆಂದಿಗೂ ಘನ್ನ ಮಹಿಮನೆ ಎನ್ನ
ಯತ್ನವಾವುದೋ ಕಾಣೆ ಎನ್ನ ಭ್ರಾಮಕತ್ರಯವ
ಇನ್ನು ಹರಿಸೋದೇವಾ ೧೦

ಶ್ರೀದನಿಂ ದತ್ತಸ್ವಾತಂತ್ರ್ಯ ಸಮ್ಮತವೇನು
ಅಧೀನ ಸ್ವಾತಂತ್ರ್ಯಕಾರ್ಯದಲ್ಲಿ ಮೋದನಾಮಕ ನೀನೆ
ಆದರಿಸಿ ಸಲಹಯ್ಯ ಮೋದತೀರ್ಥಾ-
ರಾಧ್ಯ ಶ್ರೀ ವೇಂಕಟೇಶಾ ೧೧

## ಪುರಾಣವಿಷಯ

### ೯೦

### ಶ್ರೀವೆಂಕಟೇಶ ಕಲ್ಯಾಣ

ಇನ್ನೆಂದಿಗೋ ನಿನ್ನದರುಶನ ಶೇಷಾದ್ರಿವಾಸ ಪ

ಪನ್ನಂಗಶಯನ ಪ್ರಸನ್ನರ ಪಾಲಿಪ
ಘನ್ನಮಹಿಮ ನೀನೆನ್ನನುದ್ಧರಿಸೂ ಅ.ಪ

ವರ ಸುರಮುನಿಗಳ ವೃಂದ ನೆರಹಿದ ಯಾಗಗಳಿಂದ
ಪರಮಾದರದಿಂದಿರುವ ಸಮಯದಿ
ನಾರದ ಮುನಿ ಬಂದೊದಗಿ ನಿಂದ ಇ-
ದಾರಿಗರ್ಪಿತವೆಂದರುಹಿ ಮರಳೀ ತೆರಳಿದ
ಸುರಮುನಿವಚನದಿ ಭೃಗುಮುನಿವರ ಪೋಗಿ
ಹರವಿರಂಚಿಯರ ನೋಡಿದಾ ಉರುತರಕೋಪದಿ ನಿಲ್ಲುತ
ಪರಮಪುರುಷರಲ್ಲೆಂದೆನ್ನುತ ವೈಕುಂಠವನ್ನೇ ಸಾರುತ
ಹರುಷದಿ ಶ್ರೀಹರಿ ಉರಗಶಯನನಾಗಿ
ಪರಮಯೋಗನಿದ್ರೆ ಮಾಡುತಾ ಅರಿಯದಂತೆ ತಾ ನಟಿಸುತ

ಇರೆ ಮುನಿ ಪದದಿಂದೊದೆಯುತ ತ್ವರಿತದಿಂದ ತಾನೇಳುತ
ಹರುಷದಿ ಮುನಿಪಾದ ಕರದಲಿ ಒತ್ತುತ
ಕರುಣದಿ ಸಲಹಿದೆ ದುರಿತವ ಹರಿಸಿ
ಹರಿಭಕುತರ ಅಘಹರಿಸಿಕಾಯುವಂಥ
ಕರುಣಿಗಳುಂಟೇ ಶ್ರೀಹರಿ ಸರ್ವೋತ್ತುಮಾ ೧

ಸ್ವಾಮಿ ನೀನಿಜಧಾಮವನೇ ತೊರೆದೂ
ಸ್ವಾಮಿಕಾಸಾರ ತೀರದಿ ನಿಂದೂ ಧಾಮವನರಸಿ
ವಲ್ಮೀಕವನೆ ನೋಡಿ
ವಿಮಲಸ್ಥಳವಿದೆಂದು ಮನದಲಿ ಆನಂದದಿಂದಲಿ ಬಂದು ನಿಂದೆ
ಸನ್ಮುದವನ್ನೇ ತೋರುತ
ಕಮಲ ಭವಶಿವ ತುರುಕರುರೂಪದಿ
ಈ ಮಹಗಿರಿಯನ್ನು ಅರಸುತ ಸ್ವಾಮಿ ನೀನಿಲ್ಲಹೆನೆಂದೆನ್ನುತ
ಕಾಮಧೇನು ಪಾಲ್ಗರೆಯುತಾ ಈ ಮಹಿಮೆಯನ್ನೇ ಬೀರುತಾ
ಭೂಮಿಗೊಡೆಯ ಚೋಳನೃಪಸೇವಕನು
ಧೇನುವನ್ನು ತಾ ಹೊಡೆಯಲು ಕಾಮನಯ್ಯ ನೀನೇಳಲು
ಭೀಮವಿಕ್ರಮವ ತೋರಲು ಕ್ಷಮಿಸಿದೆ ನೃಪನ ದಯಾಳು
ಅಮಿತ ಸುಗುಣಪೂರ್ಣ ಅಜರಾಮರಣ
ನೀ ಮಸ್ತಕಸ್ಫೋಟನ ವ್ಯಾಜವ ತೋರಿ
ಪ್ರೇಮದಿ ಗುರುಪೇಳ್ದೌಷಧಕಾಗಿ
ನೀ ಮೋಹವ ತೋರಿದೆ ವಿಡಂಬನಮೂರ್ತೇ ೨

ಮಾಯಾರಮಣನೆ ಜೀಯಾ ಕಾಯುವೆ ಜೀವನಿಕಾಯಾ
ತೋಯಜಾಂಬಕ ಹಯವನೇರಿ ಭರದಿ ತಿರುಗಿತಿರುಗೀ
ವನವನೆಲ್ಲ ಮೃಗನೆವನದಿ ನಿಂದು ನೋಡಿದೇ
ಪ್ರಿಯಸಖಿಯರ ಕೂಡಿ ಪದುಮಾವತಿಯು ತಾ
ಹಯದಿ ಕುಳಿತ ನಿನ್ನ ನೋಡಲು
ಪ್ರಿಯಳಿವಳೆನಗೆಂದು ಯೋಚಿಸಿ
ಕಾಯಜಪಿತ ನಿನ್ನ ಹಯವನೆ ಕಳಕೊಂಡು
ಮಾಯದಿಂದ ನೀ ಮಲಗಿದೆ

ತಾಯಿ ಬಕುಳೆಯೊಳು ಪೇಳಿದೆ
ತೋಯಜಮುಖಿಯಳ ಬೇಡಿದೇ
ಆ ಯುವತಿಯನ್ನೇ ಸ್ಮರಿಸುತಾ
ಶ್ರೀಯರಸನೆ ನೀನು ಸ್ತ್ರೀರೂಪದಿ ಹೋಗಿ
ಶ್ರೀಯಾಗಿಹಳಿನ್ನು ಶ್ರೀಹರಿಗೀಯಲು
ಶ್ರೇಯವೆಂದು ಆಕಾಶನನೊಪ್ಪಿಸಿ
ತಾಯಿಯಭೀಷ್ಟವನಿತ್ತೆ ಸ್ವರಮಣಾ ೩

ಸಕಲಲೋಕೈಕನಾಥಾ ಭಕುತರಭೀಷ್ಟಪ್ರದಾತಾ
ಭಕುತನಾದ ಆಕಾಶನೃಪತಿಯು ಬಕುಳೆ ಮಾ-
ತ ಕೇಳಿ ಅಭಯವಿತ್ತು ಮನ್ನಿಸಿ ಪದುಮಾವತಿಯ ಪರಿಣಯ
ಶುಕರ ಸನ್ಮುಖಹಲ್ಲಿ ಅಕಳಂಕ ಮಹಿಮ-
ಗೆ ಕೊಟ್ಟನು ತಾ ಲಗ್ನಪತ್ರಿಕಾ
ಸ್ವೀಕರಿಸುವದೀ ಕನ್ನಿಕಾ ಈ ಕಾರ್ಯಕೆ ನೀವೆ ಪ್ರೇ
ರಕಾ ತಾ ಕಳುಹಿದ ಪುಣ್ಯಶ್ಲೋಕನು
ಶೋಕರಹಿತ ಜಗದೇಕವಂದ್ಯ ಅವಲೋಕಿಸಿ ಪತ್ರಿಕವನ್ನು
ಸಕಲಸಾಧನವಿಲ್ಲಿನ್ನು
ಲೋಕೇಶಗರುಹಬೇಕಿನ್ನು
ಏಕಾಂಗಿ ನಾನು ಎನ್ನಲು
ಲೋಕಪತಿಯೆ ಸುರಕೋಟಿಗಳಿಂದಲಿ
ಈ ಕುವಲಯದಿ ನಿನ್ನಯ ಪರಿಣಯವೆಸಗಲು
ಲೋಕಜನಕೆ ಕಲ್ಯಾಣವ ತೋರಿದೆ
ಭಕುತಜನಪ್ರಿಯ ಶ್ರೀವತ್ಸಾಂಕಿತ ೪

ಖಗವರವಾಹನ ದೇವಾ
ತ್ರಿಗುಣರಹಿತ ಜಗಕಾವ
ಅಗಣಿತಮಹಿಮ ಗೋಮಯನೆನಿಸಿ
ಬಗೆಬಗೆ ರೂಪವ ಧರಿಸಿ ಪರಮಾದರದಲಿ
ಸುರರ ಪೊರೆಯುತಾ
ನಗಧರ ನೀನೀ ಗಿರಿಯೊಳು ನೆಲೆಸಿಹೆ

ಅಗಣಿತ ಸುರಗಣ ಕಿನ್ನರರು ಸಾಧ್ಯರು ತರು ಫಲ
ಖಗಮೃಗ ರೂಪವ ಬಗೆಬಗೆ ಇಹೆ
ಪೊಗಳಲಳವೇ ಗಿರಿವರವು
ಹಗಲು ಇರುಳು ಭಗವಂತನೆ ನಿನ್ನನ್ನು
ಪೊಗಳುತಿಹರು ನಿನ್ನ ಭಕುತರು
ನಿಗಮವ ಪಠಿಸುತ ನಡೆವರು ನಗೆ
ಮೊಗದಲಿ ನಿನ್ನ ದಾಸರು ಗೋವಿಂದ ಮುಕುಂದ ಎನ್ನುತಾ
ಯುಗ ಯುಗದೊಳು ನೀನಗದೊಳು ನೆಲಸಿಹೆ
ಜಗದ ದೇವ ರಾಜಿಸುವವನಾಗಿಹೆ
ಮಿಗಿಲೆನಿಸಿದ ಶ್ರೀ ವೆಂಕಟೇಶಾ
ಸದ್ಗುಣ ಸಚ್ಚಿದಾನಂದ ಮುಕುಂದ ಗೋವಿಂದಾ ೫

## ೬೧

ಜಗದಾದಿವಂದ್ಯನಿಗೆ ಶರಣು ಪ

ಶರಣಜಗದೊಡೆಯ ಶರಣು
ಪನ್ನಗಾನಗದೊಡೆಯ ಶರಣು ೧

ಖಗಪ ನಖಾಗ್ರದಲಿ ಮಿಗೆ ಶೋಭಿಸುವ
ತವಪದನಖಾಗ್ರಕೆ ಶರಣು ೨

ಮೂಡಲಾಗಿರಿಗೆ ಶರಣು
ಗಿರಿಯ ಅಡಿದಾವರೆಗಳಿಗೆ ಶರಣು ೩

ದೃಢಮನದಿ ನಿನ್ನ ಅಡಿದರುಶನಕೆ
ನಡೆರ್ವಡಿಗಳಿಗೆ ಶರಣು ೪

ಮೆಟ್ಟು ಮೆಟ್ಟಲಿಗೆ ಶರಣು
ಮನಮುಟ್ಟಿ ಮೆಟ್ಟಲೇರುತಿಹ
ನಿನ್ನಿಷ್ಟ ಭಕ್ತರಿಗೆ ಶರಣು ೫

ತನುಕಷ್ಟ ಹರಿಸಿ ಮನತುಷ್ಟಿಯನು ತೋರ್ವ
ಬೆಟ್ಟದಂದಕ್ಕೆಲ್ಲ ಶರಣು ೬

ಸುರಕಿನ್ನರರ ತರುಶಿಲಾಲತಾಕಾರ ತವ
ಪರಿವಾರಕ್ಕೆಲ್ಲ ಶರಣು ೭

ಶುಕಪಿಕನಾದಝೇಂಕಾರ
ಸ್ವರಶಬ್ದವಾಚ್ಯತವ ಶರಣು ೮

ಮೆಲ್ಲಮೆಲ್ಲನೆ ಭಕ್ತರುಲ್ಲಾಸವನೇ ತೋರ್ಪ
ಚೆಲ್ವ ಗಾಳಿಗೋಪುರ ದ್ವಾರಕ್ಕೆ ಶರಣು ೯

ಲೀಲೆಯಿಂದಲಿ ನಿನ್ನನೋಲೈಪ
ಭಕ್ತರ ಪಾದಪಲ್ಲವಂಗಳಿಗೆ ಶರಣು ೧೦

ಗೋವಿಂದ ಸಚ್ಚಿದಾನಂದ ಮುಕುಂದನೆಂದು-
ಚ್ಚರಿಪ ಭಕ್ತರಿಗೆ ಶರಣು ೧೧

ಹರಿ ಹರೀ ಹರಿ ಎಂದು ಹರಿದಾರಿ ಪಿಡಿದ
ವರ ಅಡಿದಾವರೆಗಳಿಗೆ ಶರಣು ೧೨

ಪರಿಪರಿ ಭಾಧೆಯಿಂ ತರಳನ್ನ ಕಾಯ್ದ ಶ್ರೀ
ನರಹರಿಯ ಚರಣಾರವಿಂದಕ್ಕೆ ಶರಣು ೧೩

ತಿರುತಿರುಗಿ ತುರುವನು ಕರುವು ಅರಸುವಂತೆ
ತಿರುದಾರಿ ಮೊಣಕಾಲ ಮುರಿಗೆ ಶರಣು ೧೪

ಭಕ್ತರಾಪತ್ತಳಿವ ಶಕ್ತಿಸಂಪತ್ತೀವ ಉತ್ತಮೋತ್ತಮ
ಭಕ್ತರಾ ಮಂಟಪಕ್ಕೆ ಶರಣು ೧೫

ಭಕ್ತಿಯಿಂದಲಿ ಸಪ್ತಗಿರಿಯ ದಾಟಿದ ಹರಿ-
ಭಕ್ತಜನಸಂದೋಹಗಳಿಗೆ ಶರಣು ೧೬

ಶಕ್ತಿರಹಿತರಾಗಿ ರಿಕ್ತಹಸ್ತದಿ ಬಂದ
ಭಕ್ತರುದ್ಧರಿಸಲು ನಿಂದ ಸಮೀರನಿಗೆ ಶರಣು ೧೭

ಜೀವರಿವರೆನ್ನುವರು ದರುಶನವನೀಯೆಂದು ಕ-
ರವ ಮುಗಿದು ಹರಿಯ ಸ್ತುತಿಸುವಗೆ ಶರಣು ೧೮

ಪಾವನಾ ಮೂರ್ತಿಯನು ಮಾನಸದಿ ಧೇನಿಸಲು
ಭಾವಶುದ್ಧಿಯನೀವ ಜೀವೇಶನಿಗೆ ಶರಣು ೧೯

ಸಚ್ಚಿದಾನಂದಾತ್ಮ ಶ್ರೀ ಮುಕುಂದನ ದಿವ್ಯ
ಅರಮನೆಯ ಮಹಾದ್ವಾರಕ್ಕೆ ಶರಣು ೨೦

ಅಚ್ಯುತನ ರಾಣಿ ಸಿರಿ ಮೆಚ್ಚಿ ತುತಿಸುವ
ಅವ್ಯಾಕೃತಾಕಾಶಾವರಣಕ್ಕೆ ಶರಣು ೨೧

ತೀರ್ಥಮಹಿಮೋಪೇತ ಸ್ವಾಮಿಪುಷ್ಕರಣೀ-
ತಟವಿರಾಜಿತ ಅಶ್ವತ್ಥವೃಕ್ಷರಾಜನಿಗೆ ಶರಣು ೨೨

ಭೂದೇವಿಯಾರಮಣ ಆದಿಭೂವರಹ
ಮೂರ್ತಿಯ ಶ್ರೀಪಾದಯುಗ್ಮಕ್ಕೆ ಶರಣು ೨೩

ಬ್ರಹ್ಮಾಂಡದೊಡೆಯನ ದಿವ್ಯ ನಿಲಯದೊಳಿರುವ
ಬಹಿರಾವರಣಕ್ಕೆ ಶರಣು ೨೪

ಸರ್ವಗುಣಸಂಪೂರ್ಣ ವೈಕುಂಠಮಂದಿರನ
ಸ್ವರ್ಣಮಯ ಸುಪರ್ಣಸ್ಥಂಭಕ್ಕೆ ಶರಣು ೨೫

ಸ್ವಾಮಿ ಸಂದರ್ಶನಕ್ಕೆ ಗಮನ ನಿರ್ಗಮನವುಳ್ಳ
ಸುಮನಸರ ಭಕ್ತಜನಸಂಘಕ್ಕೆ ಶರಣು ೨೬

ಕಾಂಚನರೂಪ ಸುವರ್ಣಮುಖರೀನದಿ ವಿ-
ರಾಜಿತ ತೊಟ್ಟಿತೀರ್ಥ ಸಮಸ್ತ ತೀರ್ಥಗಳಿಗೆ ಶರಣು ೨೭

ಸುಮನಸರು ಹೃನ್ಮನದಿ ಧೇನಿಸುವ ಕಾಂಚನ
ವಿಮಾನದಲಿ ಬೆಳಗುತಿಹ ಶ್ರೀ ಶ್ರೀನಿವಾಸನಿಗೆ ಶರಣು ೨೮

ಬಗೆ ಬಗೆ ಭಕ್ತರಪರಾಧಗಳ ಹರಿಸೆ
ಭೂಗಿರಿಯ ಸೇರಿದ ಶ್ರೀಹರಿಗೆ ಶರಣು ೨೯

ವಾರಿಯೊಳಗ್ಯೋಲಾಡಿ ಶ್ರೀಶೈಲದೊಳು ನಿಂ-
ತ ಶ್ರೀಲೋಲನಾಗಿರ್ಪಗೆ ಶರಣು ೩೦

ಬೆಟ್ಟ ಬೆನ್ನಲಿ ಹೊತ್ತು ಮೆಟ್ಟಿ ಈ ಗಿರಿಯನ್ನು
ಶೇಷ್ಠನೆನಿಸಿದ ದಿಟ್ಟ ಮೂರುತಿಗೆ ಶರಣು ೩೧

ಧರೆಯ ಕೆದರೀ ಬಂದು ಗಿರಿಯ ವರಹನ ಬೇಡಿ
ಮರುಳುಮಾಡಿದ ಮಾಯಾರಮಣನಿಗೆ ಶರಣು ೩೨

ತರಳರೂಪವ ಕೆಡಿಸಿ ಗಿರಿಯ ಹುದರಯೊಳಡಗಿ
ಸುರಜೇಷ್ಠನೆಂದೀಗ ಪೂಜೆ ಗೊಂಬುವಗೆ ಶರಣು ೩೩

ವಟಪತ್ರಶಾಯಿ ನೀ ವಟುವಾಗಿ ಬೇಡಿ ಭ-
ವಾಟವಿಯ ದಾಟಿಸಲು ನಿಂದವಗೆ ಶರಣು ೩೪

ಪೆತ್ತಮಾತೆಯ ಹರಿಸಿ ಮೆತ್ತನಿಲ್ಲಿಗೆ ಬಂದು
ಉತ್ತಮಾಗತಿಪ್ರದ ಸರ್ವೋತ್ತಮಗೆ ಶರಣು ೩೫

ಕ್ಷಿತಿಸುತೆಯ ಮಾತನು ಹಿತದಿ ಪಾಲಿಸೆ ವೇದ-
ವತಿಯ ಪತಿಯಾಗಿ ನಿಂದವಗೆ ಶರಣು ೩೬

ಗುಟ್ಟಾಗಿ ಪಾಲ್ಕುಡಿದು ಪೆಟ್ಟಿನಾ ನೆಪದಲ್ಲಿ
ದೃಷ್ಟಿಗೋಚರನಾದ ಬೆಟ್ಟದೊಡೆಯನಿಗೆ ಶರಣು ೩೭

ಉತ್ತಮಾಸ್ತ್ರೀಯರಿಗೆ ನಾಚಿ ಬತ್ತಲೆಯಾಗಿ
ಹುತ್ತದೊಳು ಅಡಗಿಯೆ ಮೆರೆದವಗೆ ಶರಣು ೩೮

ಸಿರಿಯ ಹಯವನು ಮಾಡಿ ಚರಿಸಿ
ಗಿರಿಯೊಳುಹಯವ ಅರಸಿಯಿಂದ
ಹರಿಸಿಕೊಂಡವನಿಗೆ ಶರಣು ೩೯

ಹಿರಣ್ಯಗರ್ಭನ ಜನಕ ಸನ್ಮಹಿಯ ಸನ್ನಿಧಿಯ
ಕನಕಮಯಕವಾಟಕ್ಕೆ ಶರಣು ೪೦

ತಟಿಕ್ಕೋಟಿನಿಭ ಪೂರ್ಣ ಸಂಪೂರ್ಣ ಲಕ್ಷಣ
ಸನ್ಮಾಂಗಳಾ ಸುಂದರ ಮೂರ್ತೇ ತವ ಶರಣು ೪೧

ಪ್ರಹ್ಲಾದ ನಾರದ ವಸುಋಷಿಗಂಧರ್ವಾದಿ
ಮುಕ್ತಾಮುಕ್ತಗಣ ವಂದಿತಾ ತವ ಶರಣು ೪೨

ನಂದಸುನಂದನ ಜಯವಿಜಯಾದಿ ಪಾ-
ರ್ಷದಯುಕ್ತ ಶ್ರೀ ವಿರಿಂಚಿಶೇಷಶಕ್ರಾದಿ
ಸಂಸೇವ್ಯಮಾನ ತವ ಶರಣು ೪೩

ಸರ್ವಾಂಗುಳ್ಯಂಗುಷ್ಠದಳ ವಿಲಸಿತ ಸತ್ ಪಾದ-
ಪಂಕಜ ಧ್ವಜ ವಜ್ರಾಂಕುಶಾದಿ ಸುಚಿಹ್ನ ಚಿಹ್ನಿತ ತವ ಶರಣು ೪೪

ಚಾರು ಜಾನುಯುಗ ಜಂಘೆಯುಗಳ ಸಂಯುಕ್ತ ತುಂಗ
ಗುಲ್ಫಾರುಣನಖ ಧೃತಾ ದೀಧಿತಿಯುಕ್ತ ತವ ಶರಣು ೪೫

ಕಂಬುಕಂಠ ನಿಮ್ನನಾಭಿವಳಿ ಮತ್ಪಲ್ಲವೋದರ
ಬೃಹತ್ ಕಟಿತಟಶ್ರೋಣಿ ಕರಭೋರು ದ್ವಯಾನಿಶ್ರ ತವ ಶರಣು ೪೬

ವಿಭ್ರಾಜಮಾನ ಶ್ರೀವತ್ಸ ವಕ್ಷಕೌಸ್ತುಭ
ವೈಜಯಂತಿ ವನಮಾಲ ತವ ಶರಣು ೪೭

ಪ್ರಲಯ ಪೀವರಭುಜ ತುಂಗಂಶೋರಸ್ಥ
ಲಾಶ್ರಯ ತವ ಶರಣು ೪೮

ಅನರ್ಘ್ಯರತ್ನ ಮೌಕ್ತಿಕವ್ರಾತ ಕಿರೀಟ ಕಟಕಾಂಗದ
ಕಟಿಸೂತ್ರ ಬ್ರಹ್ಮಸೂತ್ರ ಹಾರ ನೂಪುರ ಕುಂಡಲಾ
ನ್ವಿತ ತವ ಶರಣು ೪೯

ಚಾರುಪ್ರಸನ್ನವದನ ಮಂದಹಾಸ ನಿರೀಕ್ಷಣ ಸು-
ಭದ್ರನಾಸ ಚಾರುಸುಕರ್ಣ ಸುಕಪೋಲಅರುಣ ತವ ಶರಣು ೫೦

ಸಹಸ್ರ ಫಣಶಿರೋಮಣಿಪ್ರಭಾನ್ವಿತ ಶೇಷಶೈಲಸ್ಥ
ಘನಶ್ಯಾಮ ಪೀತಕೌಶೇಯವಾಸ ಶ್ರೀಪರಮಪುರುಷ
ಶಾಂತ ಪದ್ಮಪತ್ರಾಯತೇಕ್ಷಣ ತವ ಶರಣು ೫೧

ಅನಂತವೇದೋಕ್ತ ಮಹಿಮೋಪೇತ ಸರ್ವಸ್ವರವರ್ಣ
ಸರ್ವಶಬ್ದವಾಚ್ಯ ಪ್ರತಿಪಾದ್ಯ ಶರಣು ೫೨

ಸಚ್ಚಿದಾನಂದಾತ್ಮ ಸರ್ವಸುಗುಣೋಪೇತ ಸರ್ವ
ಹೃತ್ಕಮಲಸ್ಥಿತ ತವ ಶರಣು ೫೩

ಅಣುತ್ರ್ಯಣು ತೃಟಿಲವ ಕ್ಷಣಾದಿಕಾಲ ಮಹ-
ತ್ಕಾಲಾತ್ಮಕ ನಿತ್ಯನಿರ್ಮಲಮೂರ್ತೇ ತವ ಶರಣು ೫೪

ಸೃಷ್ಟ್ಯಾದ್ಯಷ್ಟ ಕರ್ತೃಕ ಶಿಷ್ಟ ಶ್ರೀ ಪರ
ಮೇಷ್ಟಿವಂದಿತ ತವ ಶರಣು ೫೫

ವಿಶ್ವ ತೈಜಸ ಪ್ರಾಜ್ಞ ತುರ್ಯಾ
ದ್ಯಷ್ಟರೂಪಾತ್ಮಕ ತವ ಶರಣು ೫೬

ಭಯಕೃತ್ ಭಯಹಾರಿ ಭಕ್ತಜನಕಾಧಾರಿ
ಕಂಸಾರಿ ಮುರಾರಿ ಶ್ರೀಹರಿಯೆ ಶರಣು ೫೭

ಭವರೋಗಭೇಷಜ ಭಕ್ತಜನಬಂಧೋ
ಮುಚುಕುಂದವರದ ಗೋವಿಂದ ಶರಣು ೫೮

ಮುಕ್ತಾಮುಕ್ತಾಶ್ರಯ ಭಕ್ತಜನಸಂರಕ್ಷಣಾ
ವ್ಯಕ್ತಾವ್ಯಕ್ತ ಮಹಿಮ ತವ ಶರಣು ೫೯

ವ್ಯಾಪ್ತ ಜಗದಾದ್ಯಂತ ನಿರ್ಲಿಪ್ತ
ತತ್ತದಾಕಾರ ಜಗದಾಪ್ತ ಶರಣು ೬೦

ಚೇತನಾಚೇತನ ವಿಲಕ್ಷಣ ಸ್ವಗತಭೇದವಿವ-
ರ್ಜಿತ ಪತಿತಪಾವನಮೂರ್ತೇ ತವ ಶರಣು ೬೧

ಕ್ಷರಾಕ್ಷರ ಪರುಷಪೂಜಿತ ಪಾದ
ಪುರಾಣಪುರುಷೋತ್ತಮನೆ ಶರಣು ೬೨

ರವಿಕೋಟಿಕಿರಣ ರತ್ನಕನಕಮಯ ಮುಕು-
ಟಾನ್ವಿತ ತವಶಿರಸ್ಸಿಗೇ ತವ ಶರಣು ೬೩

ಇಂದುಮಂಡಲಭಾಸ ಮಂದಸ್ಮಿತ
ಸುಂದರಾನಂದ ಆನನಕೆ ಶರಣು ೬೪

ಲೋಲ ವಿಶಾಲಫಾಲ ಕಸ್ತೂರೀತಿಲಕಾಂಕಿತ
ಶ್ರೀಲೋಲ ಶರಣು ೬೫

ಪೂವಿಲ್ಲನಾ ಬಿಲ್ಲ ಪೋಲ್ವ ಹುಬ್ಬು ಕಂಜ –
ದಳದೋಲ್ ಚಂಪಕಾಮುಗುಳಿಗೆಣೆನಾಸಿಕಕೆ ಶರಣು ೬೬

ಕನಕ ರತುನಮಣೀಖಚಿತ ಮಕರ
ಕರ್ಣಕುಂಡಲಾನ್ವಿತ ತವ ಕರ್ಣಕ್ಕೆ ಶರಣು ೬೭

ಅಕುಟಿಲರ ನಿಷ್ಕಂಟಕ ಶ್ರೀ ವೇಂಕಟೇಶಾ ನಿನ್ನ
ಶ್ರೀಕಂಠದ ಕೌಸ್ತುಭಾಭರಣಯುಕ್ತ ಕಂಠಕ್ಕೆ ಶರಣು ೬೮

ಅಜಭವಾದಿಗಳ ಭುಜಬಲನು ನೀನು
ಭುಜಗಭೂಷಣ ಬಾಹುಪತಿಯುಕ್ತ ತವ
ಭುಜಯುಗಕ್ಕೆ ಶರಣು ೬೮

ನಕ್ರಸಂಹಾರಿ ಹಾರಿ ಜಗಚ್ಚಕ್ರ ನಿನ್ನದು ತ್ರಿ-
ವಿಕ್ರಮನೆ ಕರಗತ ಚಕ್ರ ಶಂಖಕ್ಕೆ ಶರಣು ೭೦

ಕುಕ್ಷಿಯೊಳು ಬ್ರಹ್ಮಾಂಡ ಕೋಟಿಯನು ಇಟ್ಟಂಥಾ
ಲಕ್ಷ್ಮೀ ವಕ್ಷಸ್ಥಳ ಶ್ರೀವತ್ಸಕ್ಕೆ ಶರಣು ೭೧

ಕನಕ ರತ್ನದ ಹಾರ ಪದಕ ಮೌಕ್ತಿಕಹಾರ
ಕಲ್ಹಾರಪುಷ್ಪಮಾಲಾಯುಕ್ತ ತವ ಕುಕ್ಷಿಗೇ ಶರಣು ೭೨

ಪಟ್ಟೆಪೀತಾಂಬರ ಉತ್ತರೀಯವು ತೋರ ನೀಳ
ತ್ರಿವಳಿಹಾರ ಭಾವಕ್ಕೆ ಶರಣು ೭೩

ರತುನದಳಾಯುಕ್ತ ಬ್ರಹ್ಮಸೂತ್ರ ನಿ-
ರುತ ಪದ್ಮಸಂಭವ ಬಂದ ಪದ್ಮನಾಭಿಗೆ ಶರಣು ೭೪

ಇಟ್ಟ ರತ್ನಾಪಟ್ಟಿ ತೊಟ್ಟ ಗೆಜ್ಜೆಯ ಪಟ್ಟಿ
ಇಟ್ಟು ಮೆರೆಯುವ ದಿಟ್ಟಕಟಿಯಭಾಗಕ್ಕೆ ಶರಣು ೭೫

ಉಟ್ಟ ಪೀತಾಂಬರ ನೆರಿಗೆ ತಿದ್ದಿದ ತೆರನೆಟ್ಟನಿಂತಿಹ
ಬಟ್ಟು ಜಾನು ಜಂಘೆ ಕಟಿಗೆ ಶರಣು ೭೬

ಝುಗಝುಗಿಪ ರತುನ ವೈಜಯಂತಿಯ ಧೃತಕ-
ಟಿಕರತ್ನಾಭರಣಯುಕ್ತ ಕರಯುಗ್ಮಕ್ಕೆ ಶರಣು ೭೭

ಪರಿ ಪರಿ ಅಭಯವ ಭಕ್ತರಿಗೆ ಕೊಡುವ ಕನಕರತ್ನಾ-
ಭರಣಯುಕ್ತ ಹಸ್ತಕ್ಕೆ ಶರಣು ೭೮

ಗೆಜ್ಜೆ ಕಾಲಂದಿಗೆ ಸಜ್ಜುಗೊಂಡಿಹ ನಿನ್ನ
ಅಬ್ಜಭವಾರಾಧ್ಯ ತವ ಪಾದಕ್ಕೆ ಶರಣು ೭೯

ಧ್ವಜವಜ್ರಾಂಕುಶಯುಕ್ತ ಅಬುಜಾಂಡ ಕಟಹ
ಭೇದಿಸಿದ ರವಿಕೋಟಿಭಾಸತವ ಪಾದನಖಕ್ಕೆ ಶರಣು ೮೦

ಜಲದೊಳು ಹೋರಾಡಿ ಭವಜಾಲದಲ್ಲಿ ಬಿದ್ದವರ
ಸುಲಭದಿಂದೆತ್ತಲು ನಿಂದ ಸಿರಿವಲ್ಲಭಗೆ ಶರಣು ೮೧

ಕಮಠರೂಪದಿ ಭೂಮಿ ತಂದು ಭಕುತರ
ಕರ್ಮಭಾರ ಹರಿಸಿ ಪೊರೆವ ಧರ್ಮಮೂರುತಿಗೆ ಶರಣು ೮೨

ವರಹ ಮೂರುತಿ ನಿನ್ನ ಇರವನ್ನೆ ಮರೆಮಾಡಿ
ವರಹ ಕೊಟ್ಟವರಿಗೆ ದರುಶನವ ಕೊಡುವವಗೆ ಶರಣು ೮೩

ನಂಬಿಹರ ಬೆಂಬಲನು ಎಂತೆಂದು ಸ್ಥಂಭದಲಿ
ಬಂದು ಗಿರಿಯಲಿ ನಿಂದ ಗೋವಿಂದಗೆ ಶರಣು ೮೪

ಬೇಡುವರ ಕಷ್ಟ ನೋಡಿ ಅಭಯವ ನೀಡಿ
ಬಿಡದೆ ರಕ್ಷಿಪ ಬಡವರಾಧಾರಿ ಶರಣು ೮೫

ದುಷ್ಟಭೂಪರುಗಳ ಅಟ್ಟುಳಿಯ ಹರಿಸಿ ನಿ-
ರ್ದುಷ್ಟಫಲಪ್ರದ ಶ್ರೀ ಬೆಟ್ಟದೊಡೆಯನಿಗೆ ಶರಣು ೮೬

ಶರಧಿಗೆ ಸೇತುವೆಯ ಕಟ್ಟಿ ದಶಶಿರನ ವಧಿಸಿದ
ಕರವೀರಪುರ ಲಕ್ಷ್ಮಿಯರಸನಿಗ ಶರಣು ೮೭

ಗೋಕುಲದ ಕ್ರೀಡೆ ಸಾಕಾಗದಲೆ ಬಂದು ಈ
ಆಕಾಶರಾಜನ ಜಾಮಾತನಾದವಗೆ ಶರಣು ೮೮

ಬುದ್ಧಜನರ ಅಪ್ರಬುದ್ಧರನೆ ಮಾಡಿ ಜಗ
ಉದ್ಧರಿಸಲು ನಿಂದ ಶುದ್ಧಮೂರುತಿಗೆ ಶರಣು ೮೯

ಹರಿಯ ಬೆನ್ನೇರಿ ಭೂಭಾರವನೆ ಹರಿಸಿ ಮೇಲು-
ಗಿರಿಯಲಿ ನಿಂದ ಶ್ರೀಹರಿಗೆ ಶರಣು ೯೦

ವಾಸುಕೀ ಶ್ವೇತಾದಿ ಸರ್ಪಜಾತಿಗಳುಳ್ಳ ಪಾತಾಳಲೋಕ
ಕಾಶ್ರಯ ತವಪಾದಮೂಲಕ್ಕೆ ಶರಣು ೯೧

ಅಶ್ವಗಜ ಉಷ್ಟ್ರಾದಿ ಪ್ರಾಣಿಗಳಿಗಾಗರ
ರಸತಳಲೋಕಕಾಶ್ರಯ ತವ ಪಾದಾಗ್ರಕ್ಕೆ ಶರಣು ೯೨

ತಕ್ಷಕ ಕಾಳಿ ಸುಷೇಣಾದಿ ಉರಗಾಧಿಪರು ವಿಹರಿಸುವ
ಮಹಾತಳಲೋಕಕಾಶ್ರಯ ತವ ಪಾದಗುಲ್ಫಕ್ಕೆ ಶರಣು ೯೩

ಅನಲಾಕ್ಷವೈರಿ ತ್ರಿಪುರರು ವಿಹರಿಸುವ ತಳಾ-
ತಳಲೋಕಕಾಶ್ರಯ ತವ ಜಂಘದ್ವಯಕ್ಕೆ ಶರಣು ೯೪

ವಾಮನನ ಪೂಜಿಸಿ ಕೃಷ್ಣಂಗೆ ಮಸ್ತಕವಿತ್ತ ಧನ್ಯ
ಬಲೀಂದ್ರ ನಿಂತ ಸುತಳಲೋಕಾಶ್ರಯ
ತವ ಜಾನುಗಳಿಗೆ ಶರಣು ೯೫

ಬಲನೆಂಬ ದನುಜನಿಂ ಪುಟ್ಟಿದ ಮಾಯ್ಗಳು ಕ್ರೀಡಿಪ ವಿ-
ತಳಲೋಕಕಾಶ್ರಯ ತವ ಊರುದ್ವಯಗಳಿಗೆ ಶರಣು ೯೬

ಮೃಗ ಪಶುಜಾತಿ ದೈತ್ಯದಾನವ ಕದ್ರುತುಂ
ಬಿಕೊಂಡಿಹ ಅತಳಲೋಕಕಾಶ್ರಯ ತವ ಶ್ರೋಣಿ
ದೇಶಕ್ಕೆ ಶರಣು ೯೭

ಕರ್ಮಸಾಧನ ಮಾಳ್ಪ ದಿವಿಜದಾನವ ಮನುಜ ನವಖಂಡ
ಭೂಶರಧಿ ಗಿರಿ ನದಿಯುಕ್ತ ಜಂಬೂದ್ವೀಪದಿಂದಾಕಾರ ಅವನಿ
ಉತ್ಪಾದಕ ತವ ಮಧ್ಯಕ್ಕೆ ಶರಣು ೯೮

ಧ್ರುವ ದಿಕ್ಪಾಲಕರು ಋಷಿ ಸಪ್ತನವಗ್ರಹರು ಸರ್ವರೋಲೈಪ
ಸುವರ್ಲೋಕಕಾಶ್ರಯ ತವ ನಾಭಿಕಮಲಕ್ಕೆ ಶರಣು ೯೯

ಸುರನಿಕರಾದಿ ಪುರುಹೂತ ಕರಿಐರಾವತ ಶಚಿಸೂತ
ಮಾತಲಿ ನಂದನವನ ಸುಶೋಭಿತ ಸುರಲೋಕಕಾಶ್ರಯ
ತವ ಉದರಭಾಗಕ್ಕೆ ಶರಣು ೧೦೦

ಸರ್ವವೇದೋಚ್ಚಾರಗುಣಗಾನ ಮಾಳ್ಪ ಋಷಿಗಣಯುಕ್ತ
ಶಕ್ತ್ಯಾದಿ ದೇವತೆಗಳು ಚಿತ್ರ ವಿಚಿತ್ರ
ಸನಕಾದಿ ಮುನಿಗಳ ಮಹರ್ಲೋಕಾಶ್ರಯ ತವ ಕೌ
ಸ್ತುಭಭೂಷಿತ ಕಂಠಕ್ಕೆ ಶರಣು ೧೦೧

ಸದಮಲಾನಂದ ಸಾಧನದಿಂದ ಸರ್ವಗುಣ ಗಣ
ಚರಿತ ನುತಿಪ ಮುಕ್ತಜೀವರಭರಿತ ಜನ-
ಲೋಕಕಾಶ್ರಯ ತವ ದಿವ್ಯವದನಕ್ಕೆ ಶರಣು ೧೦೨

ನಿಟಲನೇತ್ರ ನಿರುತ ಸಕಲಋಷಿಗಣಯುಕ್ತ
ಭದ್ರಮೂರುತಿಯನು ಸ್ತುತಿಸುವ ತಪ
ಲೋಕಾಶ್ರಯ ತವ ಲಲಾಟಕ್ಕೆ ಶರಣು ೧೦೩

ಚತುರಾನನು ಚತುರ ಮೂರುತಿಯನು ಸ್ತುತಿಸುತ್ತ
ಚತುರದಶಲೋಕಾಧಿಪತ್ಯವನ್ನು ಮಾಳ್ಪ ಸತ್ಯ
ಲೋಕಕಾಶ್ರಯ ತವ ಶಿರಸ್ಸಿಗೆ ಶರಣು ೧೦೪

ಶೀರ್ಷಮೊದಲು ಪಾದಮೂಲ ಮಧ್ಯದ
ಸರ್ವಮಂಗಳಾಂಗೋಪಾಂಗಕ್ಕೆಲ್ಲ ಶರಣು ೧೦೫

ತತ್ತದಂಗಾಶ್ರಿತ ತತ್ವರಂತರ್ಯಾಮಿ ತತ್ತತ್
ಜಗತ್ಕಾರ್ಯಕಾರಣರೂಪಕ್ಕೆ ಶರಣು ೧೦೬

ಪಾಹಿ ಶ್ರೀ ಜಯತೀರ್ಥವಾಯುವಂತರ್ಗತ
ಕೃಷ್ಣಾತ್ಮಕ ನವನೀತಧರ ತಾಂಡವಕೃಷ್ಣವಿಠಲ ತವ ಶರಣು ೧೦೭

ಪಾಹಿ ಶ್ರೀ ವೇಂಕಟೇಶಾತ್ಮಕ ಸಿರಿ ಉರಗಾದ್ರಿ
ವಾಸವಿಠಲ ತವ ಶರಣು ೧೦೮

ಪಾಹಿಮಾಂ ಪಾಹಿ ಶ್ರೀ ವೇಂಕಟೇಶಾಭಿನ್ನ
ಉರಗಾದ್ರಿದಾಸವಿಠಲ ತವ ಶರಣು ಶರಣೂ ೧೦೯

## ೯೨

ಶ್ರೀ ಭಾಗವತ ಮಹಿಮೆ ಬಣ್ಣಿಸಲಳವೇ ಪ

ಈ ಭವಶರಧಿಗೆ ಸುನಾವೆಯಂತಿಹುದಯ್ಯ ಅ.ಪ

ವೇದ ಶಾಸ್ತ್ರಾದಿ ಅನೇಕ ಧರ್ಮಗಳಲ್ಲಿ
ಈ ದೇಹ ಸಾಧನವಾದ ಸದ್ಧರ್ಮಗಳು
ಆ ಪರಾಶರ ಸೂನು ಶ್ರೀ ಮನ್ನಾರಾಯಣ
ಆಪದ್ಬಾಂಧವನಲ್ಲದಿನ್ನಿಲ್ಲವೆಂಬುವಾ ೧

ಪ್ರಥಮ ಸ್ಕಂದದಲಿ ಶ್ರೀ ಪರಮಾತ್ಮನ ಜ್ಞಾನಕೆ
ಪಥವೆ ಭಕ್ತಿ ವೈರಾಗ್ಯದ ವಿವರಣೆಯು
ಮತ್ತೆ ಶಾಪದಲಿ ನಾರದನ ವಿಷಯವ ಪೇಳ್ವ ೨

ದ್ವಿತೀಯ ಸ್ಕಂದದಿ ಪರೀಕ್ಷಿತ ಶುಕ ಸಂವಾದ
ಶ್ರೀಹರಿಯ ಅವತಾರಗಳ ವರ್ಣನೆಗಳು
ಮತ್ತೆ ಮಹದಾದಿ ತತ್ವ ಸೃಷ್ಟಿಕ್ರಮ
ಇತ್ಯಾದಿ ಪುಣ್ಯಚರಿತಗಳನು ಪೇಳ್ವ ೩

ಆ ಬೊಮ್ಮಂಡದಿಂದೆ ಚತುರ್ಮುಖನ ಸೃಷ್ಟಿಯು
ವಿಭಾಗವ ಪೇಳ್ವ ಸೂಕ್ಷ್ಮ ಪರಮಾಣು
ಅಬ್ದಾದಿ ಕಾಲಗಳು ವ್ಯಷ್ಟಿ ಭೂತೋತ್ಪತ್ತಿ
ಶ್ರೀ ವರಹ ರೂಪದಿ ತೋರಿದ ಮಹಿಮೆಯಾ ೪

ವರಹಾವತಾರದೀ ಧರಣೀಯ ತಂದಂಥ
ಪುರುಷ ಸ್ತ್ರೀಯರ ಸೃಷ್ಟಿ ಸರ್ವಸೃಷ್ಟಿಯು ಮತ್ತೆ
ಸ್ವಾಯಂಭುಮನು ಶತರೂಪೆಯರ ಚರಿತೆ
ಶ್ರೀ ಕಪಿಲ ದೇವಹೂತಿಯ ಸಂವಾದವ ಪೇಳ್ವ ೫

ಚತುರ ಸ್ಕಂದದಿ ನವಬ್ರಹ್ಮರ ಉತ್ಪತ್ತಿ
ದಕ್ಷಾಧ್ವರಭಂಗ ಭಕ್ತಧ್ರುವಚರಿತೆ
ಉಚಿತವಾದ ಪೃಥು ಸಾರ್ವಭೌಮರಿಂದ
ಪ್ರಾಚೀನ ಬರ್ಹಿಷರ ವೃತ್ತಾಂತವನು ಪೇಳ್ವ ೬

ಪಂಚಮ ಸ್ಕಂದದಿ ಪ್ರಿಯವ್ರತ ನಾಭಿ ನೃಪರ
ಋಷಭ ಚರಿತೆಗಳು ಪುತ್ರ ಭರತನ ಕಥೆಯು
ಅಚಲಲೋಕ ದ್ವೀಪಾದ್ರಿ ನದ ನದಿಗಳ ಸೃಷ್ಟಿ
ಜ್ಯೋತಿಶ್ಚಕ್ರ ನರಕ ಪಾತಾಳಗಳ ಪೇಳ್ವ ೭

ಷಷ್ಠ ಸ್ಕಂದದೊಳು ದಕ್ಷ ಜನ್ಮವು
ಅವರ ಕನ್ಯೆಯರಿಂದ ದೇವ ಮಾನವ ದಾನವ
ದುಷ್ಟಮೃಗ ಪಕ್ಷೀ ಪನ್ನಗಾದಿ ಜನನವು
ವೃತ್ರನ ಜನನ ಮರಣಗಳೆಲ್ಲ ಪೇಳ್ವ ೮

ಸಪ್ತಮ ಸ್ಕಂದದಿ ದಿತಿಪುತ್ರರ ಜನನ
ಹಿರಣ್ಯಕಶಿಪುವಿನ ದುರುಳತನವು
ಮತ್ತೆ ಧೀವರನಾದ ಪ್ರಹ್ಲಾದರಾಯನಿಂ ವ-
ರ್ಣಿತಮಾದ ಶ್ರೀಹರಿಯ ಮಹಿಮೆಯ ಪೇಳ್ವ ೯

ಅಷ್ಟಮ ಸ್ಕಂದದಿ ಮನ್ವಂತರ ವಿವರವು
ಗಜರಾಜನಿಗೆ ಮೋಕ್ಷ ಮನ್ವಂತರ ಅವತಾರ
ದಿಟ್ಟ ಕಮಠ ಮತ್ಸ್ಯನರಹರಿ ವಾಮನ
ಹಯವದನನವತಾರ ಸುಧೆಯಿತ್ತ ಮಹಿಮೆಯ ೧೦

ನವಮ ಸ್ಕಂದದಿ ನೃಪವಂಶಾನು ಚರಿತವು
ಇಕ್ಷ್ವಾಕುಸುತ ಸುದ್ಯುಮ್ನರಾಜನ
ಜನನ ದಿವಾಕರ ವಂಶಾನು ಕಥನಗಳು
ಇಳೋಪಾಖ್ಯಾನವ ತಾರೋಪಾಖ್ಯಾನವ ಪೇಳ್ವ ೧೧

ಸೂರ್ಯವಂಶ ಶಶಾದರಾಜನ ವೃತ್ತ ಸುಕನ್ಯ
ಶರ್ಯಾತಿ ಕಾಕುಸ್ಥ ಖಟ್ವಾಂಗ ಧೀರ ಮಾಂ-
ಧಾತೃ ಸೌಭರಿ ಸಗರರ ಚರಿತೆ ಪರಮಾತ್ಮ
ರಘುರಾಮನ ಚರಿತೆಗಳನು ಪೇಳ್ವ ೧೨

ಮತ್ತೆ ನಿಮಿಯ ದೇಹತ್ಯಾಗದ ವಿಷಯವು
ಜನಕನೃಪ ಭೃಗುರಾಮನ ಚರಿತವು
ಉತ್ತಮ ಚಂದ್ರವಂಶದ ನಹುಷಾಸುತ ಯ-
ಯಾತಿ ಶಂತನುಯದು ಚರಿತೆಗಳುಳ್ಳ ೧೩

ದಶಮ ಸ್ಕಂದದಿ ಹರಿ ಯದುವಂಶದಿ ಜನಿಸಿ
ಶಿಶುಲೀಲೆಗಳ ತೋರಿ ಅಸುರಿ ಪೂತನಿ ಕೊಂದು
ಅಸುರ ಶಕಟ ತೃಣ ಬಕ ವತ್ಸ ಮೊದಲಾದ
ಅಸುರಭಂಜಕ ಹರಿಯು ಮೆರೆದ ಮಹಿಮೆಯ ಪೇಳ್ವ ೧೪

ಮಾಯಾ ಮಹಿಮಧೇನು ಪ್ರಲಂಬಕರಾ ಕೊಂದು
ಕಾಡುಕಿಚ್ಚಿನಿಂದ ಗೋಪಾಲರ ಕಾಯ್ದು
ನೋಯಿಸಿ ಕಾಳಿಯ ಬಾಯ ಬಿಡಿಸಿ
ಕಾಳಿಮರ್ದನ ಕೃಷ್ಣ ನಾಡಿದ ೧೫

ಗೋಪಸ್ತ್ರೀಯರ ಚರಿತ ಗೋವರ್ಧನೋದ್ಧಾರಣ
ಶಂಖಚೂಡವಧೆ ಅರಿಷ್ಟಕೇಶಿಯ ನಿಧನ
ಭೂಪನೆದುರಿನಲ್ಲಿ ಜಟ್ಟಿಮುಷ್ಟಿಕರ ಕೊಂದು
ಕಂಸವಧೆಯ ಮಾಡಿ ಗುರುಸುತನನು ತೋರ್ದ ೧೬

ಜರೆಯ ಸೇನೆಯ ಜಯಿಸಿ ಕಾಲಯವನರ ಕೊಂದು
ಪಾರಿಜಾತವ ತಂದು ಸಿರಿ ರುಕ್ಮಿಣಿಯ ಪಡೆದು

ಹರಿಸಿ ಬಾಣನ ತೋಳ ನರಕಾಸುರನ ಗೆದ್ದು
ಸೆರೆಯ ಬಿಡಿಸಿ ರಾಜಕನ್ಯೆಯರನು ಕಾಯ್ದು ೧೭

ಶಿಶುಪಾಲ ದಂತವಕ್ತ್ರ ಪೌಂಡ್ರಕ ಸಾಲ್ವ ಶಂಬರ
ದ್ವಿವಿಧ ಮುರಾಸುರರೆಲ್ಲರ ನಾಶಪಡಿಸಿ
ಕಾಶೀಪುರವ ದಹನ ಮಾಡಿ ಪಾಂಡವರನ್ನು ಕಾಯ್ದು
ಪರಮ ಮಹಿಮೆಯ ಪೇಳ್ವ ೧೮

ಭೂಭಾರನಿಳುಹಲು ಕುರು ಪಾಂಡವರೊಳು
ಕ್ರೂರಯುದ್ಧವ ಕುರುಕ್ಷೇತ್ರದಿ ಮಾಡಿಸಿ
ಅಭಯದಾಯಕ ಪಾಂಡುನಂದನರಿಂದ
ಸದ್ಧರ್ಮ ಸ್ಥಾಪಿಸಿದ ಶ್ರೀಕೃಷ್ಣಚರಿತೆಯ ಪೇಳ್ವ ೧೯

ಏಕಾದಶ ಸ್ಕಂದದಿ ಯಾದವರೆಲ್ಲರು
ಭೂಸುರ ಶಾಪದಿ ಯುದ್ಧವನೆ ಮಾಡಿ
ಏಕನಾಗಿದ್ದ ಉದ್ಧವನಿಗೆ ಬೋಧಿಸಿ
ಲೋಕಾವನ್ನೈದು ನಿಜಧಾಮಕ್ಕೆ ತೆರಳಿದ ೨೦

ದ್ವಾದಶಸ್ಕಂದದೊಳು ಯುಗಭೇದ ಪ್ರಳಯಗಳು
ನಿತ್ಯನೈಮಿತ್ತಿಕ ಪ್ರಾಕೃತಗಳ ಸೃಷ್ಟಿ
ವೇದ ವಿಭಾಗವು ಹರಿರಾತನ ಅಂತ್ಯ
ಮಾರ್ಕಂಡೇಯ ಚರಿತ ಸೂರ್ಯಗಣಗಳ ಪೇಳ್ವ ೨೧

ಹರಿಲೀಲೆ ಅವತಾರಚರಿತೆಯ ಕೇಳುತ
ಮರವೆಯಿಂದಾಗಲಿ ರುಜೆಯಿಂದಾಗಲಿ
ಹರಿಯೇನಮಃ ಎಂದುಚ್ಚರಿಸಿದ ಮಾತ್ರದಿ
ದುರಿತಪಾಪವು ನಾಶವಾಗಿ ಪೋಗುವುದಯ್ಯ ೨೨

ಹರಿಯ ಸ್ಮರಣೆಯ ಮಾಡಿದರು ಕೇಳಿದರು
ಬಿರುಗಾಳಿಗೆ ಸಿಕ್ಕು ಮೋಡ ಓಡುವಂತೆ

ದುರಿತವ್ಯಾಧಿಗಳು ತ್ವರಿತದಿ ಓಡುವುವು
ಹರಿಸಂಬಂಧವಲ್ಲದ ಮಾತೆಲ್ಲವೂ ವ್ಯರ್ಥವೋ ೨೩

ಯಾಮ ಯಾಮಕೆ ಈ ಭಾಗವತವ ಪಠಿಸೆ
ಭಾಗವತದ ಸಪ್ತಾಹದ ಪುಣ್ಯಫಲವು
ಭಾವ ಭಕುತಿಯು ಹುಟ್ಟಿ ಶ್ರೀ ವೇಂಕಟೇಶನ
ಪಾವನವಾದ ಶ್ರೀಪಾದವ ಸೇರುವ ೨೪

# ಪ್ರಸ್ತಾವನೆ

ಈ ಕೀರ್ತನೆಗಳ ಕರ್ತೃಗಳು ರಘುರಾಮ ವಿಠಲಾಂಕಿತ ಶ್ರೀ ಸುಬೋಧ ರಾಮರಾಯರು. ಹರಿದಾಸ ಸಾಹಿತ್ಯದ ಅಲ್ಪ ಪರಿಚಯವಿರುವ ಯಾರೂ ಸಹ ಅವರ ಹೆಸರನ್ನು ಕೇಳದಿರಲು ಸಾಧ್ಯವಿಲ್ಲ. ಅವರನ್ನು ಪಾವಂಜೆ ಗುರುರಾಯರು, ಗೋರಬಾಳ ಹನುಮಂತ ರಾಯರುಗಳ ಜೊತೆಗೆ ಕರ್ನಾಟಕ ಹರಿದಾಸ ಸಾಹಿತ್ಯದ ಸಂಗ್ರಹಣೆ, ಸಂಪಾದನೆ ಮತ್ತು ಪ್ರಕಟಣೆಗಳ ಆದ್ಯ ಪ್ರವರ್ತಕರಲ್ಲೊಬ್ಬರೆಂದರೆ ತಪ್ಪಾಗಲಾರದು. ರಾಮರಾಯರ ಹರಿದಾಸ ಕೀರ್ತನ ತರಂಗಿಣಿ ಮಾಲಿಕೆಯಲ್ಲಿ ಪ್ರಕಟವಾದ ಶ್ರೀಪಾದರಾಜರು ಮೊದಲಾದ ೯ ಸಂಪುಟಗಳು ಇಂದಿಗೂ ಸಹ ಆಕರ ಗ್ರಂಥಗಳಾಗಿವೆ. ಅವರ ಜೀವನವನ್ನು ಕುರಿತು ಅನೇಕ ಲೇಖನಗಳು, ಪುಸ್ತಕಗಳು ಈಗಾಗಲೇ ಪ್ರಕಟವಾಗಿವೆ. ಅವರ ಬಹುಮುಖ ಪ್ರತಿಭೆ, ಸೇವೆ ಸಲ್ಲಿಸಿದ ಕಾರ್ಯಕ್ಷೇತ್ರಗಳು, ಸಾಧನೆ ಇವುಗಳನ್ನು ವಿವರಿಸಲು ಒಂದು ದೊಡ್ಡ ಗ್ರಂಥವನ್ನೇ ಬರೆಯಬೇಕಾಗುತ್ತದೆ. ಆದರೆ ಇಲ್ಲಿ ಅವುಗಳ ಸೂಕ್ಷ್ಮ ಪರಿಚಯವನ್ನು ಮಾತ್ರ ಮಾಡಲು ಪ್ರಯತ್ನಿಸಿದೆ.

ಮೂಲತಃ ಮೈಸೂರಿನವರಾಗಿದ್ದ ಹನುಮಂತಾಯರು ಮತ್ತು ಭಾರತೀಬಾಯಿ ಎಂಬ ಮಾಧ್ವ ಬ್ರಾಹ್ಮಣ ದಂಪತಿಗಳ ಮಗನಾಗಿ ರಾಮರಾಯರು ಚಿಕ್ಕಮಗಳೂರಿನಲ್ಲಿ ೧೮೯೦ರ ಗಣೇಶ ಚೌತಿಯಂದು ಜನಿಸಿದರು. ಯಾವ ನಿಗದಿತವಾದ ಉದ್ಯೋಗವಾಗಲೀ, ಆದಾಯವಾಗಲೀ ಇಲ್ಲದಿದ್ದ ಹನುಮಂತರಾಯರು ಉದರಂಭರಣಕ್ಕಾಗಿ ತಮ್ಮ ದೊಡ್ಡ ಸಂಸಾರ ಸಮೇತ ಆಗಿಂದಾಗ್ಗೆ ಊರಿಂದ ಊರಿಗೆ ಹೋಗಬೇಕಾಗುತಿತ್ತು. ರಾಮರಾಯರು ಚಿಕ್ಕವರಾಗಿರುವಾಗಲೇ ತಾಯಿ-ತಂದೆಗಳು ದಾರುಣ ಪರಿಸ್ಥಿತಿಯಲ್ಲಿ ಅಸುನೀಗಿದರು. ಇವುಗಳಿಂದಾಗಿ ರಾಯರ

ವಿದ್ಯಾಭ್ಯಾಸ ಕುಂಟಿಕೊಂಡೇ ಮುಂದುವರಿಯಿತು. ಕೊನೆಗೆ ಬೆಂಗಳೂರಿನಲ್ಲಿ ಬಂಧು ಬಳಗದವರ ನೆರವಿನಿಂದ ಶಾಲೆ ಸೇರಿ ೧೯೦೯ರಲ್ಲಿ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಉತ್ತೀರ್ಣರಾದರು. ನಂತರ ಹೊನ್ನಾಳಿಯಲ್ಲಿ ಕೆಲವು ಕಾಲ ಸರಕಾರೀ ಕಚೇರಿಯೊಂದರಲ್ಲಿ ಗುಮಾಸ್ತೆಯಾಗಿ ಕೆಲಸ ಮಾಡಿದರು. ಚಿಂತನಶೀಲರೂ ಪರಮ ನಿಶ್ಚಲ ದೈವಭಕ್ತರೂ ಆಗಿದ್ದು ಹೊನ್ನಾಳಿಯಲ್ಲಿದ್ದಾಗ ಭಗವದ್ಗೀತೆ ಮೊದಲಾದ ಧಾರ್ಮಿಕ ಗ್ರಂಥಗಳ ಅಧ್ಯಯನ ಮಾಡಿದರು. ಸಾಹಿತ್ಯದಲ್ಲಿ ಅಭಿರುಚಿಯಿದ್ದು, ೧೯೧೧ರಲ್ಲಿ ಶ್ರೀರಾಮ ಪಟ್ಟಾಭಿಷೇಕ ಎಂಬ ಪದ್ಯ ಗ್ರಂಥ ರಚನೆ ಮಾಡಿದರು. ಆ ಕಾಲದಲ್ಲಿ ಮೈಸೂರು ಸರ್ಕಾರದ ಚೀಫ್ ಇಂಜಿನಿಯರ್ ಆಗಿದ್ದ ಕರ್ಪೂರ ಶ್ರೀನಿವಾಸರಾಯರ ದೃಷ್ಟಿಗೆ ಬಿದ್ದು, ಅವರ ಪ್ರೋತ್ಸಾಹದ ಮೇರೆಗೆ ಸ್ವಾವಲಂಬಿಗಳಾಗಿ ಜೀವನ ಮಾಡಲು ಬಯಸಿ ಸರ್ಕಾರಿ ಕೆಲಸ ಬಿಟ್ಟು ಸಣ್ಣ ಪ್ರಮಾಣದ ವ್ಯಾಪಾರ ಆರಂಭಿಸಿದರು. ಅದರಲ್ಲೂ ನಷ್ಟ ಹೊಂದಿ ಕೊನೆಗೆ ಕೆಲಸ ಹುಡುಕಲು ೧೯೧೩ರಲ್ಲಿ ಬೆಂಗಳೂರಿಗೆ ಬಂದು ನೆಲೆಸಿದರು. ಅಂದಿನಿಂದ ಕೊನೆಯವರೆಗೂ ಬೆಂಗಳೂರು ರಾಮರಾಯರ ಕಾರ್ಯಕ್ಷೇತ್ರವಾಯಿತು.

ರಾಮರಾಯರು ಬಾಲ್ಯದಿಂದಲೇ ಅನೇಕ ಕಷ್ಟ ಕಾರ್ಪಣ್ಯಗಳನ್ನು ಅನುಭವಿಸಿದ್ದರೂ ಅವರದು ಶಾಂತ ಸರಳ ಸ್ವಭಾವ. ನಿರಾಡಂಬರಿಗಳು. ಬೆಂಗಳೂರಿನ ಆರ್.ಬಿ.ಎ.ಎನ್.ಎಂ. ಶಾಲೆಯಲ್ಲಿ ಕೆಲವು ಕಾಲ ಉಪಾಧ್ಯಾಯರಾಗಿದ್ದರು. ರಾಮರಾಯರಿಗೆ ೧೯೧೮ ರಲ್ಲಿ ಶಕುಂತಲಾಬಾಯಿ ಎಂಬಾಕೆಯ ಜೊತೆಗೆ ವಿವಾಹವಾಯಿತು. ಸಂಪತ್ತಿಲ್ಲದಿದ್ದರೂ ಸುಖ ಶಾಂತಿಗಳ ಸಂತೃಪ್ತ ವೈವಾಹಿಕಜೀವನ. ಐದುಜನ ಗಂಡುಮಕ್ಕಳು ಮತ್ತು ನಾಲ್ಕುಜನ ಹೆಣ್ಣುಮಕ್ಕಳನ್ನು ಪಡೆದರು.

ರಾಮರಾಯರು ೧೯೧೫ರಲ್ಲಿ ಸುಬೋಧ ಕುಸುಮಾಂಜಲಿ ಗ್ರಂಥ ಮಾಲೆಯನ್ನು ಆರಂಭಿಸಿ, ತಮ್ಮದೇ ಆದ ಒಂದು ಮುದ್ರಣಾಲಯವನ್ನೂ ತೆರೆದರು. ಗ್ರಂಥಮಾಲೆಯಲ್ಲಿ ಸುಮಾರು ೧೪೦ ವಿಭೂತಿ ಪುರುಷ/ಸ್ತ್ರೀಯರ ಜೀವನ

ಚರಿತ್ರೆಗಳನ್ನು ಬರೆದು ಪ್ರಕಟಿಸಿರುವುದಲ್ಲದೆ, ಶ್ರೀಮನ್ಮಹಾಭಾರತ ಕಥಾಸಾರ, ಶ್ರೀರಾಮಾಯಣ ಕಥಾಸಾರ, ಶ್ರೀಮದ್ಭಾಗವತ ಕಥಾಸಾರ ಮೊದಲಾದ ಗ್ರಂಥಗಳನ್ನೂ ರಚಿಸಿದ್ದಾರೆ. ಹಿಂದೆ ಹೇಳಿದ ಅವರ ಹರಿದಾಸ ಕೀರ್ತನ ತರಂಗಿಣಿಯ ೯ ಸಂಪುಟಗಳು ಕರ್ನಾಟಕ ಹರಿದಾಸ ಸಾಹಿತ್ಯಕ್ಕೆ ಅತ್ಯಮೂಲ್ಯ ಕೊಡುಗೆಗಳಾಗಿವೆ. ರಾಮರಾಯರು ೧೯೧೮ರಲ್ಲಿ ಸುಬೋಧ ಮಾಸ ಪತ್ರಿಕೆಯನ್ನು ಪ್ರಾರಂಭಿಸಿದ್ದು ಅದು ಅವರ ಕಾಲಾನಂತರವೂ ಅವರ ಮಗ ಪ್ರಹ್ಲಾದರಾಯರಿಂದ ಮುಂದುವರೆದಿತ್ತು. ಇವುಗಳಿಂದಾಗಿ ಅವರು 'ಸುಬೋಧ ರಾಮರಾಯ'ರೆಂದೇ ಪ್ರಸಿದ್ಧರಾಗಿದ್ದಾರೆ.

ರಾಮರಾಯರು ೧೯೩೩ರಲ್ಲಿ 'ನಗುವನಂದ' ಎಂಬ ಹಾಸ್ಯ ಪ್ರಧಾನವಾದ ಮಾಸ ಪತ್ರಿಕೆಯನ್ನು ಆರಂಭಿಸಿ ಕೆಲವು ವರ್ಷಕಾಲ ನಡೆಸಿದರು. ಮಾಧ್ವ ಯುವಕ ಸಂಘವನ್ನು ೧೯೪೫ರಲ್ಲಿ ಸ್ಥಾಪಿಸಿದರು. ಅವರು ೧೯೪೮ ರಿಂದ ೧೯೫೧ರ ವರೆಗೆ ಬೆಂಗಳೂರು ನಗರ ಮುನಿಸಿಪಲ್ ಕೌನ್ಸಿಲರ್ ಆಗಿ ಸೇವೆ ಸಲ್ಲಿಸಿದ್ದಾರೆ. ಅವರಿಗೆ ಅನೇಕ ಬಿರುದುಗಳೂ, ಪ್ರಶಸ್ತಿಗಳೂ ದೊರಕಿವೆ. ಹೀಗೆ ಅನೇಕ ಕ್ಷೇತ್ರಗಳಲ್ಲಿ ನಿಸ್ವಾರ್ಥ ಅಮೂಲ್ಯ ಸೇವೆ ಸಲ್ಲಿಸಿದ ಸುಬೋಧ ರಾಮರಾಯರು ತಮ್ಮ ೮೦ನೇ ವಯಸ್ಸಿನಲ್ಲಿ ೧೪-೩-೧೯೭೦ ರ ಫಾಲ್ಗುಣ ಶುದ್ಧ ದ್ವಾದಶೀ ದಿನ ದೈವಾಧೀನರಾದರು.

ಸುಬೋಧ ಯಂ. ರಾಮರಾಯರು 'ರಘುರಾಮ ವಿಠಲ'ಅಂಕಿತದಲ್ಲಿ ರಚಿಸಿ ಉಪಲಬ್ಧವಿರುವ ೧೫ ಕೀರ್ತನೆಗಳನ್ನು ಈ ಸಂಗ್ರಹದಲ್ಲಿ ಸೇರಿಸಲಾಗಿದೆ. ಇದುವರೆಗೆ ಅವು ಎಲ್ಲಿಯೂ ಮುದ್ರಿತವಾದಂತಿಲ್ಲ. ರಾಮರಾಯರ ಸಮಕಾಲೀನರೂ, ತಂದೆ ಮುದ್ದು ಮೋಹನ ವಿಠಲದಾಸರ ಶಿಷ್ಯರೂ ಆಗಿದ್ದ ಹಾರ್ಮೋನಿಯಂ ಶೇಷಗಿರಿ ರಾಯರೆಂಬ ಇನ್ನೊಬ್ಬ ರಘುರಾಮ ವಿಠಲಾಂಕಿತರಿದ್ದರೆಂಬುದು ತಿಳಿದಿರಬೇಕಾದ ವಿಷಯ. ರಾಮರಾಯರಿಗೆ ಯಾರಿಂದ ಅಂಕಿತೋಪದೇಶವಾಯಿತೆಂದು ತಿಳಿದಿಲ್ಲ. ಶ್ರೀರಾಮನ ಅನನ್ಯ ಭಕ್ತರಾದ್ದರಿಂದ ಸ್ವಯಂ ಪ್ರೇರಿತವೋ ಸ್ವಪ್ನ ಸೂಚಿತವೋ ಇರಬಹುದು. ಕೃತಿಗಳು ಸರಳವಾಗಿದ್ದು ಬಹಳಷ್ಟವು ಅವರಿಗೆ ಪ್ರಿಯವಾದ

ರಾಮಾಯಣಕ್ಕೆ ಸಂಬಂಧಿಸಿವೆ. ಕೆಲವೇ ಕೃತಿಗಳಿಗೆ ರಾಗ–ತಾಳ ನಿರ್ದೇಶನವಿದೆ. ನಮಗೆ ದೊರೆತಿರುವ ಹಸ್ತಪ್ರತಿಯಲ್ಲಿ ದಾಸರು ಕೀರ್ತನೆಗಳ ರಚನೆ ಮತ್ತು ಲೇಖನದ ದಿನಗಳನ್ನು ಸೂಚಿಸಿರುವುದು ವಿಶೇಷವೆನಿಸುತ್ತದೆ.

ಈ ಸಂಗ್ರಹಕ್ಕೆ ಅನೇಕ ಉಪಯುಕ್ತ ಸಲಹೆಗಳನ್ನಿತ್ತ ಡಾ. ಶ್ರೀನಿವಾಸ ಹಾವನೂರ ಅವರಿಗೂ, ಅವರ ಮೂಲಕ ಕೃತಿಗಳ ಹಸ್ತಪ್ರತಿಯನ್ನು ಒದಗಿಸಿದ ದಾಸರ ವಂಶಸ್ಥರಿಗೂ ನನ್ನ ಕೃತಜ್ಞತಾಪೂರ್ವಕ ವಂದನೆಗಳು.

**ಎ.ಎನ್. ಅನಂತಸ್ವಾಮಿರಾವ್**

## ಕೀರ್ತನೆಗಳ ಕ್ರಮಸೂಚಿ

## ೧

ಇಲ್ಲೇ ಹರಿ ಇರುವ ಪ

ಬಲ್ಲವರದ ನೋಡಲಲ್ಲೇ ತೋರುವ ಅ.ಪ

ಗಿಡದ ಬೇರು ಕಾಂಡ ಕೊಂಬೆ ರೆಂಬೆಗಳಲ್ಲಿ
ಅಡಗಿ ಎಲೆಯೊಳ್ಹೀಚು ಹೂವ್ಕಾಯ್ಗಳಲ್ಲಿ
ಮೃಡ ಸಖನಲ್ಲಲ್ಲೆ ವಿವಿಧ ರೂಪಗಳಿಂದ
ಅಡಗಿದ್ದು ಬೆಳೆಸುವ ಕಳೆಗೊಳಿಸುವನು ೧

ವಸ್ತ್ರದ್ಹಾಸುಹೊಕ್ಕು ದಾರಗಳಂದದಿ
ವಿಸ್ತಾರಗೊಂಡ ಈ ಲೋಕದೊಳು
ಹಸ್ತಿವರದನಾದಿಮೂಲ ತಾ ನೆಲೆಗೊಂಡು
ಸ್ವಸ್ಥದಿ ಪೊರೆವನನಂತ ಪ್ರಾಣಿಗಳ ೨

ಅನಿರುದ್ಧ ಪ್ರದ್ಯುಮ್ನ ಸಂಕರ್ಷಣ ರೂಪ
ವನು ತಾಳಿ ನಾರಾಯಣ ವಾಸುದೇವನು
ಅನಿಮಿತ್ತಬಂಧು ಚರಾಚರ ಪೃಥ್ವಿಯ
ನನುದಿನ ಪೊರೆವ ರಘುರಾಮವಿಠಲನು ೩

## ೨

ಎಂಥಾ ಪಾವನ ಪಾದವೋ ಶ್ರೀರಾಮನ
ದೆಂಥಾ ಚೆಲುವ ಪಾದವೋ ಪ

ಸಂತತವು ಸಜ್ಜನರ ಪಾಲಿಸೆ
ನಿಂತು ಧನುವನು ಧರಿಸಿ ಮೆರೆವ ಅ.ಪ

ಮುನಿಪತಿ ನುಡಿ ಮನ್ನಿಸಿ ತಪೋವನಕ್ಕನುಜನೊಡನೆ ಗಮಿಸೀ
ಮುನಿಯಾಜ್ಞೆಯಿಂ ಘೋರ ತಾಟಕಿಯನೆ ವಧಿಸಿ
ವಿನಯದಿ ಯಜ್ಞರಕ್ಷಣೆ ಮಾಡಿ ಮುದವಿತ್ತ ೧

ಮುನಿ ಗೌತಮನ ಪತ್ನಿಯ ಅಹಲ್ಯೆಯ
ಘನಶಾಪವನು ಕಳೆಯೆ
ಮುನಿಯಾಜ್ಞೆಯಿಂ ಘನಶಿಲೆಯ ಮೇಲಡಿಯಿಟ್ಟು
ಘನತರ ಮಾನಿನಿಯನು ನಿರ್ಮಿಸಿ ಮೆರೆದ ೨

ಗುಹನು ಗಂಗೆಯ ತಟದಿ ದೋಣಿಯ ತಂದು ಗಹನ
ಶಂಕೆಯೊಳಂದು
ಸಹಜಭಕ್ತಿಯಲಿ ನಿರ್ಮಲಗಂಗೆಯುದಕದಿಂ
ದಹಹ ಪಾದರಜವನು ತೊಳೆಯಲೊಪ್ಪಿದ ೩

ಹರಧನುವನು ಭಂಗಿಸಿ ಮಿಥಿಲೆಯಲಿ ವರ ವಿಕ್ರಮವ ಮೆರೆಸಿ
ತರುಣಿ ಜಾನಕಿಯಂದು ಶಿರದಿ ನಿನ್ನಡಿಗಳಿ
ಗೆರಗಲು ಘನ ಶಂಕೆಯಿಂ ಮಾಲೆಯರ್ಪಿಸಿದ ೪

ದುರುಳ ದಾನವ ತಂಡವ ಸಂಹರಿಸುತ ವರ
ಸಾಧುಗಳ ಪೊರೆಯೆ
ಚರಣ ಪಾದುಕೆಗಳ ಶರಣ ಭರತಗಿತ್ತು
ಬರಿಗಾಲಲಿ ನಡೆದ ರಘುರಾಮವಿಠಲನ ೫

## ೩

ತೋರಿಸೋ ಶ್ರೀಹರಿ ನಿನ್ನ ತೋರಿಸೋ ಪ

ತೋರಿಸೋ ಹರಿ ವಿಶ್ವಮಯ ನಿನ್ನರೂಪವ
ತಾರಿಸೋ ಭವಸಾಗರದಿಂದಲೆನ್ನನು ಅ.ಪ

ಜಲ ಭೂ ಖೇಚರ ಪ್ರಾಣಿವರ್ಗಗಳೊಳು
ನೆಲಸಿ ಅವ್ಯಕ್ತನಾಗಿಹ ನಿನ್ನ ರೂಪವ ೧

ತೃಣ ಲತೆ ತರು ವನಸ್ಪತಿ ವರ್ಗಗಳೊಳು
ಅಣಗಿ ಅವ್ಯಕ್ತನಾಗಿಹ ನಿನ್ನ ಮೂರ್ತಿಯ ೨

ಪಂಚಭೂತ ತನ್ಮಾತ್ರಂಗಳೊಳಡಗಿ ಪ್ರ
ಪಂಚಕವ್ಯಕ್ತನಾಗಿಹ ನಿನ್ನ ಮೂರ್ತಿಯ ೩

ಭೂತಜಾಲದ ಹೃತ್ಪೀಠದಿ ಮಂಡಿಸಿ
ರಥಿಕನಾಗಿ ದೇಹರಥವ ಚಾಲಿಪ ನಿನ್ನ ೪

ತಾರಾಗಣದಿ ಚಂದ್ರ ಸೂರ್ಯಾದಿಗ್ರಹ ಪರಿ
ವಾರದೊಳಡಗಿ ಜ್ಯೋತಿರ್ಮಯನಹ ನಿನ್ನ ೫

ತಳಿರೆಲೆ ಹೂ ಹೀಚು ಕಾಯಿ ಧಾನ್ಯಂಗಳ
ಬೆಳೆಸಿ ಶೋಭಿಪ ದಿವ್ಯ ವಿವಿಧರೂಪಂಗಳ ೬

ಅಂಗ ಪ್ರತ್ಯಂಗ ಕರಣಗಳೊಳಡಗಿಹ
ಮಂಗಳಮಯ ಚತುರ್ಮೂರ್ತಿಗಳಿರವನು ೭

ಅಜಭವ ಸುರಮುಖ್ಯ ದೇವಗಣದೊಳಿಪ್ಪ
ಸುಜನರಂತರ್ಯಾಮಿ ಚರಪ್ರತಿಮೆಗಳನ್ನು ೮

ಅಂಬುಜಾಂಬಕಿ ಜಗದಂಬೆ ಸಿತಾಪತಿ
ಬಿಂಬಮೂರುತಿ ರಘುರಾಮವಿಠಲ ನಿನ್ನ ೯

೪

ನಾರಾಯಣನಲ್ಲದಿಲ್ಲ ಜಗದಿ ಪ

ನಾರಾಯಣನೆ ವಾರಿಶಾಯಿಯಾದ ಮೇಲೆ
ವಾರಿಸಂಪರ್ಕವಿಲ್ಲದ ವಸ್ತುವುಂಟೆ ಅ.ಪ

ತೃಣ ಲತೆ ತರು ವನಸ್ಪತಿ ಸಂತತಿಯೊಳೆಲ್ಲ
ಗಣನೆಯಿಲ್ಲದ ಪ್ರಾಣಿವರ್ಗದೊಳೆಲ್ಲ

ಅಣುಮಹತ್ತೆನಿಪ ಚರಾಚರಗಳೊಳೆಲ್ಲ
ಅಣಗಿ ಪೋಷಿಪ ರಸ ವಾರಿಯಾದ ಮೇಲೆ ೧

ಧರೆಯೊಳಗಡಗಿಹ ಧಾತುಜಾಲವ ಕರಗಿಸಿ
ನೆರೆ ವನಸ್ಪತಿವರ್ಗಕೆ ಉಣಿಸನಿತ್ತು
ಪರಿ ಪರಿ ಧಾನ್ಯ ಫಲಂಗಳ ರಚಿಸುತ್ತ
ಹರಹಿ ಲೋಕದೊಳೆಲ್ಲರನು ಪೋಷಿಪ ಪ್ರಭು ೨

ಒಂದೇ ಸ್ಥಳದಲಿ ಮೊಳೆತು ಬೆಳೆವ ಬೀಜಕ್ಕೆಲ್ಲ
ಒಂದೇ ವಾಸನೆ ಗುಣ ರುಚಿಗಳುಂಟೇ
ಸಂದೇಹ ಬೇಡ ನಿರ್ಲಿಪ್ತ ತಾನವುಗಳ
ಕುಂದಿಸದೆ ಗುಣ ಸ್ವಭಾವಗಳ ಪೋಷಿಸುವ ೩

ಸರ್ವವಸ್ತುಗಳಲ್ಲು ಅಂತರ್ಯಾಮಿಯಾಗಿ
ಸರ್ವ ಚರಾಚರಕೆ ನಿಯಾಮಕನಾಗಿ
ಸರ್ವರೊಳಡಗಿ ಪೋಷಿಪ ಘನಪ್ರಭುವಾಗಿ
ಸರ್ವರುತ್ಪತ್ತಿ ಸ್ಥಿತಿಗೆ ಕಾರಣನಹ ೪

ಪರಮಪುರುಷ ತನ್ನನಂತ ಮಹಿಮೆಯೊಳು
ಕಿರಿದೊಂದಂಶದಿ ವಾರಿರೂಪದೊಳಿಂತು
ಸರುವ ಚರಾಚರದಿರುತಂತರ್ಗತನಾಗಿ
ಪೊರೆವ ಜನವ ರಘುರಾಮವಿಠಲ ಪ್ರಭು ೫

೫

ಪರಮಪುರುಷ ನೀನೇ ಮಾಧವ ಪ

ಪರಮಪುರುಷ ನೀಪುರುಷೋತ್ತಮ ನೀ
ಸಿರಿ ಅಜ ಭವ ಸುರ ನರೋತ್ತಮಾರ್ಚಿತ ಅ.ಪ

ದೇವ ದೇವೋತ್ತಮ ದೇವ ಸಾರ್ವಭೌಮ
ಜೀವ ಜೀವಾಂತರ್ಗತ ಸರ್ವೋತ್ತಮ ೧

ಅಣುತೃಣಗಣ ಮಹತ್ತತ್ವಾದಿಗಳ
ಅನಂತರೂಪಗುಣಗಳಲಡಗಿ ಮೆರೆವ ಪ್ರಭು ೨

ಬ್ರಹ್ಮ ಸುರೇಂದ್ರಾರ್ಚಿತ ಪಾವನ ಪದ
ಚಿನ್ಮಯರೂಪ ಸುರಾಸುರ ವಂದ್ಯಾ ೩

ಗರುಡಗಮನ ಸಿರಿರಮಣ ಚರಣನಖ
ಕಿರಣ ಕೋಟಿರವಿತೇಜಪ್ರಕಾಶಕ ೪

ಗಂಗಾಪಿತ ಅನಂಗಜನಕ ಹೇ
ಮಂಗಳಾಂಗ ರಘುರಾಮವಿಠಲ ಪ್ರಭು ೫

೬

ರಾಮ ನಾಮಕೆ ಸಮ ನಾಮವುಂಟೆ ಜಗದೀ
ಪಾಮರರಘನಾಶಕೆ ಪ

ಕಾಮಾರಿಯು ತನ್ನ ಭಾಮೆಗೆ ಬೋಧಿಸಿದೀ
ನಾಮಕೆ ಸಮವುಂಟೇ ಅ.ಪ

ಕೌಸಲ್ಯಾದಶರಥರಿಂದವತರಿಸೀ
ಕೋಸಲಪತಿಯೆನಿಸೀ
ವಾಸವಾದಿ ದಿವಿಜರ ಪಾಲಿಸಲೆಳೆಸೀ
ಅಸುರೆಯ ಸಂಹರಿಸೀ
ಭಾಸುರಾಂಗ ಮುನಿಯಾಗದೊಳುಪಕರಿಸೀ
ದುರುಳರಪಹರಿಸೀ
ಶ್ರೀ ಸೀತಾಕರಪಲ್ಲವವನುಗ್ರಹಿಸೀ
ಮುನಿ ಸತಿಯನುದ್ಧರಿಸಿದ ೧

ಪಿತನ ಸತ್ಯವಾಕ್ಯವ ಪಾಲಿಸಲೆಳೆಸೀ
ಸತಿಯನುಜರ್ವೆರೆಸೀ

ಹಿತದಿಂ ಮುನಿ ವೇಷದೊಳಡವಿಗೆಗಮಿಸೀ
ದಿತಿಜರ ಕುಲವಳಿಸೀ
ಮತಿಮಾನ್ ವಾಯುಕುಮಾರನ ಸ್ವೀಕರಿಸಿ
ಸತಿಯಳ ನೆಲೆಯರಸೀ
ಕ್ಷಿತಿಧರ ಕುಲದಿಂ ಶರಧಿಯನುತ್ತರಿಸೀ
ದಿತಿಜಾಂತಕನೆನಿಸಿದ ೨

ರಾವಣ ಘಟಕರ್ಣಾದ್ಯರ ಸಂಹರಿಸೀ
ಶರಣನ ಪತಿಕರಿಸೀ
ಪಾವಕನೊಳು ಸತಿಶೀಲವನುದ್ಧರಿಸೀ
ನರನಾಟಕ ನಡೆಸೀ
ಪಾವಕನಿಂ ಭರತನ ಪ್ರಾಣವನುಳಿಸೀ
ಕರುಣಾನಿಧಿಯೆನಿಸೀ
ದೇವರದೇವ ರಘುರಾಮವಿಠಲನೆನಿಸೀ
ಜನವನು ಪಾಲಿಸಿದಾ ೩

೭

ರಾಮಾ ನಿನ್ನೊಳ್ಪರತನ್ಯರ ಕಾಣೆ
ಪೊರೆ ನೀನೆನ್ನಾಣೇ ಶ್ರೀರಾಮಾ ಪ

ಕಾಮಾಂತಕ ತನ್ನ ಭಾಮೆಗೊರೆದ ಶ್ರೀ
ರಾಮತಾರಕಮಂತ್ರವೆ ಗತಿ ಲೋಕಕೆ ರಾಮಾ ಅ.ಪ

ಮತಿವಂತ ದಶರಥ ಕೌಸಲ್ಯೆಯರ ಸುತನಾಗ್ಯವತರಿಸಿ
ಅತಿ ಬಾಲ್ಯದಿ ಮುನಿಯೊಡನಡವಿಗೆ ನಡೆದು ಕಡು
ದುರುಳೆಯಸದೆದು
ಮತಿಹೀನ ರಕ್ಕಸರುಪಟಳವಳಿದು ಮುನಿಪತಿ ಮಖ ಬೆಳೆದು
ಪತಿಸುತಸಖಹಿತ ಜನಪತಿ ಜೀವಿತ
ಪಥದಾದರ್ಶವ ಜಗತಿಗೆ ತೋರಿದೆ ೧

ಮುನಿಗೌತಮಸತಿ ತಾ ಶಿಲೆಯಂತಿರಲು ಪದರಜದಿಂದುದ್ಧರಿಸಿ
ಘನ ಜಾಹ್ನವಿ ಚರಿತೆಯ ಕೇಳುತ ನಲಿದು ಅನುಜಾತನ ಬೆರೆದು
ಜನನಾಥನ ಜನಕನ ಮಿಥಿಲೆಗೆ ನಡೆದು ಹರಧನುವನುಪಡೆದು
ಅನುಪಮವೆನಿಪದ ನಡುವೊಳೆ ಖಂಡಿಸಿ
ಜನಕಸುತೆಯ ಕರಕಮಲವ ಪಿಡಿದೆ ೨

ಪರಶುಹಸ್ತರು ಮಾರ್ಗದಿ ಎದುರಾಗಿ ಅಂಜಿಸೆ ಬೆರಗಾಗಿ
ಕರದಲ್ಲಾಟಿಕೆಯೊಲು ಧನುವದಗ್ರಹಿಸಿ ಕ್ಷಣದಲ್ಲುಪಹರಿಸಿ
ಪರಮಾದರ ನೀಡಿದೆ ಬಾಂಧವ
ಜನಕೆ ಹಿರಿಯರಿಗೆ ದಶರಥನಿಗೆ
ಸುರನರರೆಲ್ಲರು ಪರಮಾನಂದದೊ
ಳಿರುತಿರೆ ವಸಿದೆ ಸುದತಿಯೊಡನೆ ರಘುರಾಮ ೩

ಹಿಂದೆ ನಾ ಬಹುಜನ್ಮಗಳಲಿ ಬಂದು ನೊಂದೆನು ಈ ಭವದಿ
ಮುಂದೆ ಮಾರ್ಗವ ಕಾಣದೆ
ನಿನ್ನಲಿ ಬಂದು ನಿಂದೆ ಗತಿಯೆಂದು
ಸಂದೇಹವಿಲ್ಲ ನೀನೇ ಗುಣಸಿಂಧು ಜಗಕಾಪದ್ಬಂಧು
ತಂದೆ ನೀನಿಂದೆನ್ನ ಬಂಧನ ಬಿಡಿಸದೆ
ಕೊಂದೆಯಾದರೆ ಕುಂದದು ನಿನಗಪಯಶ ೪

ಆನಂದಮಯ ನೀನಾನಂದದಲ್ಲಿದ್ದೆ ಆಶ್ಚರ್ಯವದೇಳು
ಆನಂದವನಂದು ಕುಂದದಲಿತ್ತೆ ಜಗಕತಿಶಯವೇಳು
ಸಾನಂದದೊಳಿದ್ದರು ತವಸನ್ನಿಧಿಬಲದಿ ಅತಿಶಯಮತ್ತೇಳು
ನೊಂದಜನಕೆ ಇಂದಾನಂದವ ನೀ
ನ್ನೊಂದಿಸಿ ಪೊರೆ ರಘುರಾಮವಿಠಲ ೫

## ೮

ರಾಮಾ ಮನ್ಮನೋಹಾರಕ ಸೀತಾರಾಮ ರಾಮ
ಮನ್ಮನೋಹಾರಕ ಪ

ರಾಮ ದಶರಥ ರಾಮ ಮಂಗಳನಾಮ ಶ್ರೀ ರಘುರಾಮ
ಗುಣಗಣಧಾಮ ಸಜ್ಜನಪ್ರೇಮ ಹೇ ಜಯ ರಾಮ
ಸೀತಾರಾಮ ರಘುವರ ಅ.ಪ

ಸುರಪತಿ ಮುನಿಸತಿಯ ಅಹಲ್ಯೆಯ ಮರೆಸಿ
ಕೂಡಲು ಕೋಪದಿ
ಗೌತಮಮುನಿ ತರಳೆಯ ಶಪಿಸಿರಲು ಕಲ್ಲಾಗಿ ಬಿದ್ದಿರೆ
ಹಿರಿದುಕಾಲಕೆ ಮುನಿಯೊಡನೆ ರಘುವರ ನೀ
ಪಾದಗಳ ರಜದಿಂ
ತರುಣಿಯಾಗಿಸಿ ಪೊರೆದೆಯೆಂಬೀ ವರ
ಸುವಾರ್ತೆಯ ಕೇಳಿ ಬಂದಿಹೆ ೧

ಕಡುವೃದ್ಧೆ ಬೇಡತಿಯು ಅಡವಿಯೊಳಂದು
ಗಿಡ ಮರವಲೆದು
ತಂದು ಫಲಮೂಲಗಳನು ಒಡೆಯ ನೀ ಬರುವೆಯೆಂದು
ಕೇಳುತ ತಾನು । ಬಡವರೊಡೆಯ ನೀನೆಂದರಿತು ।
ಕಡುಹಿತದೊಳೆಂಜಲ ಫಲಗಳುಣಿಸಲು।
ಬಿಡದೆ ಶಬರಿಯನು ಕಾಯ್ದೆಯೆಂದೊರೆದ ವಾರ್ತೆಯ
ಕೇಳಿ ಬಂದಿಹೆ ೨

ಬಲದಿ ಕೊಬ್ಬಿದ ವಾಲಿಯು ಸುಗ್ರೀವನ
ಛಲದಲೋಡಿಸಿ ರಾಜ್ಯದಿ
ಬಲುಹಿಂದಲವನ ಲಲನೆಯನಪಹರಿಸಿ ಭೋಗಿಸುತಿರಲು
ಇಳೆಯರಸ ನೀನೆಂದು ನಂಬುತ
ಗೆಳೆಯ ಮಾರುತಿಯಿಂದಲರಿತು
ಮಿಳಿತು ವಾಲಿಯ ಕೊಲಿಸಿ ರಾಜ್ಯವ
ಗಳಿಸಿದ್ವಾರ್ತೆಯ ಕೇಳಿ ಬಂದಿಹೆ ೩

ಹಿರಿಯಣ್ಣ ದಶಮುಖನು ನಿನ್ನಯ ಸತಿ
ವರಪತಿವ್ರತೆ ಸೀತೆಯ

ಕದ್ದೊಯ್ದಿರೆ ಕಿರಿಯ ವಿಭೀಷಣನು
ಪರಿಪರಿಯಿಂದಲಿರದೆ
ಬೋಧಿಸಿ ಬೇಡಲು ದುರುಳ ರಾವಣನ ಭಂಗಿಸಿ
ಹೊರದೂಡಲವ
ನರಸಿ ನಿನ್ನಯ ಪರಮ ಪಾದಾಶ್ರಯವ ಬೇಡಲು ಪೊರೆದ
ವಾರ್ತೆಯ ಕೇಳಿ ಬಂದಿಹೆ ೪

ಪರಮಪುರುಷ ನೀನೆಂದು ನಂಬಿದೆ
ಸಿರಿಯರಸ ಪ್ರಭುವು ನೀನೆಂದು
ಹರವಿರಂಚಾದಿಗಳೊಡೆಯ ನೀನೆಂದು
ಚರಾಚರ ಗುರುವು ಪ್ರಭುವು ನೀನೆಂದು
ನಂಬಿದೆನು ಇಂದು ತರಣಿ ಕುಲ ಮಣಿ
ಸಾರ್ವಭೌಮನೆ ಶರಣರಘ
ಕೋಟಿಗಳ ಕಳೆವನೆ ಶರಣ ಬಂದಿಹೆನೆನ್ನ ಪಾಲಿಸದಿರುವರೇ
ರಘುರಾಮ ವಿಠಲ ೫

## ವಾಯುದೇವರು

### ೯

ಮಾರುತೀ ಮತ್ಪ್ರಾಣೇಶ ಮಾರುತೀ ಪ

ಮಾರುತಿ ನಮಿಪೆ ನಾ ನಿನ್ನಾ ಭವಭಾರವನಿಳಿಸು ನೀ ಯೆನ್ನ ।
ಗತಿ ತೋರು ಸದ್ಗುಣ ಸಂಪನ್ನಾ । ಬೇರೆ ಯಾರಿಲ್ಲ ಪೊರೆವರು
ಯನ್ನಾ । ನಿನ್ನೀ ಚಾರುಚರಿತೆಯ ಪಾಡಿ ಕೊಂಡಾಡುವೆ ।
ಸೇರೆ ರಾಮನ ಪದವಾರಿಜ ತೋರಿಸು ಅ.ಪ

ತ್ರೇತೆಯೊಳಗೆ ಸಂಜನಿಸೀ ರಾಮದೂತಶೇಖರನೆಂದೆನಿಸೀ
ಹರಿಜಾತನ ವಚನವ ಸಲಿಸಿ
ಕಪಿ, ಖ್ಯಾತರೊಂದಿಗೆ ಸಂಚರಿಸಿ
ಸುರನೇತರುಘೇಯೆನ್ನೆ

ಶೀತಳ ಜಲಧಿಯ ಪ್ರೀತಿಯೊಳ್ದಾಟಿ
ಲಂಕಾ ಪತಿಯನು ಕಂಡೆ ೧
ಪುರದಿ ಭೂಜಾತೆಯನರಸೀ ಕಾಣದರಿತು ವನವ, ತಲೆ
ಮರಸೀ ಕಂಡು ಮರುಗುತಾಕೆಯ
ದುಃಖ ವೆರೆಸೀ ಬಂದ
ದುರುಳ ರಾವಣನ ಪರಿಕಿಸಿ । ಆಹಾ । ಭರದಿ ಮುದ್ರಿಕೆಯಿತ್ತು ।
ಪುರವನುರಿಸಿ । ರಘು । ವರನಡಿಗಳ
ಕಂಡ । ಧುರಧೀರರರಸನೇ ೨

ಕಡಲತಡಿಯನ್ನೈದೀ ಭರದೀ । ಜಗ ।
ದೊಡೆಯನಿಗೆಡೆಗುಡೆ ಶರಧೀ । ಲಂಕೆ
ಯೆಡೆಯೊಳ್ರಕ್ಕಸರ ಸಮರದಿ । ಕೊಲ್ಲುತಡುವ ಭೂತಗಳುಣ್ಣೆ
ಮುದದೀ । ಬಲು । ಘುಡಿ ಘುಡಿ
ಶಾರ್ಭಟಿಸುತ ಖಳ ಪಡೆಯನು
ಅಡಿಯೊಂದಿಗೊರೆಸಿ ರಾಘವನ ಮೆಚ್ಚಿಸಿದ ೩

ದುರುಳರುದಿಸೆ ದ್ವಾಪರದಿ । ಪಾಂಡು ।
ನರವರಗ್ಹ ಸ್ತಿನ ಪುರದೀ ।
ಪುತ್ರ । ವರ ನೆನಿಸುವ ಸಂಭ್ರಮದೀ । ಯದು ।
ವರನೊಡಗೂಡಿ ಕಾಳಗದೀ ।
ಚಂದ । ಅರಿವೀರ ಭಟರ ಕಡಿದುರುಳಿಸಿ । ದುರುಳ ಕೌರವರ
ಬೇರೊರೆಸಿದ ಬಲಭೀಮ ॥ ೪

ಕಲಿಯುಗದೊಳು ವಿಪ್ರಕುಲದೀ ।
ಪುಟ್ಟಿ । ಬಲಿದರ ಶಾಸ್ತ್ರ ಬಲದೀ ।
ನಿಂದು। ಗೆಲಿದು ಸತ್ವವಗೊಂಡು ಛಲದಿ । ದ್ವೈತ ಕುಲವ
ಸ್ಥಾಪಿಸಿ ನೀ ನಲಿದೀ । ಭಲ । ಭಳಿರೆ ರಜತಪುರಿಯರಸನ
ನರ್ಚಿಸಿ । ಕಳೆಗೊಂಡ ಯತಿವರ ।
ರಘುರಾಮವಿಠಲ ದೂತ ೫

## ಆತ್ಮನಿವೇದನೆ

### ೧೦

ಎಂತು ಪೂಜಿಸಿದೆನ್ನೈ ನೀರಜಾಕ್ಷ ನಿನ್ನ
ನೆಂತು ಪೂಜಿಸಿದೆನ್ನೈ ನೀರಜಾಕ್ಷ ಪ

ಕಂತುಪಿತ ಎನ್ನ ನೀ ಕಾಯ್ವೆಯೆಂತೊ ಕಮಲಾಕ್ಷ ಅ.ಪ

ಗಂಗೆಯುದಕದಿ ಮಿಂದು ಸಿಂಗರದ ಮಡಿಯುಟ್ಟು
ಮಂಗಳದ ನಾಮ ಮುದ್ರೆಗಳ ಧರಿಸೀ
ಅಂಗಕರಣಗಳ ಶೋಧಿಸಿ ನ್ಯಾಸ ಮಂತ್ರದಿಂ ದಂತ
ರಂಗದಿ ಬಿಂಬಮೂರ್ತಿಯ ಚಿಂತಿಸಿದೆನೇ ೧

ನಿರ್ಮಲೋದಕದಿಂದ ಅಭಿಷೇಚನವ ಗೈದು
ನಿರ್ಮಾಲ್ಯ ತೀರ್ಥವನು ಸೇವಿಸಿದೆನೇ
ಮರ್ಮವರಿತಾದಿಮೂರ್ತಿಯೆ ನಿನ್ನ ಬಿಂಬವನು
ನಿರ್ಮಲಾಂತಃಕರಣ ಪೀಠದಲಿ ನಿಲಿಸಿದೆನೇ ೨

ಶುಭ್ರವಸ್ತ್ರಗಳ ಪರಿಮಳ ಗಂಧ ಪುಷ್ಪಗಳ
ನರ್ಘ್ಯ ತುಳಸಿಗಳನರ್ಪಿಸಿ ನಲಿದೆನೇ
ಅರ್ಭಕನು ನಾ ಕನಕರತ್ನಾಭರಣಗಳನು
ಅಬ್ಧಿ ತನಯಳರಮಣ ನಿನಗೆ ಅರ್ಪಿಸಿದೆನೇ ೩

ಧೂಪದೀಪಗಳಿಂದ ವಾದ್ಯ ವೈಭವದಿಂದ
ಗೀತನರ್ತನಗಳಿಂ ಸೇವಿಸಿದೆನೇ
ಶ್ರೀಪತಿಯು ನೀ ಜಗದ ಜೀವಜಾಲಕೆ ಅಂತ
ರಾತ್ಮನೆಂದರಿತು ನೈವೇದ್ಯವರ್ಪಿಸಿದೆನೇ ೪

ವಿವಿಧ ಖಾದ್ಯಗಳಲ್ಲಿ ವಿವಿಧ ರಸ ರೂಪದಲಿ
ವಿವಿಧ ಸಾನ್ನಿಧ್ಯಗಳ ಧ್ಯಾನಿಸಿದೆನೇ

ಭವರೋಗಪೀಡಿತನು ನಾ ನಿನ್ನ ಹವಣರಿತು
ಸುವಿಹಿತ ವಿಧಿಯಂತೆ ಪೂಜಿಸುವ ಪರಿಯೆಂತೋ ೫

ಸರ್ವಶಕ್ತನು ನೀನು ಸರ್ವಜ್ಞಪತಿ ನೀನು
ಸರ್ವದಾ ತೃಪ್ತನೋ ನಿಗಮವೇದ್ಯಾ
ಸರ್ವಭೂತಾಂತರ್ಗತನು ನಿನಗೆ ಉಣಬಡಿಸೆ
ಗರ್ವಿಶಠನಜ್ಞತಮನೆನಗೆ ವಶವೇ ೬

ವೇದಶಾಸ್ತ್ರಗಳ ಗಂಧವನರಿಯೆ ಹರಿಯೆ ನಿನ
ಗಾದಿಯಂತ್ಯಗಳ ಜ್ಞಾನದ ಮೂಲವರಿಯೆ । ನಮ್ಮ
ಮೇದಿನಿಯ ತನುಜೆಯಾ ಕೈಪಿಡಿದ ಪ್ರಭುವೆಂದು
ಸಾದರದಿ ನಮಿಪೆ ಪೊರೆ ರಘುರಾಮವಿಠಲ ೭

## ೧೧

ನಾನ್ಯಾರೋ । ಶ್ರೀಹರಿ ಪೇಳೋ ನಾನ್ಯಾರೋ ಪ

ನಾನ್ಯಾರೆಂಬುದ ಪೇಳಿ ನೀನ್ಯಾರೆಂಬುದ ತಿಳುಹಿ
ಸಾನುರಾಗದಿ ಪೊರೆವ ಪ್ರಭು ನೀನೆ ಬೇರಿಲ್ಲ ಅ.ಪ.

ಎಲ್ಲಿಂದ ಬಂದೆ ನಾನಿಲ್ಲಿಗೆ ಮುಂದೆಲ್ಲಿಗೆ ಪಯಣ
ಇಲ್ಲಿಗೆ ಬಂದ ಕಾರಣವಾವುದಿಲ್ಲಿಂದ ಮುಂದಕೆ
ಕೊಂಡೊಯ್ಯುವುದೇನೆಂಬುದರಿಯೆ ೧

ಜನನಕೆ ಮೊದಲು ಇದ್ದೆಡೆ ಯಾವುದೆನಗೇಕೆ
ಜನನಗೊಂಡು ಮಾನುಷ ದೇಹ ತಳೆದನಾ
ನೆನಗೆ ಹಿತವಹ ಕಾರ್ಯವನೇನನೆಸಗಿದೆ ೨

ದೇಹವೆ ಮನಸೆ ಬುದ್ಧಿಯೇ ನಾನೆಂಬುದನಾರೆಂದರಿಯೆ
ನೇಹದಿಂದಿರುವಂತರಾತ್ಮ ತೊಲಗಲು ಮುಂದೀ
ದೇಹವು ಕಸಕಿಂತ ಕಡೆಯೆನಿಪುದ ಬಲ್ಲೆ ೩

ಕರ್ಮವನೆಸಗಿ ನಾನೆ ಎಂದು ಮತ್ತದರನುಭವಕೆ
ಧರ್ಮಬದ್ಧನಾಗಿ ಸುಖ ದುಃಖ ಪಡುವಂಥ
ಕರ್ಮಿ ಜೀವನು ನೀ ಸಾಕ್ಷಿ ನಿರ್ಲಿಪ್ತನು ೪

ನೀನೆ ಗುರುವು ತಂದೆಯು ಬಂಧು ನೀನೇ ಸರ್ವಸ್ವ
ಏನರಿಯದಲ್ಪನ ಕೈಬಿಡದಿರು
ನೀನೆ ಗತಿ ರಘುರಾಮವಿಠಲ ತಂದೆ ೫

## ಲೋಕನೀತಿ

### ೧೨

ಎಲ್ಲಿಗೇತಕೆ ಪೋಗಿ ತಲ್ಲಣಿಸುವೆಯೊ ಮನವೆ
ಇಲ್ಲೆ ಶ್ರೀಹರಿಯಿಲ್ಲವೆ ಪ

ಬಲ್ಲವರ ಹೃದಯಗುಹೆಯಲ್ಲಿ ಪ್ರಕಟಿಸುತ ಜನ
ರೆಲ್ಲ ವಸ್ತುಗಳಲ್ಲಿ ತುಂಬಿ ಸೂಸುತಲಿರುವ ಅ.ಪ

ಕಾಶಿ ರಾಮೇಶ್ವರ ಬದರಿ ತಿರುಪತಿಯೆಂದು
ಘಾಸಿಗೊಳ್ಳುವೆ ಏತಕೋ
ವಾಸನೆಯ ನೀಗದವನಾಶೆಪಾಶಗಳಿಂದ
ಬೇಸತ್ತು ಚರಿಸಲೇಕೋ
ಈಶನಾವಾಸವೀಜಗವೆಲ್ಲವಿಲ್ಲಿಲ್ಲ
ವಲ್ಲಿರುವನೆಂಬುದೇಕೋ
ಶ್ರೀಶ ಶ್ರೀಹರಿಯ ನೀನಿರುವಲ್ಲೆ ಶೋಧಿಸುವ
ಆಸೆಯುದಯಿಸಲಿಲ್ಲವೇಕೋ ೧

ಅಣುಮಹತುಗಳಲ್ಲಿ ತೃಣಜೀವಕೋಟಿಯಲಿ
ಗುಣ ಮಹಿಮನರಿಯ ಬಯಸೋ
ಎಣಿಸಲಾಗದನಂತಗುಣನ ಪ್ರಾಣಿ ಸಮೂಹ
ಗಣಗಳೊಳು ಕಾಣಬಯಸೋ

ಅಣುವಿಗಣುವೆನಿಸಿ ಮಹತಿಗೆ ಮಹತ್ತಹನ
ಕಣ್ದಣಿಯೆ ಕಾಣುತ ಭಾವಿಸೊ
ಗುಣನಿಧಿಯು ನಿನ್ನ ಶ್ರದ್ಧಾಭಕ್ತಿಗಳಿಗೊಲಿದು
ಕ್ಷಣದಿ ಕಾಣಿಸುವನಿದನರಿತು ನೀ ಚರಿಸೋ ೨

ವ್ರತನಿಯಮಗಳ ಕಾಮ್ಯ ಫಲದಾಸೆಯಿಂ ಮಾಡೆ
ಫಲವೇನು ವ್ಯರ್ಥಶ್ರಮವೋ
ಸತತ ನಿನ್ನಯ ವ್ಯಾಪ್ತ ಮಹಿಮೆಯರಿಯದೆ ಪೂಜೆ
ಮಾಡಿದರು ವ್ಯರ್ಥಶ್ರಮವೋ
ಮತಿವಿಕಳ ಕೋಪ ತಾಪದ ದಾಸನವ ಮಾಳ್ಪ
ದಾನವದು ವ್ಯರ್ಥಶ್ರಮವೋ
ಅಕಳಂಕಮಹಿಮ ರಘುರಾಮವಿಠ್ಠಲನೆಂದು
ನಂಬಿ ನಡೆವುದೆ ಸಾರ್ಥಕವೋ ೩

## ೧೩

ಪರಮಾನಂದದೊಳಿರುವ ಪರಿಯನರಿ
ಗರುವ ಬೇಡ ಹೇ ಮನಸಾ ಪ

ಸಿರಿವರ ನಾರಾಯಣ ನಾಮಾಮೃತ
ನರಘಳಿಗೆಯು ಮರೆಯದೆ ನೆನೆ ಮನಸಾ ಅ.ಪ

ಇಂದಿರೆಯರಸನ ಸುಂದರ ಚರಣಗ
ಳಂದದ ಶ್ರೀ ತುಳಸಿಯ ದಳದಿ
ಚಂದದೊಳರ್ಚಿಸಿ ಕುಂದದ ಭಕುತಿಯೊಳಾ
ನಂದದೊಳಿರು ಹೇ ಮನಸಾ ೧

ಸಿರಿ ರಾಮನ ಮಂಗಳ ಮೂರ್ತಿಯ ಘನ
ಕೊರಳೊಳು ಹಾರಗಳರ್ಪಿಸುತ
ಪರಿಪರಿ ಪರಿಮಳ ಪುಷ್ಪಗಳಿಂದಲಿ
ಕರುಣಾಕರನನರ್ಚಿಸು ಮನಸಾ ೨

ಸರ್ವಾಂತರ್ಗತ ಜಗದುದರನ ನೀ
ನಿರ್ಮಲ ಪೀಠದಿ ಕುಳ್ಳಿರಿಸಿ
ಸರ್ವಷಡ್ರಸೋಪೇತ ಸುಭೋಜನ
ಸರ್ವಾತ್ಮನಿಗರ್ಪಿಸು ಮನಸಾ ೩

ಸುಫಲ ಕ್ಷೀರ ತಾಂಬೂಲಗಳರ್ಪಿಸಿ
ಸಫಲಗೊಳಿಸು ಜನ್ಮವ ಮನಸಾ
ಅಪಾರಮಹಿಮನ ಗುಣಗಳ ಕೀರ್ತಿಸಿ
ಕೃಪಾನಿಧಿಯ ನಮಿಸೆಲೊ ಮನಸಾ ೪

ಅಗಣಿತ ಮಹಿಮನಿಗಾರ್ತಿಗಳರ್ಪಿಸಿ
ಮಿಗೆ ಭಕ್ತಿಲಿ ನಮಿಸೆಲೊ ಮನಸಾ
ಸುಗುಣಮಣಿಯು ರಘುರಾಮವಿಠಲ ನಿ
ನ್ನಗಲದೆ ಹೃದಯದಲಿಹ ಮನಸಾ ೫

೧೪

ರಾಮ ಪಾದವೇ ಗತಿ ನೇಮನಿಷ್ಠೆಗಳರಿಯದ
ಪಾಮರ ಜನರಿಗೆಲ್ಲ ಪ

ತಾಮಸಾಹಂಕಾರ ಪಂಕದಿ ।
ಕಾಮಮದ ಮತ್ಸರಗಳಿಂದಲಿ
ಹೇಮ ಕಾಮಿನಿಲಂಪಟದಿ ನಿ । ಸ್ಸೀಮರೆನಿಸುವ
ತಾಮಸೌಘಕೆ ಅ.ಪ

ಸ್ನಾನ ಮೌನ ಜಪತಪಗಳನರಿಯದೆ
ಸ್ವಾಮಿ ನಿನ್ನನು ಮುಟ್ಟಿ ಪೂಜಿಸದೆ
ಸೀಮೆಯರಿಯದ ಕಾಮಕರ್ಮದಿ
ನೇಮವಿಲ್ಲದ ಕ್ಷುದ್ರಸ್ವಾರ್ಥದಿ
ತಾಮಸರ ಸಂಸರ್ಗದಿಂದ ವಿ
ರಾಮವರಿಯದ ಜನರ ಪಾಲಿಗೆ ೧

ಜ್ಞಾನ ಭಕ್ತಿ ವೈರಾಗ್ಯಗಳರಿಯದೆ
ಜ್ಞಾನಿಜನರ ಸಂಗವ ಬಯಸದೆ
ಹೀನದುಷ್ಕರ್ಮಗಳ ಮಾಡುತ
ನಾನು ತಾನೆಂಬ ಕೊಬ್ಬಿಲಿ
ಜಾನಕೀಪತಿ ನಿನ್ನ ಮಹಿಮೆಯ
ಕಾಣದಿಹ ದುಷ್ಕರ್ಮಿಜನರಿಗೆ ೨

ಶ್ರೀನಿಧಿ ನೀ ಕರುಣಿಸಿ ರಕ್ಷಿಸದಿರೆ
ದೀನಜನರ ಪಾಲಿಪರಾರೋ
ಸಾನುರಾಗದಿ ಬೇಡಲರಿಯದ
ಜ್ಞಾನಹೀನರ ತಪ್ಪನೆಣಿಸದೆ
ನೀನೆ ಕೈಪಿಡಿದೆತ್ತಿ ರಕ್ಷಿಸು
ಮಾನನಿಧಿ ರಘುರಾಮವಿಠಲ ೩

## ೧೫

ಹಲವು ಸಂಭ್ರಮಗಳಿಂ ಮನೆ ಕಟ್ಟಿದೀ ದೇವ ಪ

ನೆಲೆಗೆಡಿಸಿ ಅದನಿಂದು ಕೆಡಹುತಿರುವೀ ಅ.ಪ

ಪ್ರಾರಬ್ಧಕರ್ಮವೆಂತೆಂಬ ಹಳ್ಳವ ತೋಡಿ
ಆರು ಜನ ಕೆಲಸಗಾರರನಲ್ಲಿ ಕೂಡಿ
ಮೀರಿ ಮಾಯೆಯ ಭಾರಿ ಕಲ್ಕೆಸರುಗಳ ಹೂಡಿ
ಭಾರಿನೆಲಗಟ್ಟು ರಚಿಸಿದರೊಂದುಗೂಡಿ ೧

ಎಲುವಿನ್ಹಂದರ ಹರಹಿ ಬಲಿದ ಮಾಂಸದ ಗೋಡೆಗಳ ಮೇಲೆ
ಚೆಲುವ ಚರ್ಮ ಹೊದ್ದಿಸಿ
ಜಲರಕ್ತ ಕಾಲ್ವೆಗಳ ಹರಿಸಿ । ಸ್ವಚ್ಛತೆಯಿರಿಸಿ
ಬಲುಉಸಿರುಬಲದಿಂದಲದ ಚಲನಗೊಳಿಸಿ ೨

ಐದು ಇಂದ್ರಿಯಗಳೇ ದ್ವಾರ ಕಿಟಕಿಗಳಾಗೆ
ಐದುಬಗೆ ವಿಷಯಗಳು ಆಹಾರವಾಗೆ
ವೈದು ಯಮಪುರಿಗೆ ತಳ್ಳಿಸಲುಣಿಸನಿದನುಂಡು
ಐದಿದುದು ನರಕಕೂಪಕೆ ಜೀವದಂಡು ೩

ಕ್ಷೇತ್ರಜ್ಞ ನೀನು ನಿನ್ನಯ ಕಣ್ಣಮುಂದಿಂತು
ಗಾತ್ರದಲಿ ವಾಸಿಪ ಜೀವನು ನಿನ್ನ ಮರೆತು
ಕ್ಷೇತ್ರಘಾತಕಕಾರ್ಯವೆಸಗುತಿರಲಂಧದಂದೆ
ನೇತ್ರ ಹಸ್ತಗಳ ಛೇದಿಸದೆ ಉಳುಹಿದೆಯೆಂತು ೪

ಸರ್ವಸ್ವತಂತ್ರನೀ ಜೀವ ಪರತಂತ್ರನವ
ಗರ್ವ ಅಜ್ಞಾನ ಅಂಧತೆಗಳಲಿ ಸಿಲುಕಿ
ಸರ್ವ ದುಷ್ಕರ್ಮಗಳ ನಡೆಸಿ ಕೆಡಸಿಹನಿದನು
ಸರ್ವದಾ ಕ್ಷಮಿಸಿ ಪೊರೆ ರಘುರಾಮವಿಠಲ ೫

# ಪ್ರಸ್ತಾವನೆ

ಈ ಕೀರ್ತನೆಗಳ ಕರ್ತೃಗಳಾದ ಚಿಟ್ಟೂರು ಶ್ರೀನಿವಾಸರಾಯರು ಸುಮಾರು ೧೮೯೦ರಲ್ಲಿ ಸ್ವಾಮಿರಾವ್ ಮತ್ತು ಹುಚ್ಚವ್ವ ಎಂಬ ಬ್ರಾಹ್ಮಣ ಮಾಧ್ವ ದಂಪತಿಗಳಿಗೆ ಮಗನಾಗಿ ಬಹುಶಃ ಸೊರಬದ ಸಮೀಪದ ಚಿಟ್ಟೂರಿನಲ್ಲಿ ಜನಿಸಿದರು. ಸಾಮಾನ್ಯ ವಿದ್ಯಾಭ್ಯಾಸದ ಜೊತೆಗೆ ಸಂಸ್ಕೃತವನ್ನೂ, ಶಾಸ್ತ್ರಾಭ್ಯಾಸವನ್ನೂ ಶ್ರೀನಿವಾಸರಾಯರು ಮಾಡಿದಂತಿದೆ. ಅವರು ವಂಶಪಾರಂಪರ್ಯವಾಗಿ ಬಂದ ಸೊರಬ ತಾಲ್ಲೂಕಿನ ಶಿಗ್ಗ, ಇಂದುವಳ್ಳಿ ಗ್ರಾಮಗಳ ಶ್ಯಾನುಭೋಗಿಕೆಯನ್ನು ನೋಡಿಕೊಳ್ಳುವುದರ ಜೊತೆಗೆ ರೆವೆನ್ಯೂ ಇಲಾಖೆಯಲ್ಲಿ ಕೆಲಸಕ್ಕೂ ಸೇರಿಕೊಂಡರು. ಒಂದು ಸಂದರ್ಭದಲ್ಲಿ ಮೇಲಿನ ಅಧಿಕಾರಿಯು ಒಂದು ದಿನ ರಜ ಕೊಡಲು ನಿರಾಕರಿಸಿದ್ದರಿಂದ ರಾಯರು ಆಗಿಂದಾಗಲೇ ಕೆಲಸಕ್ಕೆ ರಾಜಿನಾಮೆ ಕೊಟ್ಟ ಸ್ವಾಭಿಮಾನಿಗಳು. ನಂತರ ಎರಡನೆಯ ಜಾಗತಿಕ ಯುದ್ಧದ ಕಾಲದಲ್ಲಿ ಸರ್ಕಾರದವರು ಜನಗಳಿಗೆ ಯುದ್ಧದ ಬಗ್ಗೆ ಸೂಕ್ತ ತಿಳುವಳಿಕೆ ಕೊಡಲು ಒಳ್ಳೆಯ ವಾಗ್ಮಿಗಳಾದ ಇವರನ್ನು ವಾರ್‌ಫ್ರಂಟ್ ಲೆಕ್ಚರರ್ ಆಗಿ ನೇಮಿಸಿದರು. ಆ ಕೆಲಸದಲ್ಲಿ ರಾಯರು ಜನರ ಮತ್ತು ಸರ್ಕಾರದ ಮೆಚ್ಚುಗೆ ಪಡೆದರು.

ಶ್ರೀನಿವಾಸರಾಯರಿಗೆ ಚಿಕ್ಕಂದಿನಿಂದಲೂ ಕವನ, ನಾಟಕ ಮೊದಲಾದವುಗಳನ್ನು ರಚಿಸುವುದರಲ್ಲಿ ಬಹಳ ಆಸಕ್ತಿ. ಮಂತ್ರಾಲಯದ ಶ್ರೀ ರಾಘವೇಂದ್ರ ಸ್ವಾಮಿಗಳ ಪರಮ ಭಕ್ತರಾಗಿದ್ದು ಅವರ ಅನುಗ್ರಹಕ್ಕೆ ಪಾತ್ರರಾಗಿದ್ದರು. ಶಿವಮೊಗ್ಗ, ಉಡುಗಣಿ, ಕಡೂರು, ದಾವಣಗೆರೆ ಮೊದಲಾದ ಪಟ್ಟಣಗಳಲ್ಲಿ ಶ್ರೀ ಸ್ವಾಮಿಗಳ ಬೃಂದಾವನ ಸ್ಥಾಪನೆ ಮುಂತಾದ ಸಂದರ್ಭಗಳಲ್ಲಿ ಭಾಗವಹಿಸಿ ಸ್ತೋತ್ರಗಳನ್ನು ರಚಿಸಿದ್ದಾರೆ.

ಒಮ್ಮೆ ಬೇಲೂರಿಗೆ ಹೋಗಿದ್ದಾಗ ಸ್ವಪ್ನದಲ್ಲಿ 'ಶ್ರೀಶಕೇಶವ' ಅಂಕಿತ ಸೂಚಿತವಾಯಿತೆಂದು ತಿಳಿಯುತ್ತದೆ. ಅಂದಿನಿಂದ ಚಿಟ್ಟೂರು ಶ್ರೀನಿವಾಸರಾಯರು ಶ್ರೀಶಕೇಶವದಾಸರಾದರು. ಅವರು ಅನೇಕ ಕೀರ್ತನೆ, ಲಾವಣಿಗಳನ್ನೂ 'ಪುರಂದರ ವಿಜಯ' ಎಂಬ ನಾಟಕವನ್ನೂ 'ಉಲ್ಟಿಗಂಗಾ' 'ಅನುಕೂಲ ಸಿಂಧು', 'ಫ್ಯಾಷನ್ ಪಿಶಾಚಿ' ಎಂಬ ಪ್ರಹಸನಗಳನ್ನೂ ರಚಿಸಿದ್ದಾರೆ. ಸುಮಾರು ೬೫ ವರ್ಷಗಳ ಸಾರ್ಥಕ ಜೀವನ ನಡೆಸಿ ಶ್ರೀಶ ಕೇಶವದಾಸರು ೧೯೫೫ರಲ್ಲಿ ಸ್ವರ್ಗಸ್ಥರಾದರು.

ಹರಿಹರದ ಶ್ರೀ ರಾಘವೇಂದ್ರ ಸ್ವಾಮಿ ಬೃಂದಾವನ ಪ್ರತಿಷ್ಠಾಪನ ಸಮಿತಿಯ ವತಿಯಿಂದ ೧೯೮೦ರಲ್ಲಿ ದಾಸರ ೧೮ ಕೃತಿಗಳನ್ನು ಅವರ ಮಗ ಶ್ರೀ ಸಿ.ಎಸ್. ನರಸಿಂಹಮೂರ್ತಿಯವರು ಮುದ್ರಿಸಿ ಪ್ರಕಟಿಸಿದ್ದಾರೆ. ಈ ಸಂಗ್ರಹಕ್ಕೆ ಅದೇ ಆಕರವಾಗಿದ್ದು ಅದರಿಂದ ೧೪ ಕೀರ್ತನೆಗಳನ್ನು ಆಯ್ದುಕೊಳ್ಳಲಾಗಿದೆ.

ಶ್ರೀಶ ಕೇಶವದಾಸರು ಶ್ರೀ ರಾಘವೇಂದ್ರ ಸ್ವಾಮಿಗಳ ಪರಮ ಭಕ್ತರಾಗಿದ್ದರೆಂದು ಹಿಂದೆಯೇ ತಿಳಿಸಿದೆ. ಈ ಸಂಗ್ರಹದಲ್ಲಿನ ೧೪ ಕೀರ್ತನೆಗಳಲ್ಲಿ ೯ ಕೀರ್ತನೆಗಳು ಶ್ರೀ ಸ್ವಾಮಿಗಳ ಸ್ತೋತ್ರಗಳೇ ಆಗಿದ್ದು ಅನೇಕವು ಸಾಂದರ್ಭಿಕವಾಗಿವೆ. ಕೀರ್ತನೆಗಳು ಸರಳವೂ ಒಳ್ಳೆಯ ಗೇಯಗುಣವುಳ್ಳವೂ ಆಗಿರುವುದನ್ನು ಗಮನಿಸಬಹುದು.

ಈ ಸಂಗ್ರಹಕ್ಕೆ ಆಕರ ಸಾಮಗ್ರಿಯನ್ನೂ, ಶ್ರೀ ದಾಸರ ಜೀವನಕ್ಕೆ ಸಂಬಂಧಪಟ್ಟ ಮಾಹಿತಿಯನ್ನೂ ಒದಗಿಸಿದ ದಾಸರ ತೃತೀಯ ಪುತ್ರರಾದ ಶ್ರೀ ಸಿ.ಎಸ್. ಹುಚ್ಚರಾವ್, ಬೆಂಗಳೂರು ಅವರಿಗೆ ನಮ್ಮ ಕೃತಜ್ಞತಾಪೂರ್ವಕ ವಂದನೆಗಳು.

ಎ.ಎನ್. ಅನಂತಸ್ವಾಮಿ ರಾವ್

## ಕೀರ್ತನೆಗಳ ಕ್ರಮಸೂಚಿ

## ಶ್ರೀಹರಿಸ್ತುತಿ

### ೧

ಜೈ ಜೈ ವಿಠ್ಠಲ ಪಾಂಡುರಂಗ ।
ಜೈ ಹರಿ ವಿಠ್ಠಲ ಪಾಂಡುರಂಗ ೧

ಮಕರಕುಂಡಲಧರ ಪಾಂಡುರಂಗ ।
ರಕುಮಾಯೀಧವ ಪಾಂಡುರಂಗ ೨

ರಾಧಾರಾಧಿತ ಪಾಂಡುರಂಗ ।
ಸಾಧುಜನಾರ್ಚಿತ ಪಾಂಡುರಂಗ ೩

ನೀಲಶರೀರ ಪಾಂಡುರಂಗ ।
ಕಾಲಾಂತಕಪ್ರಿಯ ಪಾಂಡುರಂಗ ೪

ಸರಸಿಜವದನ ಪಾಂಡುರಂಗ ।
ಕರಿರಾಜವರದ ಪಾಂಡುರಂಗ ೫

ವನಜಲೋಚನ ಪಾಂಡುರಂಗ ।
ವನಜಾಸನನುತ ಪಾಂಡುರಂಗ ೬

ಕಟಿಕರದ್ವಯ ಪಾಂಡುರಂಗ ।
ಕುಟಿಲಾಂತಕಹರೆ ಪಾಂಡುರಂಗ ೭

ಪಾವನಚರಣ ಪಾಂಡುರಂಗ ।
ಭಾವಜಪಿತಹರೆ ಪಾಂಡುರಂಗ ೮

ಮಣಿಮಕುಟಧರ ಪಾಂಡುರಂಗ ।
ಫಣಿಪತಿಶಯನ ಪಾಂಡುರಂಗ ೯

ಸಿರಿವತ್ಸಾಂಕಿತ ಪಾಂಡುರಂಗ ।
ದುರಿತವಿದೂರ ಪಾಂಡುರಂಗ ೧೦

ವನಮಾಲಾಂಕಿತ ಪಾಂಡುರಂಗ ।
ವನಜನಾಭಹರೆ ಪಾಂಡುರಂಗ ೧೧

ಪೀತಾಂಬರಧರ ಪಾಂಡುರಂಗ ।
ವಾತಾತ್ಮಜನುತ ಪಾಂಡುರಂಗ ೧೨

ಖಗಪತಿವಾಹನ ಪಾಂಡುರಂಗ ।
ಜಗದೋದ್ಧಾರ ಪಾಂಡುರಂಗ ೧೩

ಪಂಡರಾಪುರಾಧಿಪ ಪಾಂಡುರಂಗ ।
ಪುಂಡರೀಕವರದ ಪಾಂಡುರಂಗ ೧೪

ಮೀನಶರೀರ ಪಾಂಡುರಂಗ ।
ದೀನಮಂದಾರ ಪಾಂಡುರಂಗ ೧೫

ಮಂದರಧರ ಶ್ರೀ ಪಾಂಡುರಂಗ ।
ಸಿಂಧುಶಯನಹರೆ ಪಾಂಡುರಂಗ ೧೬

ಸೂಕರರೂಪಕ ಪಾಂಡುರಂಗ ।
ಶ್ರೀಕರಸೇವಿತ ಪಾಂಡುರಂಗ ೧೭

ನರಕಂಠೀರವ ಪಾಂಡುರಂಗ ।
ನರಕಾಂತಕಹರೆ ಪಾಂಡುರಂಗ ೧೮

ವಾಮನವೇಷ ಪಾಂಡುರಂಗ ।
ಸಾಮಗಾನಪ್ರಿಯ ಪಾಂಡುರಂಗ ೧೯

ಕ್ಷಾತ್ರಕುಲಾಂತಕ ಪಾಂಡುರಂಗ । ಧಾತ್ರೀರಮಣ ಪಾಂಡುರಂಗ ೨೦

ರಾಮಚಂದ್ರಹರೆ ಪಾಂಡುರಂಗ ।
ಕಾಮಿತಫಲದ ಪಾಂಡುರಂಗ ೨೧

ದೇವಕಿನಂದನ ಪಾಂಡುರಂಗ ।
ಪಾವನಚರಿತ ಪಾಂಡುರಂಗ ೨೨

ಬತ್ತಲೆನಿಂದಿಹ ಪಾಂಡುರಂಗ ।
ಉತ್ತಮದೇವನೆ ಪಾಂಡುರಂಗ ೨೩

ತೇಜಿಯನೇರಿದ ಪಾಂಡುರಂಗ ।
ಸೋಜಿಗಪುರುಷನೆ ಪಾಂಡುರಂಗ ೨೪

ಗಾನವಿನೋದಿ ಪಾಂಡುರಂಗ ।
ಭಾನುಪ್ರಕಾಶ ಪಾಂಡುರಂಗ ೨೫

ಸುರನರವಂದಿತ ಪಾಂಡುರಂಗ ।
ಸುರಭಿನಿವಾಸ ಪಾಂಡುರಂಗ ೨೬

ಮುಕುತಿದಾಯಕ ಪಾಂಡುರಂಗ ।
ಭಕುತಪೋಷಕ ಪಾಂಡುರಂಗ ೨೭

ಅಗಣಿತಗುಣಗಣ ಪಾಂಡುರಂಗ ।
ತ್ರಿಗುಣಾತೀತಾ ಪಾಂಡುರಂಗ ೨೮

ಚಂದ್ರಭಾಗನುತ ಪಾಂಡುರಂಗ ।
ಚಂದ್ರಮೌಳಿಹಿತ ಪಾಂಡುರಂಗ ೨೯

ಸುರನದಿಜನಕ ಶ್ರೀ ಪಾಂಡುರಂಗ ।
ಸುರಮುನಿಸನ್ನುತ ಪಾಂಡುರಂಗ ೩೦

ಜ್ಞಾನಿಗಳರಸನೆ ಪಾಂಡುರಂಗ ।
ದಾನವಾಂತಕ ಪಾಂಡುರಂಗ ೩೧

ಭಾಸುರಾಂಗ ಶ್ರೀ ಪಾಂಡುರಂಗ ।
ಭೂಸುರವಂದಿತ ಪಾಂಡುರಂಗ ೩೨

ಅಷ್ಟಕರ್ತೃಪ್ರಿಯ ಪಾಂಡುರಂಗ ।
ಸೃಷ್ಟಿಗೊಡೆಯ ಶ್ರೀ ಪಾಂಡುರಂಗ ೩೩

ಸರ್ವವ್ಯಾಪಕ ಪಾಂಡುರಂಗ ।
ಉರ್ವಿರಮಣ ಪಾಂಡುರಂಗ ೩೪

ಕೃತಿರಮಣಹರೆ ಪಾಂಡುರಂಗ ।
ಶೃತಿತತಿವಿನುತ ಪಾಂಡುರಂಗ ೩೫

ಜೀವನಿಯಾಮಕ ಪಾಂಡುರಂಗ ।
ಜೀವೋತ್ತಮನುತ ಪಾಂಡುರಂಗ ೩೬

ಲೋಕನಾಯಕ ಪಾಂಡುರಂಗ ।
ನಾಕಾಧಿಪನುತ ಪಾಂಡುರಂಗ ೩೭

ವೇದವೇದ್ಯವಿಭೋ ಪಾಂಡುರಂಗ ।
ಮೋದದಾಯಕ ಪಾಂಡುರಂಗ ೩೮

ಯೋಗಿರಾಜ ಶ್ರೀ ಪಾಂಡುರಂಗ ।
ಭಾಗವತಪ್ರಿಯ ಪಾಂಡುರಂಗ ೩೯

ಪುರಾಣಪುರುಷ ಪಾಂಡುರಂಗ ।
ಕರುಣಿಗಳರಸನೆ ಪಾಂಡುರಂಗ ೪೦

ಪಾಪನಾಶಕ ಪಾಂಡುರಂಗ ।
ತಾಪತ್ರಯಹರೆ ಪಾಂಡುರಂಗ ೪೧

ಧರ್ಮಸ್ಥಾಪಕ ಪಾಂಡುರಂಗ ।
ಕರ್ಮಾಧಿಪತೆ ಪಾಂಡುರಂಗ ೪೨

ಕಪಿಲವತಾರ ಪಾಂಡುರಂಗ ।
ಕಪಟನಾಟಕ ಪಾಂಡುರಂಗ ೪೩

ಆದಿರಹಿತಹರೆ ಪಾಂಡುರಂಗ ।
ಬಾದರಾಯಣ ಪಾಂಡುರಂಗ ೪೪

ನೊಂದೆನೋ ಭವದೊಳು ಪಾಂಡುರಂಗ ।
ಮುಂದೆ ದಾರಿಯೇನೋ ಪಾಂಡುರಂಗ ೪೫

ದಾಸಜನಪ್ರಿಯ ಪಾಂಡುರಂಗ ।
ಪಾಶಪರಿಹರಿಸೊ ಪಾಂಡುರಂಗ ೪೬

ಎಷ್ಟು ಮಹಿಮೆಯೋ ಪಾಂಡುರಂಗ ।
ಎಷ್ಟು ಪೊಗಳಲೋ ಪಾಂಡುರಂಗ ೪೭

ಕಷ್ಟ ಬಿಡಿಸೋ ನೀ ಪಾಂಡುರಂಗ ।
ಇಷ್ಟದಾಯಕ ಪಾಂಡುರಂಗ ೪೮

ಜನಿಸಲಾರೆನೊ ಪಾಂಡುರಂಗ ।
ಜನುಮ ನೀಗಿಸೊ ಪಾಂಡುರಂಗ ೪೯

ನಿನ್ನ ನಂಬಿಹೆನೋ ಪಾಂಡುರಂಗ ।
ಘನ್ನಮಹಿಮನೆ ಪಾಂಡುರಂಗ ೫೦

ನೀನೆ ಗತಿಯೋ ಹೇ ಪಾಂಡುರಂಗ ।
ದೀನವತ್ಸಲನೆ ಪಾಂಡುರಂಗ ೫೧

ಬೇಡುವೆನನುದಿನ ಪಾಂಡುರಂಗ ।
ನೀಡೋ ನಿನ್ನಯ ಪಾದ ಪಾಂಡುರಂಗ ೫೨

ಜಯಮಂಗಳಹರೆ ಪಾಂಡುರಂಗ ।
ಶುಭಮಂಗಳಹರೆ ಪಾಂಡುರಂಗ ೫೩

ದೋಷದೂರಹರೆ ಪಾಂಡುರಂಗ ।
ಶ್ರೀಶಕೇಶವ ಪಾಂಡುರಂಗ ೫೪

೨

ನೊಂದೆನೊ ಭವದೊಳಗೆ । ಗೋಪಾಲ ।
ಇಂದು ನೀ ಕಾಯಬೇಕು । ಗೋಪಾಲ ಪ

ಸಿಂಧುಶಯನಯನ್ನ । ಕುಂದುಗಳೆಣಿಸದೆ ।
ಬಂದು ನೀ ಸಲಹಬೇಕೋ । ಗೋಪಾಲ ಅ. ಪ

ನಾನಾಜನುಮದಿ । ನಾನಾರೂಪವ ।
ನಾನೆನಿತಾಂತೆನೋ । ಮಾನನಿಧೇ ॥
ಹೀನಜನರ ಕೂಡಿ । ನಾನರಿಯದೆ ನಿನ್ನ ।
ಶ್ವಾನನಂತಾದೆನಲ್ಲೋ । ಗೋಪಾಲ ೧

ಎಳೆಯತನದಿ ನಾ । ಬೆಳೆದೆನೊ ಲೀಲೆಯೋಳ್ ।
ಇಳೆಯಭೋಗಕೆ । ಮನವೆಳೆದಿತೊಪ್ರಾಯ ॥
ಕಳೆಯಲು ಪ್ರಾಯವು । ಗಳಿತುದು ಕಾಯ ।
ಬಳಲುವೆನಿಳೆಯೊಳಗೆ । ಗೋಪಾಲ ೨

ಸಿರಿಯತನದಿ ನಾ । ಮರೆಯುತ ನಿನ್ನನು ।
ಪರಿಪರಿವಿಭವದಿ । ಮೆರೆದೆನೊ ಜೀಯ ॥
ಸಿರಿಯು ತಾ ತೊಲಗಲು । ಹೆರರ ಹಾರೈಸಿದೆ ।
ಪೊರೆಯುವರಾರಿಹರೋ । ಕೃಪಾಳೋ ೩

ಎನ್ನಪರಾಧ ಗ । ಳಿನ್ನು ಗಣನೆಯಿಲ್ಲ ।
ಉನ್ನತಮಹಿಮನೆ । ಘನ್ನಸಂಪನ್ನ ॥
ಮುನ್ನಮಾಡಿದ । ಪರಾಧಗಳೆಣಿಸದೆ ।
ಮನ್ನಿಪರಾರಿಹರೋ । ಮುರಾರೆ ೪

ಆಶಪಾಶಂಗಳು । ಬೀಸಿದ ಬಲೆಯೊಳು ।
ಮೋಸದಿ ಸಿಲುಕುತೆ । ಘಾಸಿಯಾಗಿಹೆನೊ ॥
ಶ್ರೀಶಕೇಶವ । ಯನ್ನಕ್ಲೇಶಗಳಳಿಯುತೆ ।
ದಾಸನೆಂದೆನಿಸೊ ನಿನ್ನಾ । ಗೋಪಾಲ ೫

೩

ಸಿರಿವರಾ । ಬಾ ಸುಂದರಾ ॥
ಸುರಭೀಶ ಸುರನುತ ! ಸಿರಿವತ್ಸಭೂಷಿತ ಪ

ದಂಡಾವತಿಯವರ । ದಂಡೇಯೋಳ್ ನೆಲಸಿದ ।
ಪುಂಡರೀಕಾಕ್ಷ ಕೋ । ದಂಡಪಾಣಿ ಹರೇ ಬಾ ಸುಂದರಾ ೧

ನಂದಗೋಪನ ಕಂದ । ನಂದಭದ್ರೆಯರಿಂದ ।
ನಿಂದು ಕ್ಷೀರದಿ ಮಿಂದು । ಸಿಂಧುಶಯನ ಹರೇ ಬಾ ಸುಂದರಾ ೨

ಮಂಗಳ ಮಹಿಮ ಶ್ರೀ । ರಂಗನಾಥನೆ ಪೊರೆ ।
ಅಂಗಜಪಿತ ಯದು । ಪುಂಗವ ಶ್ರೀಶಕೇಶವ ಬಾ ಸುಂದರಾ ೩

## ವಾಯುದೇವರು

೪

ಬಾರಯ್ಯ ಬಾರೋ ಮಾರುತಿ ಪ

ಅಕ್ಷಯಕುವರನ । ಕುಕ್ಷಿಯನೋಡಲು ।
ಪಕ್ಷಿವಾಹನರಾಮು । ಈಕ್ಷಣ ಕರೆವ ಬಾ ೧

ದುರುಳ ದುಶ್ಶಾಸನನ । ಉದರವ ಭಂಗಿಸೆ ।
ತರಳೆದ್ರೌಪತಿ ದೇವಿ । ಕರೆದಳೊ ಬೇಗ ೨

ಮಧ್ವಮುನಿಯೆ ನಿನ್ನ । ಶುದ್ಧತತ್ವದಿ ನಮ್ಮ ।
ಉದ್ಧರಿಸಲು । ಅನಿರುದ್ಧನು ಕರೆವ ಬಾ ೨

ಜಗದಿ ಭ್ರಾಂತೇಶನೆ । ಮೃಗಯಾಪುರದೊಳು ।
ಮಿಗಿಲು ರಥವನೇರಿ । ಸೊಗಸಿಲಿ ಬೇಗ ಬಾ ೪

ಶ್ರೀಶಕೇಶವದೂತ । ಭೂಸುರವಿನುತ ।
ದಾಸರ ಸಲಹಲಿನ್ । ಈ ಸಮಯದಿ ಬೇಗ ೫

## ರಾಘವೇಂದ್ರ ಸ್ವಾಮಿಗಳು

೫

ಅಂತರಂಗದಿ ಹರುಷವಾಂತೆವೈ ಗುರುವೆ ಪ

ಸಂತಸದಿ ಸೇವೆಗಳ ಸ್ವೀಕರಿಸು ಪ್ರಭುವೆ ಅ. ಪ

ಮಂಗಳಾಂಗಿಯರೆಲ್ಲ ಮಿಂದು ಮಡಿಗಳನ್ನುಟ್ಟು ।
ಮಂಗಳಾತ್ಮಕ ನಿನಗೆ ಮಜ್ಜನವ ಗೈಸೆ ॥
ಅಂಗಳದಿ ದಧಿಕ್ಷೀರ ಘೃತಕುಂಭಗಳಧರಿಸಿ ।
ಸಿಂಗರದಿ ನಿಂದಿಹರೊ ಗುರುರಾಘವೇಂದ್ರ ೧

ಧಾರುಣೀಸುರರೆಲ್ಲ ಧೀರಯತಿವರ ನಿನಗೆ ।
ಚಾರುವಿಭವದಿ ಕವಚ ಧಾರಣೆಯ ಗೈಸೆ ॥
ಸೇರಿ ನುತಿಸುತೆ ನಿನ್ನ ಸಾರಗುಣ ಸಂಪನ್ನ ।
ಸಾರಿಹರೊ ನಿನ್ನಡಿಗೆ ಗುರುರಾಘವೇಂದ್ರ ೨

ನಿಂದು ಭೂಸುರರೆಲ್ಲಾ ಜಯಜಯ ಜಯವೆನಲು।
ಮಂದಹಾಸದಲವರ ಸೇವೆಯನು ಕೊಂಡೆ ॥
ಇಂದು ಬೃಂದಾವನದಿ ನಿಂದು ದರ್ಶನವಿತ್ತೆ ।
ಕುಂದದಿಷ್ಟವ ಸಲಿಸೊ ಗುರುರಾಘವೇಂದ್ರ ೩

ಉಡುರಾಶಿಗಳ ಮಧ್ಯೆ ಉಡುಪ ಮೆರೆಯುವ ತೆರದಿ ।
ಉಡುಗಣಿಕ್ಷೇತ್ರದೊಳು ನಿಂದು ಮೆರೆದೆ ॥
ಕಡುಮಮತೆಯಲಿ ನಿನ್ನ ಸಡಗರದಿ ಸೇವಿಪರ ।
ಎಡರುಗಳ ಪರಿಹರಿಸೊ ಗುರುರಾಘವೇಂದ್ರ ೪

ನರಹರಿಯ ಮೆಚ್ಚಿಸಿದೆ ಪ್ರಹ್ಲಾದನೆನಿಸುತಲೆ ।
ಸಿರಿಕೃಷ್ಣನೊಲಿಸಿದಿಯೊ ವ್ಯಾಸಮುನಿ ॥
ಸಿರಿರಾಮಚಂದ್ರಪ್ರಿಯ ಗುರುರಾಘವೇಂದ್ರನೆ ।
ಕರುಣದಲಿ ತೋರೀಗ ಶ್ರೀಶಕೇಶವನ ೫

೬

ಕರುಣಾಸಾಗರ ಬಾ ಗುರುವೆ ।
ಚರಣ ಕಮಲವನು ಸಾರಿದೆನೈ ಸ್ವಾಮಿ ಪ

ಏನೆಂದು ಬಣ್ಣಿಪೆ । ದೀನವತ್ಸಲಪ್ರಭುವೆ ।
ಸಾನುರಾಗದಿ ನಿನ್ನ ಧ್ಯಾನಿಪೆನೈ ಜೀಯ ೧

ಗುರುರಾಘವೇಂದ್ರನೆ । ಶರಣರ ಸುರತರುವೆ ।
ನಿರುತ ಎಮ್ಮೊಳು ಕೃಪೆಯ ತೋರಿದಿರೈ ಸ್ವಾಮಿ ೨

ಶ್ರೀ ಸುಧೀಂದ್ರಾರ್ಯರ । ಭಾಸುರಪ್ರಿಯತನಯ ।
ಶ್ರೀಶಕೇಶವನೊಲುಮೆ ಯಾಚಿಸುವೈ ಪ್ರಭುವೆ ೩

೭

ಗುರುರಾಜ ನಿನ್ನ ಹೊರತು ಪೊರೆವ ಧೊರೆಗಳ ಕಾಣೆ ।
ಶರಣಜನರಿಷ್ಟವನೆ ಸುರತರುವಿನಂತೀವೆ ಪ

ತರಳಪ್ರಹ್ಲಾದನಾಗಿರಲು ವರಭಕುತಿಯಿಂ ।
ನರಹರಿಯ ಮೆಚ್ಚಿಸಿದೆ ಪರಮಕರುಣಾಸಿಂಧೊ ೧

ವ್ಯಾಸಮುನಿಯು ನೀನೆ ವಾಸುದೇವನ ಭಜಿಸಿ ।
ಲೇಸಾದ ಚಂದ್ರಿಕೆಯ ಭೂಸುರರಿಗರುಹಿದೆ ೨

ಶ್ರೀರಾಮಚಂದ್ರಪದಸರಸೀರುಹಾಭೃಂಗ ।
ಶ್ರೀ ರಾಘವೇಂದ್ರಯತಿ ಸುರುಚಿರಕೃಪಾಪಾಂಗ ೩

ನರಹರಿ ಸಿರಿರಾಮ ಮುರವೈರಿ ಮುನಿವ್ಯಾಸ ।
ಇರುತಿಹರು ನಿನ್ನೊಳು ಧರೆಯ ಪಾಲಿಸೆ ಮುದದಿ ೪

ಕರೆದಲ್ಲಿ ಬರುವೆನೆಂದೊರೆದ ವಚನವ ಸಲಿಸೆ ।
ಭರದಿ ನಾರಾಯಣಪುರಕ್ಕೈದಿದಿಯೊ ಮುದದಿ ೫

ಭೀಮಸೇತ್ವಾಖ್ಯ ಮಠ ಸೋಮರಘುತಿಲಕರಿಂ ।
ದೇ ಮಹಾಸೇವೆಯ ಕೈಗೊಂಡೆಯೋ ಮುದದಿ ೬

ದೋಷದೂರನೆ ಪ್ರಭುವೆ ಆಶೆಯಿಂ ಸೇವಿಪರ ।
ಕ್ಲೇಶವೆಲ್ಲವನಳಿದು ಶ್ರೀಶಕೇಶವನೊಲಿಸೊ ೭

೮

ಚರಣಕಮಲಯುಗಕೆ ನಮಿಪೆ ನಿರುತವನುದಿನ ।
ಶ್ರೀ ರಾಘವೇಂದ್ರ ಪ

ಪರಿಪರಿ ಶರಣರ ಪೊರೆಯುವ
ಕರುಣಾಸಾಂದ್ರ ಯತಿಕುಲೇಂದ್ರ ಅ. ಪ

ವೇನಮತವಿದಾರ ಸುಂದರ ಜ್ಞಾನದಾತ ಗುರುವರ ।
ಶ್ರೀನಾಥನ ಪದಪಂಕಜಧ್ಯಾನನಿರತ ಸುಗುಣಭರಿತ ೧

ಮಧ್ವಶಾಸ್ತ್ರಪಠಿಸಿ ಬಹುಪ್ರಸಿದ್ಧಟೀಕೆ ರಚಿಸುತ ।
ಸದ್ವೈಷ್ಣವ ಸಿದ್ಧಾಂತವೇ ಶುದ್ಧವೆನಿಸಿ ಮೆರೆದ ಧೀರಾ ೨

ನರಹರಿ ಸಿರಿರಾಮಕೃಷ್ಣ ವರವೇದವ್ಯಾಸರು ।
ಇರುತಿರುವರು ನಿನ್ನೊಳು ತವ ಪರಿಜನ ಸೇವೆಗಳ ಕೊಳುತ 3

ವಾರಾಹಿ ಸುಕ್ಷೇತ್ರನಿಲಯ ಚಾರುಚರಿತ ಗುಣಮಯ ।
ಆರಾಧಿಪ ದೀನಾಳಿಗೆ ಸಾರಸೌಖ್ಯವೀವ ಕಾವ 4

ಶ್ರೀಶಕೇಶವಾಂಘ್ರಿದೂತ ದಾಸಜನನುತ ।
ಲೇಸಾಗಿಹ ಭೂಸುರ ಸಹವಾಸವಿತ್ತು ಕರುಣಿಸಯ್ಯ 5

೯

ತುಂಗಾತೀರದಿ ನೆಲಸಿಹಗೆ ।
ಮಂಗಳ ಗುರು ರಾಘವೇಂದ್ರನಿಗೆ ।
ಗಂಗಾಜನಕನ ಭಕುತ ಶ್ರೇಷ್ಠ ಯತಿ ।
ಪುಂಗವನೆನಿಸುತೆ ಮೆರೆವವಗೆ ॥ಮಂಗಳಂ ಜಯ ಮಂಗಳಂ॥ ಪ

ದಾವಣಗೆರೆಯೊಳು ನಿಂದವಗೆ।
ಕೋವಿದ ಭೂಸುರ ಸೇವ್ಯನಿಗೆ।
ಧಾವಿಸಿ ಬರುತಿಹ ದೀನಜನಾಳಿಗೆ।
ದೇವ ತರುವಿನಂತೀವನಿಗೆ ॥ಮಂಗಳಂ ಜಯ ಮಂಗಳಂ॥ 1

ಮಧ್ವಶಾಸ್ತ್ರ ಪಠಿಸಿರುವವಗೆ ।
ಶುದ್ಧ ಟೀಕೆಗಳ ರಚಿಸಿದಗೆ।
ಸದ್ವೈಷ್ಣವ ಸುಪ್ರೀತನಿಗೆ ಪರಿ ।
ಶುದ್ಧ ಮೂರ್ತಿ ರಾಘವೇಂದ್ರನಿಗೆ ॥ಮಂಗಳಂ ಜಯ ಮಂಗಳಂ॥ 2

ಶ್ರೀ ಸುಧೀಂದ್ರ ಕರಾಜಾತನಿಗೆ ।
ಭಾಸುರ ರಘುವೀರಾರ್ಚಿಪಗೆ।
ಶ್ರೀಶಕೇಶವ ಪಾದಾರಾಧಕಗೆ ಸುರ।
ರೀಶನೆನಿಪ ರಂಗನಾಥನಿಗೆ । ಮಂಗಳಂ ಜಯ ಮಂಗಳಂ॥ 3

## ೧೦

ಧನ್ಯನಾದೆನಾ ಗುರು ಪ

ಸನ್ನುತಾಂಗ ಗುರುರಾಜರ ನೋಡಿ ಅ.ಪ

ಘನ್ನ ಮಹಿಮರಿವರು । ವರ ಪಾವನ್ನಚರಿತರಿವರು ।
ಮುನ್ನ ಮಾಡಿದಪರಾಧಗಳೆಣಿಸದೆ। ಉನ್ನತ
ಸುಖಗಳನೀವರ ನೋಡಿ ೧

ಬುಧರ ಮಹಾತ್ಮಭುವೋ। ಭಜಿಪರ ಮಧುರ ಸುರದ್ರುಮವೋ।
ಸುಧೆಗೆ ಪರಿಮಳವ ರಚಿಸಿದ ವಸುಧೆಯೊಳು।
ಅಧಮರ ಮುರಿದಿಹ ಧೀರರ ನೋಡಿ ೨

ಶ್ರೀಶ ಕೇಶವನ್ನ । ಮನದೊಳುಪಾಸನೆಗೈವರನು ।
ಭಾಸುರಾಂಗ ಯತಿರಾಘವೇಂದ್ರರನು। ಈ ಸಮಯದಿ
ಕೊಂಡಾಡುತೆ ನೋಡಿ ೩

## ೧೧

ಪರಮ ಸುಗುಣಸಾಂದ್ರ ಗುರುರಾಘವೇಂದ್ರ ಪ

ಕರುಣಾಳೋ ಮುನಿ । ವಂಶಸುಧಾಕರ ।
ಗುರುರಾಜ ಪ್ರಭೋ । ಶ್ರೀ ರಾಘವೇಂದ್ರ ಅ.ಪ

ಮುರುಕುಮಂಟಪದೊಳು । ಹರಕುಚಿಂದಿಯನ್ಹೊದ್ದು ।
ಉರಿಯ ಬೆಳಕಿನಲ್ಲಿ । ಪರಿಮಳ ರಚಿಸಿದೆ ॥
ಗುರುಗಳಾಕ್ಷಣ ಕಂಡು । ಪರಮಸಂಭ್ರಮದಿಂದ ।
ಪರಿಮಳಾಚಾರ್ಯನೆಂಬ । ಬಿರುದಿತ್ತು ಕರೆದರೊ ೧

ಜಡಮತಿ ಬ್ರಾಹ್ಮಣ । ಮಿಡುಕಿ ನಿರೂಪಿಸೆ ।
ವಡನೆ ಗಂಧವ ತೇದೆ । ಅನಲನ ಜಪಿಸುತೆ ॥
ಒಡಲ ಬೇಗೆಯಿಂ ಜನರು । ಬಡಬಡಿಸಿದ ಕಂಡು ।
ಕಡಲರಸನ ದಯದಿ । ಕಡುಶಾಂತಿ ಇತ್ತೆಯೊ ೨

ಬಾದರಾಯಣಮುನಿ । ಭೇದಮತವ ಬಿತ್ತೆ ।
ಮೋದತೀರ್ಥರು ತರುವ । ಸಾದರಗೈದರೊ ॥
ಸ್ವಾದಫಲಂಗಳು । ನಿನ್ನಿಂದ ತೋರ್ದವು ।
ಸಾಧುಜನಾರ್ಚಿತ । ಶ್ರೀಶಕೇಶವಪ್ರಿಯ ೩

## ೧೨

ವಂದಿಪೆವು ತವಪಾದಪಂಕಜಕೆ ಶ್ರೀ ರಾಘವೇಂದ್ರ ।
ಇಂದು ಬಿನ್ನೈಸುವೆವು ನಿನ್ನಡಿಗೆ ಪ

ಬಂದಿಹದು ಖರವರುಷ ಜೇಷ್ಠದಿ ।
ಇಂದು ದಿನವಂಭತ್ತು ವದ್ಯದಿ ।
ಇಂದು ನಿಮ್ಮಾಗಮನವತಿಶಯ ।
ವೆಂದು ತೋರುವ ಸುದಿನವೆಮಗೆ ಅ.ಪ

ಕಾಲವನು ಬಣ್ಣಿಸಲು ಭಯವಹುದು । ಏನೆಂದು ಪೇಳಲಿ ।
ನಾಲಿಗೆಯು ಒಣಗುತ್ತಲಿಹುದು ।
ಕಾಲಕಾಲಕೆ ಮಳೆಯು ಬಾರದೆ ।
ಮೇಲೆನಿಪ ಶಾಲ್ಯಾನ್ನವೀದಿನ ।
ಸಾಲದಾಯಿತು ಹಸಿವುತಾಳದೆ । ಕಾಲಪುರಕೈದುವೆವು ಗುರುವೇ ೧

ಹಿಂದೆ ತಂಜಾಊರಿನಲಿ ಕ್ಷಾಮ । ವಂಜಿಸಲು ನಿನಬಳಿ ।
ಬಂದ ರಾಜನ ಮೊರೆಯ ಕೇಳುತಲಿ ।
ಅಂದು ಧಾನ್ಯಾಗಾರದೊಳು ।
"ಶ್ರೀ" ಬೀಜಮಂತ್ರವ ರಚಿಸಿ ಭಕುತರ ।

ಕುಂದುಗಳ ಕಳೆಯುತ್ತಲಕ್ಷಯ ।
ದನ್ನ ವುಣಿಸಿದೆ ಜನಕೆ ಗುರುವೇ ೨

ಧರ್ಮಮಾರ್ಗವೆ ಕಾಣದಂತಾಯ್ತು । ಎಲ್ಲೆಲ್ಲಿ ನೋಡಲ ।
ಧರ್ಮಕೃತಿಗಳೆ ಕಂಡುಬರುತಿಹವು ।
ಕರ್ಮದಲ್ಲಾಸಕ್ತಿ ತೊರೆಯುತೆ ।
ಮರ್ಮವರಿಯಲು ಇಂದು ಜನಪದ
ನಿರ್ಮಲಾತ್ಮಕ ನಿನ್ನ ಬಳಿಯಲಿ ಧರ್ಮಭಿಕ್ಷವ ಬೇಡುತಿಹರೈ ೩

ಅಖಿಲ ಸಜ್ಜನ ನಿಚಯ ಸಹಿತಾಗಿ ನೀನಿಲ್ಲೆ ನೆಲೆಸು ।
ಭಕುತರಿಷ್ಟಾರ್ಥವನು ನೀಡುತಲಿ ।
ಸಕಲಜನ ತವ ಸೇವೆಗೈಯಲು ।
ಲಕುಮಿಯರಸನ ದಯದಿ ಶರಣರ ।
ಕಕುಲತೆಯ ಕಳೆಯುತ್ತಲೆಲ್ಲರ ।
ಮುಕುತರಾಗುವ ತೆರದಿ ಹರಸೈ ೪

ದೇಶದೊಳು ಮಳೆಬೆಳೆಯು ಹುಲುಸಾಗಿ ಸೂಸಿಸಲಿನ್ನು ।
ದೇಶದೊಳು ಸುಖಶಾಂತಿ ಸ್ಥಾಪಿಸಲಿ ।
ಶ್ರೀಶಕೇಶವನಲ್ಲಿ ಭಕುತಿಯ । ಲೇಸೆನಿಪ ಧರ್ಮಾರ್ಥ ಮಾರ್ಗದಿ ।
ಎಸೆವ ರಘುವೀರರ ಸುಸಮ್ಮುಖ ।
ದಾಶೆಯಲಿ ಬಿನ್ನಹ ಗುರುವೇ ೫

## ೧೩

ಶ್ರೀಯತಿವರ ನಮಿಪರ ಸುರತರುವೆ । ಮಮಗುರುವೆ ।
ನಿರುತದಿ ಭಕುತರ ಪೊರೆವೆ ಅ.ಪ

ದಯಾಸಾಂದ್ರ ರಾಘವೇಂದ್ರ । ಸುರುಚಿರಮಂತ್ರಾಲಯೇಂದ್ರ ।
ಭಕುತವೃಂದ । ಕುಮುದಚಂದ್ರ
ಜಯಯತಿವರ ನಮಿಪರ ಸುರತರುವೆ ೧

ಭಾಸುರಾಂಗ ಜಿತಾನಂದ । ರಘುವರಪದಮಲಭೃಂಗ ।
ಕಾವಿವಸನಭೂಷಿತಾಂಗ
ಜಯಯತಿವರ ನಮಿಪರ ಸುರತರುವೆ ೨

ಶ್ರೀಸುಧೀಂದ್ರವರಕುಮಾರ । ಶ್ರೀಶಕೇಶವಾಂಘ್ರಿರುಚಿರ ।
ದೋಶನಾಶ ಮುನಿಕುಲೇಶ
ಜಯಯತಿವರ ನಮಿಪರ ಸುರತರುವೆ ૩

## ೧೪

ಇಂಥಾ ಸೊಬಗ ಕಾಣೆನೋ ।
ಈ ಧರೆಯೊಳಗಿಂಥಾ ಸೊಬಗ ಕಾಣೆನೋ ಪ

ಕಂತುಪಿತ ತನ್ನ ಕಾಂತೇಯರೊಡಗೂಡಿ ।
ನಿಂತು ಮಜ್ಜನಗೊಂಡು ಸಂತಸವಾಂತಪರಿ ಅ.ಪ

ನಂದಾವ್ರಜದಿ ಇಂದ್ರನೂ । ಕುಪಿತನಾಗಿ ।
ಅಂಧವೃಷ್ಟಿಯ ಕರೆಯಲು । ಸಿಂಧೂಶಯನ ಗಿರಿಯ ।
ಮಂದಹಾಸದಿ ನೆಗಹಿ । ಸುಂದರ ಗೋವ್ಗಳನೆ ।
ಚೆಂದಾದಿಂದಲೆ ಪೊರೆಯೆ ।
ಅಂದು ತೋರಿದುಪಕೃತಿಯ ನೆನೆದು ಗೋ । ವೃಂದಗಳೈ ।
ತಂದಿಂದಿರೆಯರಸಗೆ ।
ಮಿಂದು ಮಧುರಕ್ಷೀರಧಾರೆಯ ಕರೆಯಲು ।
ನಂದಕುವರಾನಂದವ ಬೀರಿದ ೧

ಕಿರಿಯರೊಡನೆ ಕೂಡುತ । ಗೋಪಾಲನು ।
ಮುರಲಿನಾದವ ಗೈಯುತ । ಹರಿಣಾಕ್ಷಿಯರಮನೆ ।
ಹರುಷದಿಂದಲೇ ಪೊಕ್ಕು । ಪರಿಪರಿ ಲೀಲೆಯಿಂ ।
ಬೆರಗು ಮಾಡುತಲಿರೆ । ವರ ಧದಿಘೃತ ಭಾಂಡಗಳನೊಡೆದು ।

ಯದುವರನಾಲೈಸುತ ಬರುವರ ಸುಳಿವನು ।
ಸರಸದಿ ಕಂಡಾಕ್ಷಣದಿಂದೋಡಲು ।
ಸುರಿದುದು ಶಿರದಲಿ ದಧೀಘೃತಧಾರೆಯು ೨

ಕರುಣಾಸಾಗರ ಹರಿಯು । ಮೋಹದಿ ವರ ।
ಭೈಷ್ಮಿಭಾಮೇರ ಕೂಡುತಾ । ಭರದಿ ಕುಣಿಯಲವರ
ಶಿರದಿ ಮುಡಿದ ಸುರಗೀ । ಅರಳುಮಲ್ಲಿಗೆಯೊಳು ।
ಸೆರೆಬಿದ್ದ ಮಧುಪಗಳ । ನೆರೆದು ಝೇಂಕರಿಸುತ ।
ಸಿರಿಯರಸನವರ । ಶಿರದೊಳು ಧರಿಸಿದ ಮಧುಧಾರೆಗಳು
ಹರುಷದಿ ಸುರಿಸಲು ಸುರ ಸಂದೋಹವು ।
ಹರಿಮಹಿಮೆ ವೆಗ್ಗಳವೆನುತಾ ಪರಿ ೩

ಅಂಗಳದೊಳು ಆಡುತ । ಮಂಗಳಮೂರ್ತಿ ।
ಸಂಗಡಿಗರ ಸೇರುತಾ ।
ಮುಂಗುರುಳ್ಗಳ ಮೇಲೆ । ಕೆಂದೂಳಿಯನೇ ಧರಿಸಿ ।
ಕಂಗಳಿಂ ಕಂಡು ಗೋಪಿ ರಂಗನ್ನಪ್ಪಿದಳು ಮುದದೀ ॥
ಅಂಗನೆ ರುಕ್ಮಿಣಿ ಭಂಗಿಯ ನೋಡಲು । ಅಂಗಜ
ಪಿತನನು । ಪಿಂಗದೆ ಬೇಡಲು । ಮಂಗಳಾಂಗಿ
ಮನದಿಷ್ಟವ ಸಲಿಸಲು । ಸಿಂಗರಗೊಂಡನು । ಸಕ್ಕರೆ ಸುರಿಸುತೆ ೪

ಸುರನದೀ ಜನಕ ತಾನೂ । ಕುಂಜವನದಿ ।
ಸರಸಿಜಾಕ್ಷೇರ ಕೂಡುತ ।
ಸರಸವಾಡುತಲಿರೇ । ಪರಮ ಸಂತೋಷದಿ ।
ತರುಲತೆಗಳು ಹರಿಯ ಚರಣ ಸೇವೆಯಗೈಯ್ದು ।
ಸುರದ್ರುಮವೆಳನೀರನು ಸುರಿಸುತಲಿರೇ ।
ಕದಳಿಗಳುದುರಿಸೆ । ಗಳಿತ ಫಲಂಗಳು ।

ಸರಸಿಜನಾಭನು ಕರುಣಿಸಿ ಭಕುತರ ।
ಶಿರಿಯಾಳಪುರದೊಳು ಮೆರೆದನು ವಿಭವದಿ ೫

ವ್ಯಾಸರಾಜರ ಪೀಠದೀ । ರಂಜಿಪ ಲಕ್ಷ್ಮೀಶತೀರ್ಥರಿಂ ಸೇವಿಪ
ವ್ಯಾಸವರದ ರುಕ್ಮಿಣೀಶ ಕೃಷ್ಣನು ಭವ ।
ಪರಿಪರಿ ನರಳುವ ದಾಸರ ಸಲಹಲಿನ್ನು ।
ಸಾಸಿರ ಶಂಖದಿ ಪೂಜೆಯಗೊಳುತಿರೆ ।
ಭೂಸುರರೆಲ್ಲರೂ ಘೋಷಿಸೆ ವೇದವ ।
ದೇಶದೇಶದ ಜನರಾಲಿಸಿ ಬರುತಿರೆ ।
ಶ್ರೀಶಕೇಶವ ತನ್ನ ಮಹಿಮೆಯ ತೋರಿದ ೬

# ಪ್ರಸ್ತಾವನೆ

ಈ ಕೃತಿಯನ್ನು ರಚಿಸಿರುವ ಶ್ರೀ ನಿಡಂಬೂರು ರಾಮದಾಸ ಬಲ್ಲಾಳರು ಉಡುಪಿಯ ಅಂಬಲಪಾಡಿ ಬೀಡಿನಲ್ಲಿ ಶ್ರೋತ್ರೀಯ ಮಾಧ್ವ ಬ್ರಾಹ್ಮಣ ಕುಟುಂಬದಲ್ಲಿ ಶ್ರೀ ವ್ಯಾಸರಾಯ ಬಲ್ಲಾಳರ ಕಿರಿಯ ಪುತ್ರನಾಗಿ ೨೨.೧೧.೧೯೪೮ರಲ್ಲಿ ಜನಿಸಿದರು. ಸುಪ್ರಸಿದ್ಧ ಸಾಹಿತಿಗಳಾದ ಶ್ರೀ ವ್ಯಾಸರಾಯ ಬಲ್ಲಾಳರು (ಜನನ: ೧೯೨೩) ಇವರ ಹಿರಿಯ ಮಗ.

ಶ್ರೀ ರಾಮದಾಸ ಬಲ್ಲಾಳರು ಉಡುಪಿಯ ಎಸ್.ಎಮ್.ಎಸ್.ಪಿ. ಸಂಸ್ಕೃತ ಕಾಲೇಜಿನಲ್ಲಿ 'ಶಿರೋಮಣಿ' ಪದವಿ ಪಡೆದು ಅಂದಿನ ಮದರಾಸು ಸರಕಾರದ 'ಕನ್ನಡ ವಿದ್ವಾನ್' ಪರೀಕ್ಷೆ ಸಹ ಮುಗಿಸಿದರು. ಉಡುಪಿಯ ಎಸ್.ಎಮ್.ಎಸ್.ಪಿ. ಸಂಸ್ಕೃತ ಕಾಲೇಜಿನಲ್ಲಿ ಕೆಲಕಾಲ ಅಧ್ಯಾಪಕವೃತ್ತಿ ಮಾಡಿ ನಂತರ ಉಡುಪಿಯ ಸೈಂಟ್ ಸಿಸಲೀಸ್ ಕಾನ್ವೆಂಟ್ ಶಾಲೆಯಲ್ಲಿ ಅಧ್ಯಾಪಕರಾಗಿ ಕೆಲವು ವರ್ಷ ಕೆಲಸ ಮಾಡಿದರು. ಮುಂದೆ ನಿವೃತ್ತಿಯ ತನಕ ದೀರ್ಘ ಕಾಲ ಉಡುಪಿಯ ಮಾಡರ್ನ್ ಹೈಯರ್ ಎಲಿಮೆಂಟರಿ ಶಾಲೆಯಲ್ಲಿ ಕನ್ನಡ ಅಧ್ಯಾಪಕ ವೃತ್ತಿಯಲ್ಲಿದ್ದರು.

ರಾಮದಾಸರು ಸಂಸ್ಕೃತದಲ್ಲಿ ಕಾವ್ಯಗಳನ್ನೂ, ಕನ್ನಡದಲ್ಲಿ ಭಕ್ತಿಪರ ಕೃತಿಗಳನ್ನೂ ರಚಿಸಿದ್ದಾರೆ. ಅವುಗಳಲ್ಲಿ ಸಂಸ್ಕೃತದ 'ಕಾಲ್ಯಾಷ್ಟಕ', 'ಮುಖ್ಯಪ್ರಾಣಸ್ತುತಿ' ಮತ್ತು ಕನ್ನಡದ 'ಶ್ರೀ ಕೃಷ್ಣಸ್ತುತಿ' ಇವುಗಳನ್ನು ಉಲ್ಲೇಖಿಸಬಹುದು. 'ಪುರಾಣ ಕತೆಗಳು' ಎಂಬ ಗದ್ಯ ಕೃತಿಯನ್ನೂ ರಚಿಸಿದ್ದಾರೆ. ಕಾನ್ವೆಂಟ್ ಶಾಲೆಯಲ್ಲಿ ಸೇವೆ ಸಲ್ಲಿಸುತ್ತಿದ್ದಾಗ 'ಪುರಂದರ ದಾಸರು' 'ಪನ್ನಾದಾಯಿ' ಮತ್ತು 'ತೊಳೆದ ಮುತ್ತು' ಎಂಬ ನಾಟಕಗಳನ್ನು ಸ್ವತಃ ಬರೆದು ಆಡಿಸಿದ್ದಾರೆ. ರಾಮದಾಸರು ಸುಮಾರು ೪೦ ವರ್ಷಗಳ ತುಂಬು ಸಾರ್ಥಕ ಜೀವನ ನಡೆಸಿ ಫೆಬ್ರವರಿ ೧೯೮೮ರಲ್ಲಿ ದೈವಾಧೀನರಾದರು.

ಈ ಸಂಗ್ರಹದಲ್ಲಿ ಮೇಲೆ ಹೇಳಿದ 'ಶ್ರೀ ಕೃಷ್ಣಸ್ತುತಿ'ಯನ್ನು ವಸ್ತುವಾಗಿ ತೆಗೆದುಕೊಳ್ಳಲಾಗಿದೆ. ಇದರಲ್ಲಿ ನಾಲ್ಕು ಸಾಲುಗಳ ಸಾಂಗತ್ಯ ಜಾತಿಯ ೧೪೧ ಪದ್ಯಗಳಿದ್ದು ದ್ವಿತೀಯಾಕ್ಷರ ಪ್ರಾಸಾದಿ ನಿಯಮಗಳನ್ನು ಅಷ್ಟಾಗಿ ಪಾಲಿಸಿಲ್ಲವಾದರೂ ಪದ್ಯಗಳು ಕಾವ್ಯವಾಚನಕ್ಕೆ ಹೊಂದುವಂತಿವೆ.

ರಾಮದಾಸರು ಶ್ರೀಕೃಷ್ಣನನ್ನು ಸ್ತುತಿಸುವ ವ್ಯಾಜದಲ್ಲಿ ಪ್ರಪಂಚದ ಸೃಷ್ಟಿ, ಕೃಷ್ಣನ ಅನೇಕ ರೂಪನಾಮ ಕ್ರಿಯೆಗಳು ಅನೇಕ ಶಾಸ್ತ್ರ ಪ್ರಮೇಯಗಳು, ನವ ವಿಧ ಭಕ್ತಿ, ಗಾಯತ್ರೀ ಮಂತ್ರದ ಮಹಾತ್ಮ್ಯೆ, ಅನೇಕ ಪುರಾಣ ಪ್ರಸಂಗಗಳು, ತುಳುನಾಡಿನ ಮತ್ತು ಪರಶುರಾಮ ಕ್ಷೇತ್ರದ ವೈಶಿಷ್ಟ್ಯ, ಪರಿಸರ ದೇವತೆಗಳು ಮೊದಲಾದವುಗಳನ್ನು ಹಾಸುಹೊಕ್ಕಾಗಿ ನಿರೂಪಿಸಿದ್ದಾರೆ.

ದಾಸರ ಬಲ್ಲಾಳವಂಶಕ್ಕೆ ಶ್ರೀ ವಾದಿರಾಜ ಸ್ವಾಮಿಗಳಿಂದ ಮೂರವತಾರ ಮಾರುತೀ ಮತ್ತು ಭೂವರಾಹ ದೇವರ ವಿಗ್ರಹಗಳು ಕೊಡಲ್ಪಟ್ಟಿರುವ ಉಲ್ಲೇಖವಿದೆ. ದಾಸರು ಒಂದೇ ಮೂಲದಿಂದ ಪ್ರಪಂಚದ ಎಲ್ಲಾ ಮತಗಳೂ ಪ್ರವೃತ್ತವಾಗಿವೆ ಎಂಬ ಭಾವನೆಯನ್ನು ವ್ಯಕ್ತಪಡಿಸಿದ್ದಾರೆ.

ಈ ಸ್ತುತಿಯ ಭಾಷೆ ಸರಳವಾಗಿದ್ದರೂ ನಿರೂಪಿಸಿರುವ ಅನೇಕ ವಿಷಯಗಳು ಅತಿ ಗಹನವಾಗಿದ್ದು ಶಾಸ್ತ್ರಜ್ಞಾನವಿಲ್ಲದವರಿಗೆ ಅರ್ಥವಾಗುವುದು ಕಷ್ಟವಿದ್ದು ವಿವರಣೆಯ ಅವಶ್ಯಕತೆ ಕಂಡುಬರುತ್ತದೆ.

ಈ ಸಂಗ್ರಹಕ್ಕೆ ರಚಯಿತರೇ ೧೯೭೭ರಲ್ಲಿ ಮುದ್ರಿಸಿ ಪ್ರಕಟಿಸಿರುವ 'ಶ್ರೀಕೃಷ್ಣಸ್ತುತಿ' ಎಂಬ ಪುಸ್ತಕವನ್ನು ಬಳಸಿಕೊಳ್ಳಲಾಗಿದೆ. ಶ್ರೀ ರಾಮದಾಸರ ಪುತ್ರರಾದ ಶ್ರೀ ವ್ಯಾಸರಾಯ ಬಲ್ಲಾಳರು ತಮ್ಮ ತಂದೆಯವರ ಜೀವನ ಚರಿತ್ರೆ ಬಗ್ಗೆ ಅನೇಕ ಉಪಯುಕ್ತ ವಿಷಯಗಳನ್ನು ಒದಗಿಸಿದ್ದಾರೆ. ಡಾ. ಶ್ರೀನಿವಾಸ ಹಾವನೂರ ಅವರು ಅನೇಕ ಸೂಕ್ತ ಸಲಹೆಗಳನ್ನಿತ್ತಿದ್ದಾರೆ. ಇಬ್ಬರಿಗೂ ನನ್ನ ಕೃತಜ್ಞತಾಪೂರ್ವಕ ವಂದನೆಗಳು.

ಎ.ಎನ್. ಅನಂತಸ್ವಾಮಿರಾವ್

# ಕೀರ್ತನೆಗಳ ಕ್ರಮಸೂಚಿ

# ಶ್ರೀಹರಿಸ್ತುತಿ

## ಮಂಗಳಾಚರಣೆ

ಉಡುಪ ವಂಶಜ ಹರಿಯು ಉಡುಪತಿಯ ತಪದೆಡೆಯೊ
ಳುಡುಪ ಶೇಖರನನ್ನು ತನ್ನ ಬಳಿಯಿರಿಸಿ
ಕಡುಪಾಪಿಗಳ ಹೃದಯಮಂಥನವ ಮಾಡಲ್ಕೆ
ಕಡೆಗೋಲು ನೇಣುಗಳ ಪಿಡಿದು ನಿಂತಿರುವ ೧

ಬೆನಕ ದೇವನೆ ನಿಜದಿಯಾಗಸಕೆ ಒಡೆಯನವ
ನಾದವಾಹಿನಿಯನ್ನು ತನ್ನಲ್ಲಿಯಿರಿಸಿ
ಗುರುಗಳುಪದೇಶದಿಂ ಜ್ಞಾನವೊದಗಿಪ ಜನಕೆ
ಪೊಡಮಡುವೆನವನಡಿಗೆ ಯೆಡರು ಬರದಂತೆ ೨

ಸರಸತಿಯೆ ನೀ ನನ್ನ ರಸನೆಯಲಿ ನೆಲೆನಿಂತು
ನಿನ್ನ ಮಾವನ ಪೊಗಳಲೆನಗೆ ಮತಿತೆತ್ತು
ಅವನೊಲುಮೆಯಿಂದೆನಗೆ ಮುಕುತಿಯನು ಪಡೆವಂತೆ
ಹರಸು ನೀನ್ ಭಗವತಿಯೆ ನಿನ್ನ ವಂದಿಸುವೆ ೩

## ಹರಿವಾಯುಗಳು

ಮೂರಕ್ಕರದ ದೇವ ಮೂರು ವಸ್ತುವ ಬೆರಸಿ
ಮೂರು ಮೂರಾಗಿಸೆಯೆ ಪಾಲಿಸುವ ನಮ್ಮ
ಎರಡು ವಸ್ತುವು ಸೇರಿ ದೇಹಕ್ಕೆ ಚಲನೆಯದು
ಹರಿವಾಯುಗಳ ಒಲುಮೆ ದೇಹ ರಕ್ಷಕವು ೪

ಅವ್ಯಾಕೃತಾಕಾಶ ರೂಪದಲಿ ತಾನಿಹನು
ವಿಶ್ವಂಭರಾತ್ಮಕನು ದೇವ ನಿಜದಿಂದ
ಸೃಷ್ಟಿಗವನೇ ಮೂಲ ವಾಸುದೇವಾತ್ಮಕನು
ಮಧ್ವಹೃದಯನಿವಾಸಿ ಸರ್ವಮೂಲನವ ೫

ಪೃಥಿವಿಯಪ್ ತೇಜಸ್ಸು ಮೂರು ಭೂತಾಣುಗಳು
ತುಂಬಿಯಾಗಸದಲ್ಲಿ ವ್ಯಾಕೃತವದಹುದು
ವ್ಯಾಕೃತಾಕಾಶದಲಿ ತುಂಬಿ ವಾಯುವಿನಣುಗಳ್
ಒಂದೆಡೆಯೆ ತಾನಹುದು ವ್ಯಾಕೃತಾಕಾಶ ೬

ಆಗಸದಿ ವಾಯುವಿನ ಪರಮಾಣು ಒತ್ತಡವೆ
ದೃಶ್ಯವಾಯುವು ತಾನೆ ಹರಿವುದಾಗಸದಿ
ದೃಶ್ಯವಾಯುವಿನ ಪರಮಾಣುವೊತ್ತಡದಿ ನಿಜ
ತೇಜವುದಯಿಸುವುದದರಲ್ಲಿ ಮೂರಿಹವು ೭

ತೇಜದಿಂದಲೆ ನೀರು ಜಗಕೆಯಾಧಾರವದು
ನೀರಿನಿಂದಲೆ ಭೂಮಿ ಉದಯಿಸುವದದರಿಂ
ಪಂಚಭೂತಂಗಳಿವು ಭೂಮಿಯಲಿ ತೋರುವವು
ಪಂಚಭೂತಾತ್ಮದ ಪ್ರಕೃತಿಯಿದು ಸತ್ಯ ೮

ಇವುಗಳಿಗೆ ಒಡತಿಯಾ ಪ್ರಕೃತಿದೇವಿಯು ಸತ್ಯ
ಪ್ರಕೃತಿಯೆದೆಯಲ್ಲಿರುವ ದೇವರೂ ಸತ್ಯ
ಪ್ರಕೃತಿ ಪುರುಷರ ಲೀಲೆ ಮಧ್ವಮತದಾ ತಿರುಳು
ಮಧ್ವ ಸದ್ಗ್ರಂಥಗಳು ಸರ್ವಮೂಲಗಳು ೯

ಭೂತಕೃತ್ತೂ ಅವನೆ ಭೂತಪಾಲಕನವನೆ
ಭೂತಭಾವದಲಿದ್ದು ಪ್ರೇರಕನು ಅವನೆ
ಆತ್ಮಾಂತರಾತ್ಮವೆಂದೆರಡು ರೂಪಗಳವಗೆ
ಹೃದಯದಾಕಾಶದಲಿ ವಾಸವಾಗಿಹನು ೧೦

ಪಂಚಭೂತಗಳು ಪಂಚೇಂದ್ರಿಯಗಳು
ಪಂಚ ಕರ್ಮೇಂದ್ರಿಯಗಳ ರಚಿಸಿ ಹರಿಯು
ಪಂಚಾತ್ಮಕನು ದೇವ ಪಂಚವಾಯುಗಳಿಂದ
ಪಂಚತನ್ಮಾತ್ರಗಳ ಜ್ಞಾನವೊದಗಿಪನು ೧೧

ಸುಖ ರತಿ ಪ್ರೇರಕನು ತಾನಾಗಿ ಸಿರಿವರನು
ಶಾರೀರ ಪುರದಲ್ಲಿ ನೆಲೆಯಾಗಿ ಇಹನು
ಬೆಳಗುತ್ತ ದೇಹವನು ಬೆಳಗಿಸುವ ದೇವತೆಗ
ಳವನ ಬಳಿಯಿದ್ದು ಸೇವೆಯ ಗೈಯುತಿಹರು ೧೨

ವಿಶ್ವರೂಪದ ದೇವ ವಿಶ್ವ ದರ್ಶನಕಾಗಿ
ವಿಶ್ವಜನರೊಳು ಕಣ್ಣಿನಲ್ಲಿ ನೆಲೆನಿಂತು
ವಿಶ್ವಸಾಕ್ಷಿಯು ಸೂರ್ಯನಲ್ಲಿಯೂ ತಾನಿದ್ದು
ವಿಶ್ವವನು ಬೆಳಗಿಸುತ ಜ್ಞಾನವೊದಗಿಪನು ೧೩

ಸೂರ್ಯನೊಂದೆಡೆಯಿದ್ದು ತಾನ್ ಬೆಳಗಿ ಲೋಕವನು
ತನ್ನ ಕಿರಣಂಗಳಿಂ ಬೆಳಗಿಸುವ ತೆರದಿ
ಕಣ್ಣು ಮೊದಲಾದಿಂದ್ರಿಯಗಳಲಿ ತಾನಿದ್ದು
ಅವುಗಳನು ಬೆಳಗಿಸುತ ರಕ್ಷಿಪನು ನಮ್ಮ ೧೪

ತೈಜಸದ ದೇವನವ ತೇಜದಾರೂಪದಲಿ
ಕಂಠಗತನಾಗಿದ್ದು ದೇಹದಲಿ ಬೆಳಗಿ
ಹುಲಿ ಕರಡಿ ಮೊದಲಾದ ಜಂತುಗಳ ಸೃಷ್ಟಿಸುತ
ಸ್ವಪ್ನಲೋಕವನು ಮಾನಸಕೆ ತೋರಿಸುವ ೧೫

ಪ್ರಾಜ್ಞರೂಪದ ದೇವನಪ್ಪಿ ಜೀವಾತ್ಮನನು
ಮಾಯೆಯಾ ಮುಸುಕಿನಿಂದಜ್ಞಾನಬರಿಸಿ
ಜೀವನಿಗೆ ತೋರದುದರಿಂದ ಪ್ರಾಜ್ಞನದಾಗಿ
ಜಗಕೆ ತನ್ನೊಳು ಮಾಯೆಯನು ತೋರಿಸುವನು ೧೬

ನಾಲ್ಕನೆಯ ರೂಪವದು ತುರ್ಯ ನಾಮದಲಿಹುದು
ಮುಕ್ತರಿಗೆ ಮಾತ್ರವೇ ತೋರುವುದು ಪೇಳ್ವೆ
ಜಾಗರಾದಿಯವಸ್ಥೆಗಳ ನಾಲ್ಕು ಪೇಳಿದನು
ಮಾಯಾವಿ ಪರಮಾತ್ಮನದು ಲೀಲೆಗಳಿವು ೧೭

## ದ್ವಾದಶನಾಮ ನಿರ್ವಚನ

ಶ್ರೀಕೃಷ್ಣ ನಿನ್ನ ಚರಣಾರವಿಂದಕ್ಕೆರಗಿ
ಭಕುತಿಯಿಂ ನಿನ್ನ ಪನ್ನೆರಡು ರೂಪಗಳ
ನಾಮ ನಿರ್ವಚನದಿಂ ಕೂಡಿ ನುತಿಸುವೆ ನಾನು
ಸರ್ವಸಿದ್ಧಿಯನ್ನಿತ್ತು ಕಾಪಾಡು ಹರಿಯೆ ೧೮

ಸೃಷ್ಟಿಲಯಕಾರಿಗಳು ಬೊಮ್ಮರುದ್ರರು ಇವರೆ
ಕೇಶವೆಂಬಕ್ಷರದಿ ಮೆರೆಯುತ್ತಲಿಹರು
ವರ್ತನವು ಯಾರಿಂದಲಹುದವನೆ ಪರದೇವ
ಕೇಶವಾತ್ಮಕನವನು ಶ್ರೀಕೃಷ್ಣ ದೇವ ೧೯

ನಾರವೆಂದರೆ ದೋಷ ಲೇಶವಿಲ್ಲದ ಗುಣವು
ನಾರವೆಂದರೆ ನೀರು ಜೀವನಾಧಾರ
ನಾರವಯನವು ಯಾರಿಗವನೆ ನಾರಾಯಣನು
ರಜತಪೀಠದ ಪುರದ ಪರದೈವವವನು ೨೦

ಮಾಧವನು ಮಾಲಕುಮಿಗೊಡೆಯನವ ಪರಮಾತ್ಮ
ಮಾಯೆಯನು ಎದೆಯಲ್ಲಿ ತಾಳ್ದ ಸಿರಿವರನು
ಮಾಯೆಯಿಂದಲಿ ಮಾನವಗೆ ಮುಸುಕನು ಹಾಕಿ
ತನ್ನ ರೂಪವನಾರು ನೋಡದಂತಿಹನು ೨೧

ಹಿರಿ ಬೆಟ್ಟವನು ತಾನು ಕಿರಿ ಬೆಟ್ಟಿನಲಿ ಹೊತ್ತು
ಗೋವುಗಳ ರಕ್ಷಿಸಿದ ಗೋಪಾಲ ನೀನು

ವೇದರಕ್ಷಕನಾಗಿ ಗೋವಿಂದನೆನಿಸಿರುವೆ
ಶ್ರೀಕೃಷ್ಣ ನಿನ್ನ ಮಹಿಮೆಯನೇನ ಪೇಳ್ವೆ ೨೨

ಜೇಷ್ಟಕನು ಬಲರೂಪನಾಗಿರುವ ಕಾರಣದಿ
ವಿಶ್ವದಲ್ಲೆಲ್ಲು ವ್ಯಾಪಿಸಿರುವುದರಿಂ
ವಿಷ್ಣುನಾಮದ ನೀನು ವೈಷ್ಣವರ ಕುಲದೊಡೆಯ
ಮಧ್ವಹೃನ್ಮಂದಿರದ ನೆಲೆಯಲ್ಲಿ ಇರುವೆ ೨೩

ಮಧುವೆಂಬ ದೈತ್ಯನನು ಸೃಜಿಸಿಯವನನು ಕೊಂದು
ಮಧುಸೂದನನು ಎಂಬ ಬಿರುದು ನೀ ಪೊತ್ತೆ
ದುರ್ಜನರ ಸಂಹಾರ ಸಜ್ಜನರ ಉದ್ಧಾರ
ಎಂಬೆರಡು ಕಾರ್ಯಗಳಿಗಾಗಿಯವತಾರ ೨೪

ತ್ರೈವಿಕ್ರಮಾವತಾರವ ತಾಳ್ದು ದೇವ
ಪಾವನಾತ್ಮಕ ಗಂಗೆಯಿಂ ಕಾಲ ತೊಳೆದು
ಮೂರು ಲೋಕದ ಭಕುತರಿಗೆ ದರ್ಶನವ ಕೊಟ್ಟು
ಭಕ್ತರಕ್ಷಕನಾಗಿ ಮೆರೆದೆ ಸಿರಿವರನೆ ೨೫

ವಾಮನನು ನೀನಾಗಿ ವಾಮಪಂಥದಿ ಹೋಗಿ
ಬಲಿ ಚಕ್ರವರ್ತಿಯಲಿ ಮೂಹೆಜ್ಜೆ ಬೇಡೆ
ಭಕುತಿಯಿಂದವ ಕೊಡಲು ಮುಕುತಿಯನು ಕೊಡಲೆಂದು
ಬಲಿಯ ಮನೆಯೊಳಿಗವ ಗೈದೆ ಪರಮಾತ್ಮ ೨೬

ಸಿರಿಯನೆದೆಯಲಿ ಪೊತ್ತು ಶ್ರೀಧರನು ನೀನಾಗಿ
ಸರ್ವ ಭೂಷಣಗಳಿಂ ಶೋಭಿಸುತಲಿರುವೆ
ಅನ್ನದಾತನು ನೀನು ಅನ್ನಭೋಕ್ತೃವು ನೀನು
ಭುಕ್ತಿ ಮುಕ್ತಿ ಪ್ರದನು ನೀನಿರುವೆ ದೇವ ೨೭

ಇಂದ್ರಿಯಗಳು ಹೃಷೀಕಾಭಿಧಾನದಲಿಹವು
ನೀನವುಗಳಿಗೆ ಎಲ್ಲ ಒಡೆಯನಾಗಿರುವೆ

ಹೃಷೀಕೇಶ ನಾಮವದು ನಿನಗೊಪ್ಪುವದು ಹರಿಯೆ
ನನ್ನ ಮನ ನಿನ್ನಡಿಯೊಳಿರುವಂತೆ ಮಾಡು ೨೮

ಸಾಗರವನುದರದಲ್ಲಿರಿಸಿ ನೀನದರಿಂದ
ನಾಭಿಯಲಿ ಪದುಮವನು ಸೃಷ್ಟಿಸಿದೆ ದೇವಾ
ಪದುಮನಾಭನು ನೀನು ಬೊಮ್ಮಪಿತನಾಗಿರುವೆ
ನಿನ್ನ ಮಾಯಾ ರೂಪವನೇನಪೇಳ್ವೆ ೨೯

ಮೊಸರ ಕುಡಿಕೆಯನೊಡೆದು ತಾಯಿಯಿಂ ಬಂಧಿತನು
ದಾಮೋದರನು ಎನಿಸಿ ಉಜಡೆಯನ್ನೊಯ್ದು
ಮರಗಳೆಡೆಯಲಿ ಪೊಕ್ಕು ಬೀಳಿಸುತಲವುಗಳನು
ಭಕುತರಾ ಶಾಪಮೋಚನೆಯ ನೀ ಮಾಡ್ದೆ ೩೦

ಕೇಶವನೆ ಮೊದಲಾದ ಪನ್ನೆರಡು ನಾಮಗಳ
ಅರ್ಥವರಿತನವರತ ಪೇಳಲವಗೊಲಿದು
ಸಂಸಾರ ಬಂಧನವ ತೊಲಗಿಸಿಯೆ ಪರಮಾತ್ಮ
ತನ್ನ ಬಳಿಗೊಯ್ಯುವನು ನಿಜ ಪೇಳ್ವೆ ನಾನು ೩೧

ಶ್ವೇತ ರಕ್ತವು ಪೀತ ಕೃಷ್ಣ ವರ್ಣಗಳೆಂಬ
ನಾಲ್ಕು ಬಣ್ಣದ ದೇವನೊಬ್ಬನೇ ಇಹನು
ಕಲಿಯುಗದ ಕಾಲದಲಿ ಕೃಷ್ಣನೊಬ್ಬನ ನೆನೆದು
ನಾಮಜಪ ಮಾಡಿದರೆ ಮುಕ್ತಿಯನು ಕೊಡುವ ೩೨

## ಮತ್ಸ್ಯಾದಿ ದಶಾವತಾರಗಳು

ಮತ್ಸ್ಯಾದ್ಯವತಾರವನು ತಾಳ್ದು ನೀ ಪರದೇವ
ಮನ್ವಂತರ ಪ್ರಳಯಜಲಧಿಯನು ಪೊಕ್ಕು
ಸೂರ್ಯಪುತ್ರನ ಮನುವ ದೋಣಿಯಲ್ಲಿರಿಸಿ ನೀನ್
ನೀರಾಟವಾಡಿದೆಯ ಲೀಲೆಯಿಂದಲಿ ನೀಂ ೩೩

ಕ್ಷೀರೋದಧಿಯಲಾಳತಲಕೆ ಮಂದರ ಪೊಕ್ಕೆ
ಕೂರ್ಮರೂಪವ ತಾಳ್ದು ಕಡಲಿನಡಿ ಸೇರಿ
ದೇವತೆಗಳಿಗೆಯಮೃತ ಕಲಶವನು ತೆತ್ತು ನೀನ್
ದೈತ್ಯರನು ವಂಚಿಸಿದೆ ಮೋಹಿನಿಯದಾಗಿ ೩೪

ಸೂಕರದ ರೂಪವನು ತಾಳ್ದು ನೀನ್ ಸಿರಿವರನೆ
ಚಿನ್ನ ಕಣ್ಣಿನ ದೈತ್ಯಸೇವಕನ ಕೊಂದು
ದೈತ್ಯನಾತ್ಮಜ್ಯೋತಿಯನು ತನ್ನಲಿಯಿರಿಸಿ
ವಾರಾಹ ರೂಪದಿಂದಲಿ ಆಟವಾಡ್ದೆ ೩೫

ಶಿಲ್ಪಿಯಿಂ ರೂಪುಗೊಂಡಿಹ ಕಂಬದಲಿಯಿದ್ದು
ವಿಷ್ಣುವೇ ಪ್ರಹ್ಲಾದ ಮಗುವನುದ್ಧರಿಸೆ
ನಂಬಿದೆಡೆಯೆಲ್ಲೆಲ್ಲು ಇರುವೆನೆಂಬುದ ತಿಳಿಸೆ
ನರಸಿಂಹ ರೂಪವನು ತಾಳ್ದೆ ಪರಮಾತ್ಮ ೩೬

ಇಂದ್ರಾವರಜನೊಮ್ಮೆ ವಟುವಾಮನನು ಬಂದು
ಬಲಿಯ ಯಾಗದ ಸಮಯ ಮೂಹೆಜ್ಜೆ ಬೇಡೆ
ರಾಜ ಕೊಡಬಯಸಲದ ಗುರು ಶುಕ್ರತಡೆದಾಗ
ದಾನಿ ಬಲಿ ಕೊಟ್ಟವನು ಸಿದ್ಧಿಯನು ಪಡೆದಾ ೩೭

ಸಂಹಾರ ಲೀಲೆಯನು ತೋರಲವ ಪರಮಾತ್ಮ
ಪಿತೃವಾಕ್ಯಪಾಲನೆಗೆ ತಾಯ ತಲೆ ಕಡಿದು
ಮಾತೆಯನು ಬದುಕಿಸುತ ದುಷ್ಟರಾಜರ ತರಿದು
ರಾಜವಂಶವನು ನಿರ್ವಂಶ ಮಾಡಿದನು ೩೮

ಎದೆಯೊಳಿಹ ಸೀತೆಯನು ಕಾಡೆಲ್ಲ ಹುಡುಕುತ್ತ
ಜಲಧಿಗೇ ಕಟ್ಟಿ ಸೇತುವೆಯ ಸಿರಿವರನು
ಕಪಿ ಸೈನ್ಯದೊಡಗೂಡಿ ಲಂಕೆಯನ್ನೈದುತ್ತ
ರಾವಣನ ಕೊಂದು ಸೀತೆಯ ಮರಳಿ ತಂದೆ ೩೯

ಇಬ್ಬರನು ತಾಯಂದಿರನು ರಮಿಸಿ ಮಗುವಾಗಿ
ಪದಿನಾರು ಸಾಸಿರದ ಸತಿಯರನು ಒಲಿಸಿ
ಏಕಕಾಲದಲಿ ಎಲ್ಲರನು ಮೆಚ್ಚಿಸಿದ ಹರಿ
ಆನಂದರೂಪದವ ಪರಮಾತ್ಮ ನಿಜವು ೪೦

ತಾಮಸದ ಜೀವರನಧೋಗತಿಗೆಯಿಳಿಸುತಲಿ
ವೇದ ಮತವನು ತೆಗಳಿ ಬುದ್ಧ ರೂಪದಲಿ
ತ್ರಿವಿಧ ಜೀವಂಗಳಿಗೆ ಯೋಗ್ಯತೆಗೆ ತಕ್ಕಂತೆ
ಗತಿಯಾಗಿಸುವದೆ ನಿನ್ನ ಸಂಕಲ್ಪವದಲಾ ೪೧

ಧರ್ಮವದು ನಶಿಸುತಲಿ ದುಷ್ಟರಾಜರು ತುಂಬೆ
ಕಲಿಯುಗದ ಕೊನೆಯಲ್ಲಿ ಕಲ್ಕಿ ರೂಪದಲಿ
ಅಶ್ವವನ್ನೇರುತಲಿ ದುಷ್ಟರನು ಸಂಹರಿಸಿ
ಕೃತಯುಗವ ಮಾಡಿದೆಯ ಪರಮಾತ್ಮ ನೀನು ೪೨

ಕಾಣದಾ ದೇವರಿಗೆ ಭಕ್ತಿಯಿಂ ಪೂಜಿಸಲು
ಹತ್ತು ರೂಪಗಳಿವುಗಳೇ ಮುಖ್ಯವದರಿಂ
ಅವತಾರ ರೂಪಗಳ ಪ್ರತಿಮೆಗಳ ಪೂಜಿಸುತ
ಸರ್ವಾರ್ಥಸಿದ್ಧಿಗಳ ಪಡೆಯುವರು ಜನರು ೪೩

ವೇದೋಕ್ತ ಪದಗಳಿಗೆ ಮುಖ್ಯಾರ್ಥ ಹರಿಯಿಹನು
ಅಗ್ನ್ಯಾದಿ ನಾಮಗಳು ದೇವರಿಗೆಯಿಹವು
ದೇವತೆಗಳಿಗೆಲ್ಲ ಅಗ್ರಣಿಯು ತಾನಾಗಿ
ಅಗ್ನಿನಾಮವು ನಿನಗೆ ಒಪ್ಪುವುದು ಹರಿಯೆ ೪೪

ಇಂದ್ರಿಯಂಗಳೆ ಕುದುರೆ ಬುದ್ಧಿಯೇ ಸಾರಥಿಯು
ಮನವೆಂಬ ಕಡಿವಾಣ ಹಿಡಿದೋಡಿಸುವವನು
ಜೀವನೇ ರಥಿಕನವ ವಿಷಯಬೇಟೆಗಳಲ್ಲಿ
ಪರಮಾತ್ಮನರಿವೆಂತು ಮೂಡುವುದು ಅವಗೆ ೪೫

ವಾಸದಿಂ ಬೆಳಗಿಸುವ ವಾಸುದೇವನು ತಾನು
ವರುಣನಂತರ್ಗತನು ಶಿರದಲ್ಲಿಯಿಹನು
ಸಪ್ತರಂಧ್ರಗಳಲ್ಲಿ ವಿದ್ಯುತ್ತ ಹರಿಸುತಲಿ
ಜ್ಞಾನವನ್ನೊದಗಿಪನು ಶ್ರೀಕೃಷ್ಣನವನು ೪೬

ವಿಜ್ಞಾನಿ ಭಗವಂತ ಹೃದಯ ಗುಹೆಯಲ್ಲಿಹನು
ಅನಿರುದ್ಧ ಯಜ್ಞೇಶ ಮೊದಲಾದ ಪೆಸರಿಂ
ಪ್ರಾಣವಾಯುಗಳ ಜೊತೆ ಪಾಕವನು ಗೈಯುತ್ತ
ರಕ್ತರೂಪವ ಮಾಡಿ ಪಾಲಿಸುವ ನಮ್ಮ ೪೭

ಪ್ರಾಕೃತ ಜ್ಯೋತಿಯಾದೊಡೆ ದೇಹ ಸುಡದಿರದು
ಅಪ್ರಾಕೃತ ಜ್ಯೋತಿ ಯಜ್ಞೇಶಗಿಹುದು
ಭಕ್ಷ್ಯಭೋಜ್ಯಗಳೆಂಬ ಲೇಹ್ಯಪೇಯಗಳೆಂಬ
ನಾಲ್ಕುವಿಧ ವಸ್ತುವಿನ ಪಾಕ ಮಾಡುವನು ೪೮

ವಾಯುವಂತರ್ಗತನು ನೀಲರೂಪದ ದೇವ
ಪ್ರದ್ಯುಮ್ನನಾಮಕನು ನಾಭಿಯಲ್ಲಿಹನು
ಕಾಮರೂಪಿಯು ಅವನಪಾನಕ್ಕೆ ಒಡೆಯನವ
ಪುರುಷರಿಂದಲಿ ಸೃಷ್ಟಿಗವನೆ ಕಾರಣನು ೪೯

ಪೃಥ್ವಿವಿಯಪ್ ತೇಜಸ್ಸು ಮೂರು ದೇಹದ ಮೂಲ
ಶ್ರೇಷ್ಠ ವಾಯುವು ಸೇರಿ ದೇಹಕ್ಕೆ ಚಲನೆ
ಹೃದಯದಲ್ಲಾಗಸವು ಇರುವ ಕಾರಣದಿಂದ
ಪಂಚಭೂತಂಗಳಿವು ದೇಹದಲ್ಲಿಹವು ೫೦

ವಿಶ್ವದಲ್ಲೆಲ್ಲು ವ್ಯಾಪಿಸಿದ ಪರಮಾತ್ಮ
ವಾಯುವಿನ ಜೊತೆಗೂಡಿ ದೇಹಚಾಲಕನು
ಯಂತ್ರರೂಪದಲ್ಲಿದ್ದು ಯೋಗ್ಯತೆಗೆ ತಕ್ಕಂತೆ
ಕಾರ್ಯವನು ಮಾಡಿಸುತ ಫಲವನ್ನು ಕೊಡುವ ೫೧

## ಹೊನ್ನು ಹೆಣ್ಣು ಮಣ್ಣು

ಮಾಯೆಯದು ಮೂರು ರೂಪಗಳ ನಾನು ಪೇಳುವೆನು
ಹೊನ್ನು ಹೆಣ್ಣು ಮಣ್ಣು ಎಂಬ ಮೂರವುಗಳ್
ಅವುಗಳನು ಹಂಬಲಿಸಿ ಕೆಡಬೇಡ ಮರುಳೆ ನೀನ್
ಅವುಗಳೇ ಮೃತ್ಯುವಿನ ಕಡೆಗೊಯ್ಯುವವುಗಳ್ ೫೨

ಕಷ್ಟದಿಂ ಸೃಷ್ಟಿಯಲಿ ನಗ್ನತೆಯೆ ಸುಂದರವು
ಕಷ್ಟದಿಂ ಮರಣದಲಿ ನಗ್ನತೆಯ ದೇಹ
ಕಷ್ಟವಿಕ್ಕೆಡೆಗಳಲಿ ನಾಸ್ತಿಸುಖ ಮಧ್ಯದಲಿ
ಕನಕ ಕನಕವದೆಂದು ಹೊನ್ನ ಪೇಳುವರು ೫೩

ಮೋಹಿನಿಯು ತಾನಾಗಿ ದೈತ್ಯರನು ವಂಚಿಸಿದ
ಮೋಹಿನಿಯು ತಾನಾಗಿ ರುದ್ರ ವಂಚಿತನು
ಮೋಹಿನಿಯು ತಾನಾಗಿ ಸುಂದೋಪಸುಂದ ವಧೆ
ಮೋಹಿನಿಯು ಪೆಣ್ಣು ಮೋಸವದಲ್ತೆ ಮನುಜ? ೫೪

ಮಣ್ಣಿನಿಂದಲೆ ಹರಿಯು ದೇಹವನು ಸೃಷ್ಟಿಸುವ
ಮಣ್ಣೆ ಅನ್ನವದಾಗೆ ಪಾಲಿಸುವ ನಮ್ಮ
ಮರಣಕಾಲದಲದುವೆ ಮಣ್ಣನಪ್ಪುವದು ತಿಳಿ
ಮಣ್ಣಿಗಾಗಿಯೇ ನೀನು ಹಂಬಲಿಪೆಯೇಕೆ ೫೫

ಪ್ರಾಣದೇವರೆ ನಿನ್ನ ಉಸಿರಾಟ ಕಾರಣರು
ಪ್ರಾಣನುಸಿರಾಟವದು ಯಾರಿಂದಲಹದು?
ಅವನೆ ಪರಮಾತ್ಮ ತಿಳಿ ದೇವಾಧಿದೇವನವ
ನಿನ್ನ ಬಾಳಿಗೆ ಕಾರಣರು ಇಬ್ಬರಹರು ೫೬

ಸೂರ್ಯದೇವನು ನೇತ್ರತತ್ವಕ್ಕೆ ಒಡೆಯನವ
ಸೂರ್ಯನದು ಕಣ್ಣು ಯಾರಿಂದ ತೋರುವುದು?
ಅವನೆ ಪುರುಷೋತ್ತಮನು ಪರಮಾತ್ಮ ಹರಿಯವನು
ಆ ವಿಶ್ವರೂಪಿಯೇ ವಿಶ್ವಧಾರಕನು ೫೭

ವಾಸದಿಂ ಬೆಳಗಿಸುವ ಕಾರಣದಿ ಭಗವಂತ
ವಾಸುದೇವಾತ್ಮಕನು ಸೃಷ್ಟಿಮೂಲನವ
ವಸುದೇವಪುತ್ರನಾಗವತರಿಸಿ ಸಿರಿವರನು
ಉಡುಪಿಯಲಿ ಪೂಜೆಗೊಂಬನು ನಿಜವ ಪೇಳ್ವೆ ೫೮

ಕೃತಯುಗದ ಭಾರ್ಗವನು ತ್ರೇತೆಯಲಿ ದಾಶರಥಿ
ದ್ವಾರಪದ ಕೃಷ್ಣ ನೀನೇಯಿರುವೆ ದೇವಾ
ಮಧ್ವವರದನು ನೀನು ಭಾರ್ಗವನ ನೋಡಲ್ಕೆ
ಉಡುಪಿಗೇ ಬಂದಿರುವೆ ಪರಮಾತ್ಮ ನೀನು ೫೯

ಪರಶುರಾಮ ಕ್ಷೇತ್ರ ಶ್ರೀಕೃಷ್ಣನ ಕ್ಷೇತ್ರ
ಪದ್ಮನಾಭಕ್ಷೇತ್ರ ಶಂಕರಕ್ಷೇತ್ರ
ಹಲವಾರು ದೇವತೆಗಳಿಲ್ಲಿ ನೆಲೆಗೊಳ್ಳುತ್ತ
ಪಾವನವ ಗೈಯುವರು ಭೂಮಿಯನ್ನಿದನು ೬೦

ತುಲೆಯಲ್ಲಿ ತೂಗಿದಾಗುತ್ತಮವದದರಿಂದ
ತುಲು ದೇಶವಿದು ಜಗದಿ ವಿಖ್ಯಾತವಹುದು
ತುಲು ಲಿಪಿಯೆ ಸರ್ವಮೂಲ ಗ್ರಂಥ ಲೇಖನಕೆ
ವೇದಾದ್ರಿಯಾಯಿತಿದು ವೇದಾಂತಭೂಮಿ ೬೧

ಮಧ್ಯಗೇಹದ ಭಟ್ಟರಿಂ ಸೇವೆಯ ಪಡೆದು
ವಾಯುದೇವೋತ್ತಮನ ಮಗನಾಗಿ ಕೊಡಿಸಿ
ಸಜ್ಜನರ ಹೃದಯದಲಿ ಮುಖ್ಯ ತತ್ವವ ತಿಳಿಸೆ
ಸರ್ವಜ್ಞ ಮೂರ್ತಿಯನು ತಂದಿರುವೆ ದೇವಾ ೬೨

ಪರಶುರಾಮನ ರೂಪದಿಂ ನೀಂ ತಪಗೈದ
ಪಾಜಕ ಕ್ಷೇತ್ರದಲಿ ಭಕುತನವತರಿಸೆ
ಜ್ಞಾನರೂಪದ ನೀನು ಅವನ ಹೃದಯವ ಪೊಕ್ಕು
ಮಧ್ವಮತವನು ನೀನು ಪಸರಿಸಿದೆ ಹರಿಯೆ ೬೩

## ನವವಿಧ ಭಕ್ತಿ

ಶ್ರವಣ ಪಾವನವಾದ ಹರಿಕಥೆ ಪುರಾಣ ಮೊದ
ಲಾದುದನು ಕೇಳುತ್ತಿ ಪರಮಾತ್ಮನನ್ನು
ಹೃದಯ ಪೀಠದಲಿರಿಸಿ ಪೂಜಿಸುವ ಭಕ್ತನೇ
ಶ್ರವಣ ಫಲ ಹೊಂದಿದವ ಶ್ರವಣಭಕ್ತಿಯಿದು ೬೪

ದಾಸಕೂಟದ ಭಕ್ತರಿಂ ರಚಿತವಾದ ಸು
ಶ್ರಾವ್ಯ ಹಾಡುಗಳನ್ನು ಪಾಡಿ ಕುಣಿಯುತ್ತ
ದೇವರನು ನೆನೆನೆನೆದು ಧ್ಯಾನಿಸುವ ಭಕ್ತರೇ
ಕೀರ್ತನದ ಭಕ್ತರೆಂದರಿ ಮನುಜ ನೀನು ೬೫

ವ್ಯಾಸ ದಾಸರ ಕೂಟದಿಂದರಿತ ದೇವರನು
ಮಾನಸದ ಮಂಟಪದಲ್ಲಿರಿಸಿ ಪೂಜಿಸುತ
ಅದನೆ ಪೌನಃಪುನ್ಯದಿಂದ ಮೆಲುಕಾಡುವದು
ಸ್ಮರಣಭಕ್ತಿಯಿದೆಂದು ತಿಳಿ ಮನುಜ ನೀನು ೬೬

ಅವತಾರ ರೂಪಗಳ ಮೂರ್ತಿಗಳ ರಚಿಸುತಲಿ
ನಿನ್ನ ಚಿತ್ತದ ದೇವರನ್ನಲ್ಲಿಯಿರಿಸಿ
ಅವನ ಗುಣಗಳ ನೆನೆದು ಪಾದಸೇವೆಯ ಮಾಡೆ
ಪಾದಸೇವನಭಕ್ತಿಯೆಂದು ತಿಳಿ ಮನುಜ ೬೭

ಹೂ ತುಳಸಿ ಮೊದಲಾದ ವಸ್ತುಗಳ ಶೇಖರಿಸಿ
ದೇವ ಮೂರ್ತಿಗಳನ್ನು ಇದಿರಲ್ಲಿಯಿರಿಸಿ
ಷೋಡಶದ ಉಪಚಾರ ಪೂಜೆಗಳ ನಿತ್ಯದಲಿ
ಮಾಡುವುದೆ ಅರ್ಚನದ ಭಕ್ತಿಯಿದು ತಿಳಿಯೈ ೬೮

ಎದೆ ಶಿರಸು ಕಣ್ಣು ಮನ ಕೈಕಾಲು ಮೊಣಕಾಲು
ವಾಗೆಂಬುದೆಂಟಂಗಗಳನು
ಪಾದದೆಡೆಯೀಡಾಡಿ ನಮಿಸುವುದೇ ವಂದನವು
ಸಾಷ್ಟಾಂಗನಮನವಿದು ತಿಳಿಯೈ ೬೯

ದಾಸೋಹವೆಂಬುದನು ತಿಳಿದು ನೀನನವರತ
ಫಲದ ಬಯಕೆಯ ತೊರೆದು ಸೇವೆಯನು ಮಾಡೆ
ಸೇವಕನ ನಿನ್ನನ್ನು ತನ್ನ ಬಳಿಗೊಯ್ಯುವನು
ಭವಬಂಧ ತೊರೆಯಿಸುತ ಪಾಲಿಸುವನವನು ೭೦

ಸಚ್ಚಿದಾನಂದ ಸ್ವರೂಪದವ ಪರಮಾತ್ಮ
ತನ್ನ ಗುಣಗಳನ್ನೆಲ್ಲ ಭಕ್ತರಿಗೆ ಕೊಡುವ
ನೀರು ಹಾಲನು ನಂಬಿದಂತೆ ನಂಬುವನನ್ನು
ಭಕ್ತರಕ್ಷಕನವನು ಮುಕ್ತಿದಾಯಕನು ೭೧

ಕೃಷ್ಣನು ಪರಬ್ರಹ್ಮ ಕೃಷ್ಣನನು ವಂದಿಸುವೆ
ಕೃಷ್ಣನಿಂದಲೆ ಸಕಲ ವಿಶ್ವಗಳ ಸೃಷ್ಟಿ
ಕೃಷ್ಣನಿಗೆ ಅರ್ಪಿತವು ಸುಕೃತ ದುಷ್ಕೃತವೆಲ್ಲ
ಕೃಷ್ಣನಡಿಯಲಿ ಮುಡಿಯು ಕೃಷ್ಣನಲಿ ಮನವು ೭೨

ಕಾಮಹತಕನು ರುದ್ರದೇವನಿಲ್ಲಿಯೆ ಇದ್ದು
ಅಷ್ಟಯತಿಗಳ ಶುದ್ಧಮಾನಸರ ಮಾಡಿ
ಬಾಲಯತಿಗಳ ಮೂಲಕವೆ ಪೂಜೆಯನು ಪಡೆದು
ರಾರಾಜಿಸುವೆ ದೇವ ಕೃಷ್ಣರೂಪದಲಿ ೭೩

ಭಾರ್ಗವೀಪತಿಯಾದ ಸಿರಿವರನು ಮಾಧವನು
ಭಾರ್ಗವೀರೂಪವನು ಶುಕ್ರವಾರದಲಿ
ತಾಳ್ದು ಭಕುತರ ಹೃದಯವನ್ನರಳಿಸುವೆ ನೀನು
ಮೋಹಿನೀರೂಪವದು ಮೋಹಕವದಲ್ತೆ ೭೪

ಬಲ್ಲಾಳ ವಂಶಜರು ಉಡುಪ ಕುಲದವರೆಂದು
ಭಕುತ ಗುರುವಾದಿರಾಜರ ಹಸ್ತದಿಂದ
ಮೂರು ಅವತಾರ ಚಿಹ್ನೆಯ ತಾಳ್ದ ಮಾರುತಿಯ
ಆರಾಧ್ಯ ಭೂವರಾಹರ ಕೊಡಿಸಿ ಪೊರೆದೆ ೭೫

ದುಷ್ಟ ಜನಮರ್ದನ ಜನಾರ್ದನನು ನೀನಿರುವೆ
ನಿನ್ನ ರೂಪವೆ ಪಕ್ಷನಾಥ ಸೇವಿತವು
ಚಕ್ರ ಶಂಖಾಸಿ ಪಾನದ ಪಾತ್ರೆಗಳ ಧರಿಸಿ
ದುಷ್ಟ ಶಿಕ್ಷಣಕಾಗಿ ಕಾಳಿ ಸೇವಿಪಳು ೨೬

ಜಮದಗ್ನಿಪುತ್ರನಾಗವತರಿಸಿ ನೀನೊಮ್ಮೆ
ಕೊಡಲಿಯಿಂ ಕಡಿಕಡಿದು ದುಷ್ಟರಾಜರನು
ನಕ್ಷತ್ರ ಮಂಡಲವ ಭೂ ಮಂಡಲವ ಮಾಡಿ
ಪರಶುರಾಮನು ಎಂಬ ಪೆಸರನ್ನು ಪಡೆದೆ ೨೭

ಪರಶುರಾಮನು ರಾಮ ಪರಶುರಾಮನು ಕೃಷ್ಣ
ಒಬ್ಬನೇ ಹಲವಾರು ರೂಪಗಳ ತಾಳಿ
ಸಾಸಿರದ ನಾಮದಿಂ ಸ್ತುತಿಸಿಕೊಳ್ಳುವೆ ಹರಿಯೆ
ನಿನ್ನ ಮಾಯಾರೂಪ ತಿಳಿದವರು ಯಾರು? ೨೮

ಮೇಘದೆಡೆಯಿರುವ ಮಿಂಚಿನ ಹಾಗೆ ನೀನೆಂದು
ತಿಳಿಸಲ್ಕೆ ನೀನು ಮೇಘದ ವರ್ಣದವನು
ನೀಲತೋಯದ ಮಧ್ಯದಲ್ಲಿರುವ ವಿದ್ಯುತ್ತಿನಂತಿರುವಿ
ಯೆಂದು ಶ್ರುತಿ ಹೇಳುವುದು ತಿಳಿಯೈ ೨೯

ಪುರುಷೋತ್ತಮನೆ ನಿನ್ನ ಪುರವೆಯೆನ್ನಯ ದೇಹ
ಉತ್ತಮನು ನೀನಿರುವೆ ಅಧಮ ನಾನಿರುವೆ
ಅಜ್ಞಾನದಾಚ್ಛಾದಿಕೆಯನೆನಗೆ ಹಾಕುತಲಿ
ಬಿಂಬರೂಪದಲಿದ್ದು ಬೆಳಗಿಸುವೆ ನನ್ನ ೩೦

ಶ್ರವಣಮನನಾದಿ ಸಾಧನದ ಬಲದಿಂದ ನಾ
ನನ್ನ ಮುಸುಕನು ತೆಗೆದರೂ ನೀನು
ಎನ್ನ ಬಳಿಯಲ್ಲಿದ್ದು ಕಾಣದಿಹೆ ಪರಮಾತ್ಮ
ನಿನ್ನ ಪರಮಾಚ್ಛಾದಿಕೆಯ ತೆಗೆದು ತೋರು ೩೧

ಗೋವರ್ಧನೋದ್ಧಾರಿ ಸಿರಿವರನೆ ನೀನೊಮ್ಮೆ
ನಾಭಿರಾಜನ ಪುತ್ರನಾಗಿಯವತರಿಸಿ
ಅಜನಾಭವೆಂಬ ಮೋಡವನು ಸೃಷ್ಟಿಸಿ ನೀನು
ಲೋಕದ ಕ್ಷಾಮವನು ಹೋಗಲಾಡಿಸಿದೆ ೮೨

ನೀನೊಮ್ಮೆ ದಕ್ಷಿಣದ ಕರ್ಣಾಟಕಕೆ ಬಂದು
ಅಜಗರದ ವೃತ್ತಿಯಲಿ ದೇಹವನು ತೊರೆದು
ನಿರ್ವಾಣ ಬೌದ್ಧಮತ ಜೈನಾದಿ ಮತಗಳಿಗೆ
ಮೂಲಪುರುಷನದಾಗಿ ಮೆರೆದೆ ಪರಮಾತ್ಮ ೮೩

ಸತ್ವ ರಜ ತಮವೆಂಬ ಮೂರು ಗುಣ ಪ್ರಕೃತಿಯದು
ಪ್ರಾಕೃತದ ದೇಹವನು ಹೊಂದಿದಾ ಜನರು
ಹುಟ್ಟುಗುಣ ಮೂರರಿಂ ಕರ್ಮವನು ಮಾಡುತ್ತ
ಸುಖ ದುಃಖವನು ಹೊಂದಿ ಜೀವಿಸುವರವರು ೮೪

ಸತ್ಯಾತ್ಮಕನು ನೀನು ಚ್ಯುತಿಯಿಲ್ಲ ಸತ್ಯಕ್ಕೆ
ಅಚ್ಯುತನ ನಾಮದಿಂ ಪಾಪ ಪರಿಹರಿಪೆ
ಅಂತವಿಲ್ಲದುದಾತ್ಮ ಆತ್ಮರಕ್ಷಕನಾಗಿ
ನಾಮದಲನಂತನೆನಿಸಿರುವೆ ಶ್ರೀಹರಿಯೇ ೮೫

ವೇದರಕ್ಷಕನಾಗಿ ಗೋವುಗಳ ರಕ್ಷಿಸುತ
ಗೋವಿಂದನಾಮವನು ಧರಿಸುತಲಿ ನೀನು
ನಾಮತ್ರಯಗಳಿವನು ಕರ್ಮಾಂತದಲಿ ಪಠಿಸೆ
ಕರ್ಮದೋಷದ ಪಾಪ ಪರಿಹಾರವಹುದು ೮೬

ಸಚ್ಚಿದಾನಂದಸ್ವರೂಪ ಹರಿ ನೀನಿರುವೆ
ನಿನ್ನ ರೂಪಗಳೆಲ್ಲ ಪೂರ್ಣವಾಗಿಹವು
ಜ್ಞಾನವಾನಂದವನು ಹೆರವರ್ಗೆ ತಿಳಿಸುತಿರೆ
ನಮ್ಮಲ್ಲಿ ಹೆಚ್ಚುವವು ಅದರಿಂದ ಪೂರ್ಣ ೮೭

ಹರದಾರಿ ಸಾವಿರಾರಿದ್ದರೂ ನಾದವನು
ಚಣದೊಳಗೆಯಾಕಾಶವಾಣಿ ಕೇಳಿಸುವದು
ಕಾಣದಿಹ ವಿದ್ಯುತ್ತುರೂಪವನು ತಾಳಿದವ
ದೇವನಲ್ಲದೆ ಬೇರೆ ಯಾರ ಮಾಯೆಯಿದು ೮೮

## ಗಾಯಿತ್ರಿ ಹಿರಿಮೆ

ಹತ್ತು ರೂಪದ ಗಾಯಿತ್ರಿ ನಿನಗೆ ರಂಗದ ತಾನ
ಹತ್ತು ರೂಪಗಳಲ್ಲಿ ಕುಣಿಯುತಿಹೆ ನೀನು
ಹತ್ತು ಸಲವಾದರೂ ಗಾಯಿತ್ರಿ ಜಪಿಸದಿರೆ
ನಿನ್ನಲ್ಲಿ ಭೂಸುರತೆ ಉಳಿಯುವದೆಂತು? ೮೯

ತನ್ನಾಮದರ್ಥವೇ ವ್ಯಾಪ್ತಿರೂಪದ ಮೀನು
ಅಮೃತಸವನದಕತದಿ ಕೂರ್ಮನಿಹೆ ನೀನು
ಭೂವರಾಹನು ನೀನು ವರೇಣ್ಯನಾಮಕನು
ಶತ್ರುಭರ್ಜನದಿಂದ ಭರ್ಗನಾಗಿರುವೆ ೯೦

ಪ್ರಾಣವನು ಮೇಲೆತ್ತಿ
ಅಪಾನವನು ಕೆಳಗಿರಿಸಿ
ಮಧ್ಯದಲಿ ವಾಮನನು
ದೇವ ನೀನಿರುವೆ ೯೧

ಮಹಿಯ ಭಾರವ ತೆಗೆದ
ಪರಶುರಾಮನು ನೀನು
ಪ್ರಾಣನ ಪ್ರೀತಿಕರ
ರಾಮ ನೀನಿರುವೆ ೯೨

ಕಲಿಯುಗದ ದೇವನೇ ಜ್ಞಾನರೂಪದ ಕೃಷ್ಣ
ನಾಸ್ತಿಕ್ಯ ಮತದವನು ಬುದ್ಧ ನೀನಿರುವೆ
ಧರ್ಮ ಪ್ರಸಾರಣಕೆ ಹಯವನ್ನು ಚೋದಿಸುವ
ಕಲ್ಕಿನಾಮಕ ನೀನು ತಿಳಿದು ಜಪ ಮಾಡು ೯೩

ಗಾಯನದಿ ರಕ್ಷಿಸುವೆ ಗಾಯಿತ್ರಿಯೇ ನಮಗೆ
ಬ್ರಾಹ್ಮತೇಜವನುಳಿಸಿ ರಕ್ಷಿಪುದು ನಮ್ಮ
ಗಾಧಿಪುತ್ರನು ತಾನು ಕ್ಷತ್ರಿಯನದಾದರೂ
ಬ್ರಹ್ಮರ್ಷಿಯಾಗಿ ಬಾಳಿದನು ನಿಜವೈ ೯೪

ಸಿರಿವರನೆ ನೀನು ಭಾಸ್ಕರನ ಮಂಡಲದಲ್ಲಿ
ಕಮಲದಾಸನದಲ್ಲಿ ಶೋಭಿಸುತಲಿರುವೆ
ಚಕ್ರ ಶಂಖ ಮಕರಕುಂಡಲಾದಿಗಳಿಂದ
ಲೆನ್ನ ಹೃದಯಕೈತಂದು ನೆಲೆನಿಲ್ಲು ೯೫

ನಿನ್ನ ಸೌವರ್ಣ ತೇಜದ ಬೆಳಕಿನಿಂದೆನ್ನ
ಆತ್ಮದ ಜ್ಯೋತಿಯನು ಬೆಳಗಿಸುತ ನೀನು
ನಿನ್ನನ್ನೆ ಹಂಬಲಿಪ ಭವಬಂಧ ತಪ್ಪಿಸುವ
ನಿನ್ನ ಬಳಿಬರುವ ದಾರಿಯನು ತೋರಿಸೆಲಾ ೯೬

ಗಾಯಿತ್ರಿಯ ಜ್ಯೋತಿ ನಂದದಂತಿರಲು
ನಾನಷ್ಟಾಕ್ಷರಿಯ ಮಂತ್ರ ಜಪಿಸುವೆನು ನಾನು
ವಿದ್ಯುತ್ತಿನದು ರಕ್ಷೆ ನಾರಾಯಣನ ಮಂತ್ರ
ಅದರಿಂದ ರಕ್ಷಣೆಯ ಮಾಡುವೆನು ನಾನು ೯೭

ಆತ್ಮರಕ್ಷಕನು ಹರಿ ದೇಹರಕ್ಷಕನು ಹರ
ಹರನ ದೇಹವು ಪ್ರಕೃತಿಪಂಚಕದಿ ರಚಿತ
ಆತ್ಮದಲ್ಲಿರುವಹಂಕೃತಿಗೊಡೆಯ ಹರ
ಹರಿಹರರೇ ದೇಹಾತ್ಮ ರಕ್ಷಣೆಯ ಮಾಡಿ ೯೮

ವಿದ್ಯುತ್ತು ಬಿಳಿ ಕಪ್ಪು ಕೆಂಪು ನೀಲಿಗಳೆಂಬ
ಐದು ಮುಖ ಹರನಿಗಿಹುದದರಿಂದ ನಾನು
ಪಂಚಾಕ್ಷರಿಯ ಮಾಡಿ ಹರನನ್ನು ಧ್ಯಾನಿಸುವೆ
ಧರ್ಮಾಯತನದ ದೇಹ ರಕ್ಷಣೆಯ ಮಾಳ್ಪೆ ೯೯

ಕಾಮವೆನ್ನುವ ವೈರಿ ಮನದಲ್ಲೆ ಹುಟ್ಟಿದವ
ಮನದೊಡೆಯ ರುದ್ರನನ್ನೇ ಹೊಡೆಯಲೆಂದು
ಐದು ಬಯಕೆಗಳೆಂಬ ಬಾಣದಿಂ ಹೊಡೆಯುತಿರೆ
ಕಾಮದಹನವ ಹೊಂದಿ ಬೂದಿಯಾದನವ ೧೦೦

ಆ ಕಾಮನೇ ಮತ್ತೆ ಅಂಗಹೀನನದಾಗಿ
ರುದ್ರನನ್ನರ್ಧನಾರೀಶ್ವರನ ಮಾಡಿ
ಮನವನ್ನು ಕೆಡಿಸುತಲಿ ಮಾನವರೆಲ್ಲರನು
ದುಃಖದಾ ಮಡುವಿನಲಿ ಕೆಡಹುವನು ನಿಜದಿ ೧೦೧

ದೇಹಸೃಷ್ಟಿಗೆ ಮೂಲ ಮಣ್ಣು ತೇಜವು ನೀರು
ಈ ಮೂರು ಮೂರುವಿಧವಾಗಿ ಪರಿಣಮಿಸಿ
ಪಾಲನೆಯು ನಡೆಯುವದು ದೇವರಿಂದಲೇ
ಇದನು ಉಪನಿಷತಿನಾಧಾರದಿಂದ ಪೇಳುವೆನು ೧೦೨

ಭಕ್ಷ್ಯಭೋಜ್ಯವು ಲೇಹ್ಯ ಪೇಯವೆಂಬೀ
ನಾಲ್ಕು ಪ್ರಾಣದಾಹುತಿಯನ್ನು ನಾವು ಕೊಡುತಿಹೆವು
ಅದರಿಂದ ಪಾಕವನು ಮಾಡುತ್ತ ದೇವನವ
ಸಪ್ತಧಾತುಗಳನ್ನು ಮಾಡಿ ರಕ್ಷಿಸುವ ೧೦೩

ತೇಜವದು ವಾಗ್ರೂಪ ತಾಳುವದು ಮತ್ತದುವೆ
ಅಸ್ಥಿಮಜ್ಜಗಳಾಗುವವು ನಿಜವ ಪೇಳ್ವೆ
ವೈದ್ಯಕೀಯಪರೀಕ್ಷೆಗೊಳಗಾಗಿ ತಿಳಿವೆ ನೀನ್
ಶ್ರುತಿತತ್ವವೆಂದೆಂದು ಸಾರುತಿಹುದಿದನೆ ೧೦೪

ಮಣ್ಣಿನನ್ನವೆ ಮೊದಲು ಮನವಾಗಿ ಮತ್ತದುವೆ
ಮಾಂಸ ರೂಪವ ತಾಳಿ ಮಲವದಾಗುವುದು
ನೀರೆ ಮುಖ್ಯ ಪ್ರಾಣ ಮತ್ತೆ ಶೋಣಿತವಾಗಿ
ಮೂತ್ರರೂಪವ ತಾಳಿ ಹೊರಗೆ ಹೋಗುವುದು ೧೦೫

ಸ್ವೇದಜೋದ್ಭಿಜ್ಜ ಮತ್ತಂಡಜ ಜರಾಯುಜಂಗಳು
ಎಂಬ ನಾಲ್ಕು ವಿಧ ಜೀವಜಂತುಗಳು
ನಾರಾಯಣನು ತಾನು ಜಲವಾಸಿಯಾಗುತಲಿ
ಜೀವಜಂತುಗಳನ್ನು ಸೃಷ್ಟಿ ಮಾಡುವನು ೧೦೬

ನಿನ್ನ ಗುಣದೋಷಗಳ ಪರರೆಂಬ ದರ್ಪಣದಿ
ನೋಡಿದರೆ ತೋರುವವು ನಿನ್ನವೇ ತಿಳಿಯೈ
ಪರರಲ್ಲಿ ಕಾಣುತಿಹ ದೋಷಗಳನು ತೊರೆಯುತ್ತ
ಗುಣಗಳನು ಎಣಿಸುವವ ಲೋಕಮಾನ್ಯ ೧೦೭

ಊರ್ಧ್ವಮೂಲದ ದೇವನೂರ್ಧ್ವದ ಹಿಮಾಲಯದೊ
ಳುತ್ತುಂಗ ನಾರಾಯಣಪರ್ವತದಲಿ
ತಾರಕನು ರಾಮನಂತೆಲ್ಲ ನರರನು ತನ್ನ
ಬಳಿಗೆ ಕರೆದೊಯ್ಯಲ್ಕೆ ಮೇಲೆ ನಿಂತಿರುವ ೧೦೮

ಮಧ್ವಗುರುಹೃದಯಭಾಸ್ಕರನು ನಾರಾಯಣನು
ಬದರಿಯೊಳಿಹ ನೆಲೆಗೆ ಕರೆಯಿಸುತಲೆಮ್ಮನ್ನು
ಸೇವೆಯನು ಕೈಕೊಂಡು ಭಾವಗತನಾಗಿದ್ದು
ಪ್ರೇರಿಸಿದನೀಕೃತಿಗೆ ಪ್ರಕೃತಿ ಪರಮಾತ್ಮ ೧೦೯

ಆತ್ಮದಲಿ ಒಳಗಿದ್ದು ಅಂತರಾತ್ಮನು ನೀನು
ಆತ್ಮದ ಬಹಿರ್ಗತನು ಪರಮಾತ್ಮ ನೀನು
ದೇಹದಿಂ ಹೊರಗಿದ್ದು ಕಾಲಾತ್ಮಕನು ನೀನು
ನೀನಿಲ್ಲದಿಹ ದೇಶಕಾಲವೆಲ್ಲಿಹುದು? ೧೧೦

ಮೂರು ನಾಮಗಳಿಹವು ಶ್ರೀನಿವಾಸನೆ ನಿನಗೆ
ಅವುಗಳನು ನೆನೆದರೇ ಪಾಪ ಪರಿಹಾರ
ಅಚ್ಯುತಾನಂತಗೋವಿಂದನೆನ್ನುವ ನಾಮ
ಕೃತದೋಷ ಪರಿಹಾರಕಾಗಿ ಜಪಮಾಳ್ಪೆ ೧೧೧

ಮಧುರಾಖ್ಯನಾಮವನು ಹಿಂದು ಮುಂದಾಗಿಸುತ
ಮಧ್ಯದಕ್ಷರವನ್ನು ಕೈಯಲ್ಲಿಯಿರಿಸು
ನಾಮಜಪ ಮಾಡದಿರೆ ಅವನ ಮುಖಕೆಸೆದು ನೀ
ನನವರತ ಜಪಮಾಡಿ ಸಿದ್ಧಿಪಡೆ ಮನುಜಾ ೧೧೨

ಅಣುವಿಂದ ಅಣುವಾಗಿ ಮಹದಿಂದ ಮಹತ್ತಾಗಿ
ನಿನ್ನ ದರುಶನವು ಜನರಾರಿಗೂ ಇಲ್ಲ
ಮಧ್ಯಕಾಲದಿ ಮಾತ್ರ ದರುಶನವು ವಸ್ತುವಿಗೆ
ಅವತಾರ ರೂಪಗಳೆ ಪೂಜಾರ್ಹವಿಹವು ೧೧೩

ಎಲ್ಲರೂ ಶ್ರೀಹರಿಯ ನೆಲೆಯೆಂದು ನೀನರಿತು
ಮಮತೆಯಿಂ ನೋಡುತಲಿ ಸುಖವನನುಭವಿಸು
ಹೊಲೆಯನಾದರು ನಿನ್ನ ನಂಬಿ ಮರೆಹೊಕ್ಕಿದರೆ
ಕೈಬಿಡದೆ ನೀನವನ ರಕ್ಷಿಸಲೆ ಮನುಜಾ ೧೧೪

ಹಲವಾರು ಜಾತಿಗಳು ಹಲವಾರು ಮತಗಳಿಹ
ವವುಗಳಿಗೆ ಮೂಲಮತ ವೇದಮತವೊಂದೆ
ಬೈಬಲ್ ಖುರಾನ್ ಮೊದಲಾದ ಪೆಸರಿಂದದುವೆ
ಲೋಕದಲ್ಲೆಲ್ಲು ಪಸರಿಸುತಲಿಹವು ೧೧೫

ಭವಬಂಧನವ ಕಳೆದು ತನ್ನ ಬಳಿಗೊಯ್ಯುವವ
ನೀನಲ್ಲದಿನ್ನಾರು ಹರಿಯೆ ಶ್ರೀರಾಮ
ಸಾಂತಾನಿಕದ ಲೋಕಕೊಟ್ಟು ರಕ್ಷಿಸಿದ ಹರಿ
ತಾರಕನು ನೀನಿರುವೆ ನೀನೆ ಗತಿ ದೊರೆಯೆನಗೆ ೧೧೬

ಪರಶುರಾಮನ ರೂಪದಿಂದ ನೀಂ ತಪಗೈದ
ಪಾಜಕ ಕ್ಷೇತ್ರದಲಿ ಭಕುತನವತರಿಸೆ
ಜ್ಞಾನರೂಪದಿ ನೀನು ಅವನ ಹೃದಯವ ಹೊಕ್ಕು
ಮಧ್ವಮತವನು ಜಗದಿ ದೇವ ಪಸರಿಸಿದೆ ೧೧೭

ಮಿನುಗು ಹುಳಗಳ ಸೃಜಿಸಿ ಬೆಳಕನದರಲ್ಲಿರಿಸಿ
ಕಗ್ಗತ್ತಲೆಯ ಕಾಡುಗಳಲಿ ರಕ್ಷಿಸುವೆಯೊ
ಅಂತೆಯೇ ನಮ್ಮ ದೇಹದೊಳಗಿದ್ದು ನೀನ್
ಪ್ರತಿಬಿಂಬ ಜೀವವನು ರಕ್ಷಿಸುವೆ ದೇವಾ ೧೧೮

ಪರಶುರಾಮನು ರಾಮ ಪರಶುರಾಮನು ಕೃಷ್ಣ
ನರನು ನಾರಾಯಣನು ವ್ಯಾಸ ಮೊದಲಾಗಿ
ಒಂದಾಗಿ ಬೇರೆಯಾಗಿಯೆ ರೂಪ ತಾಳುತ್ತ
ಭಕ್ತರಕ್ಷಕನಾಗಿ ದುಷ್ಟವಂಚಕನು ೧೧೯

ಇಂದ್ರಿಯಂಗಳ ಹೊರಮುಖವಾಗಿ ಸೃಷ್ಟಿಸಿದೆ
ಹೃದಯಗುಹೆಯಲ್ಲಿರುವೆ ಕಾಣುವುದದೆಂತು?
ಮನದಬಾಗಿಲ ತೆರೆದು ಅಂತರ್ಮುಖದಿ ನೋಡೆ
ಪ್ರತ್ಯಗಾತ್ಮನು ನೀನು ಕಾಣುವದು ನಿಜವು ೧೨೦

ಕುರುಡನಾಗಿಹೆ ನಾನು ಕುರುಡು ಇಂದ್ರಿಯಂಗಳಿಂ
ತೋರುಬೆರಳಿಂದ ತೋರಿಸಲು ಬಯಸಿದೆನು
ನನಗೆ ಅಂಜನಹಾಕಿ ತೋರು ನಿನ್ನ ಜ್ಯೋತಿ
ವಿಶ್ವತಶ್ಚಕ್ಷು ಪರಮಾತ್ಮ ಶರಣೆಂಬೆ ೧೨೧

ಕೋಟಿ ಗೋದಾನಕ್ಕೂ ಮಿಗಿಲಾಗಿ ಪುಣ್ಯಕರ
ನಿನ್ನ ನಾಮದ ಜಪವು ತಾರಕನು ನೀನು
ತಿಳಿದ ಗುಣಸಾಗರದ ಹನಿಗಳನು ಹೆಕ್ಕಿ ನಾನ್
ನುತಿಸಿದೆನು ನಿನ್ನನ್ನು ಮುಕ್ತಿದಾಯಕನೆ ೧೨೨

ಸುಗುಣೇಂದ್ರ ಮೊದಲಾದ ಯತಿವರರ ಪೂಜೆಯಿಂ
ಜ್ಞಾನರೂಪದ ನೀನು ಸಂತಸವ ತಾಳಿ
ಜ್ಞಾನಭಂಡಾರಿ ಯತಿವರರಿಗೆಲ್ಲರ್ಗೆ
ಜ್ಞಾನಾಮೃತವ ಕೊಟ್ಟು ರಕ್ಷಿಸುವೆ ಹರಿಯೇ ೧೨೩

ಭವದಿ ಬಂಧಿಸಿಯೆನ್ನ ಭಾವಗತನಾಗಿದ್ದು
ದುಷ್ಕರ್ಮ ಮಾಡಿಸುತ ಫಲ ಕೊಡುವದೇಕೆ?
ನಿನ್ನ ಪಾದದ ಬಳಿಗೆ ಬರಲಿಕ್ಕೆ ಹಂಬಲಿಪ
ಎನ್ನ ಕೈಯಿಂದೆತ್ತಿ ಬಳಿಗೆ ಕರೆದೊಯ್ಯು ೧೨೪

ಉಚ್ಛ್ವಾಸ ನಿಶ್ವಾಸ ರೂಪದಿಂದೊಳಹೊಕ್ಕು
ಆತ್ಮ ಸಂದರ್ಶನವ ಮಾಡುತ್ತ ವಾಯು
ಇಪ್ಪತ್ತಒಂದುಸಾಸಿರ ಮತ್ತೆ ಆರ್ನೂರು
ಹಂಸಮಂತ್ರದ ಜಪವ ಮಾಡುವನು ದಿನಕೆ ೧೨೫

ಪರಶುರಾಮನು ರಾಜರೆಲ್ಲರನು ಸಂಹರಿಸಿ
ಭೂಮಿಯನು ನಕ್ಷತ್ರಮಂಡಲವ ಮಾಡಿ
ವಿಶ್ವಜಿತ್‌ಯಾಗದಲಿ ಕಶ್ಯಪರಿಗೀಯಲದ
ಕಾಶ್ಯಪಿಯ ನಾಮವನು ಭೂಮಿ ಪಡೆಯಿತಲಾ ೧೨೬

ಕಶ್ಯಪರ ತಪದಿಂದ ರಾಜರಿಲ್ಲದ ಭೂಮಿ
ಭಾರದಿಂ ಕೆಳಗಿಳಿಯೆ ಊರುವಿಂದೆತ್ತಿ
ಅವಳ ಮೊರೆ ಕೇಳಿ ರಾಜವಂಶವನ್ನುದ್ಧರಿಸೆ
ಉರ್ವಿನಾಮವ ಪಡೆಯಿತು ಭೂಮಿ ನಿಜವು ೧೨೭

ವ್ಯಾಸಪುತ್ರನದಾಗಿ ವ್ಯಾಸಪಿತ ನಾನಾಗಿ
ವ್ಯಾಸಭವನದ ಒಳಗೆ ಭದ್ರನಾಗಿದ್ದೆ
ಈ ಭವನದಿಂದೆನ್ನ ನಿನ್ನ ಭವನಕೆ ಒಯ್ಯು
ಅಮೃತಲೋಕದಿ ನಿನ್ನ ಸೇವೆ ಗೈಯ್ಯುವೆನು ೧೨೮

ರಾಧಿಕಾರಮಣನೆ ಮಧುರಾಪುರಾಧಿಪತಿ
ದಾನವಾಂತಕ ಕೃಷ್ಣ ಸತ್ಯಸ್ವರೂಪ
ವಿಶ್ವಜ್ಞ ಪೂಜಿತನೆ ರಕ್ಷಿಸೆನ್ನನು ಹರಿಯೇ
ಚಿತ್ತದಲಿ ನೆಲೆನಿಲ್ಲು ತಂದೆ ಕಾಪಾಡು ೧೨೯

ಇಂದ್ರಾಣಿ ತಪಗೈದ ತಾನದಲಿ ಚ್ಯವನಮುನಿ
ವೇದಾದ್ರಿ ಎಂಬಲ್ಲಿ ತಪಗೈಯುತ್ತಿದ್ದ
ಸ್ವರ್ಣವರ್ಣವನ್ನಿತ್ತು ಕಣ್ಣಿತ್ತ ಸ್ವರ್ಣನದಿ
ಹರಿಯುತಿಹುದಿಲ್ಲಿಯೇ ಈಗಲೂ ನಿಜವು ೧೩೦

ಪ್ರಕೃತಿ ಪ್ರಕೃತಿಯ ಭೇದ ಪ್ರಕೃತಿ ಜೀವದ ಭೇದ
ಜೀವ ಜೀವಗಳ ಭೇದ ಮೂರನೇಯದು
ಜೀವೇಶ ಭೇದವದು ಪ್ರಕೃತೀಶ ಭೇದವೆಂ
ದಿಹವು ಪ್ರಪಂಚದಲಿ ಪಂಚಭೇದಗಳು ೧೩೧

**ಉಡುಪಿ ಪರಿಸರದ ದೇವತೆಗಳು**

ಕಣ್ವ ಋಷಿ ತಪಗೈದ ಅಜ್ಜರ್ಕಾಡೆಂಬಲ್ಲಿ
ಅವನಿಗೊಲಿದಿರುವ ದುರ್ಗೆ ವಾಸವಾಗಿಹಳು
ಒಳಕಾಡು ಎಂಬ ತಾನವೆ ಚಂದ್ರನ ತಪೋ ಭೂಮಿ
ಇಲ್ಲಿಯೇ ಸಕಲ ವಿದ್ಯಾಲಯವಾಯ್ತು ೧೩೨

ಬೆಳ್ಳಿ ಮಂಚದ ಕಾಲುಗಳು ನಾಲ್ಕು ಎಂಬಂತೆ
ಆರ್ಮೊಗನ ರೂಪಗಳು ನಾಲ್ಕು ದೆಸೆಗಳಲಿ
ಮಾಂಗೋಡು ತಾಂಗೋಡು ಆರಿತೋಡು ಮುಚ್ಲಿಕೋಡು
ನಾಮದಿಂ ಬೆಳಗುವವು ಷಷ್ಠಿದಿನದಂದು ೧೩೩

ಕಡಿಯಾಳಿ ಎಂಬಲ್ಲಿ ಮಹಿಷಮರ್ದಿನಿಯಾಗಿ
ದುರ್ಗಾಲಯವು ಉಡುಪಿ ಪೂರ್ವದ್ವಾರದಲ್ಲಿ
ಪುತ್ತೂರು ಬೈಲೂರು ಬಡಗು ತೆಂಕು ದೆಸೆಯಲ್ಲಿ
ಕೃಷ್ಣ ಸೇವೆಗೆ ದುರ್ಗೆ ಕಟಿಬದ್ಧಳಿಹಳು ೧೩೪

ಸತ್ಯ ನುಡಿಯಲ್ಲಿರಲಿ ಧರ್ಮ ನಡೆಯಲ್ಲಿರಲಿ
ಸ್ವಾಧ್ಯಾಯದಲಿ ಎನಗೆ ಎಚ್ಚರವದಿರಲಿ
ಅಜ್ಞಾನದಂಧಕಾರದ ದಿಕ್ಕಿನಿಂದೆನ್ನ
ನಿನ್ನ ಬೆಳಕಿನ ಕಡೆಗೆ ಕರೆದೊಯ್ಯು ದೇವಾ ೧೩೫

ಪರಶುರಾಮಕ್ಷೇತ್ರ ಹುಟ್ಟುಭೂಮಿಯು ಎನಗೆ
ಪರಶುರಾಮನು ನೀನೆ ನಿನ್ನ ಕ್ಷೇತ್ರವಿದು
ಪರಮಹಂಸಾಖ್ಯಯತಿಗಳ ಮಾನಸಹಂಸ
ಸೋಹಂ ಎನ್ನುವ ಬ್ರಹ್ಮ ಎನ್ನೊಳಗೆ ಇರುವೆ ೧೩೬

ಕೃಷ್ಣಾರ್ಪಣವದಿಲ್ಲದಾವುದು ಫಲ ಕೊಡದು
ಅದರಿಂದ ಕೃಷ್ಣನಿಗೆ ಕೃತಿಯನರ್ಪಿಸುತ
ಸಾಲೋಕ್ಯ ಸಾಮೀಪ್ಯವನ್ನು ಬಯಸುವೆ ನಾನು
ಯೋಗ್ಯತಾನುಗುಣವಾಗಿ ಫಲವ ಕೊಡು ಹರಿಯೆ ೧೩೭

ಪರಶುರಾಮನು ರಾಮ ಪರಶು ರಾಮನು ಕೃಷ್ಣ
ರಾಮದಾಸನು ನಾನು ಕೃಷ್ಣದಾಸನಿಹೆ
ಬರೆದ ಕೃತಿಯಿಂದ ನೀನ್ ಸುಪ್ರಸನ್ನತೆ ಪಡೆದು
ಭಕ್ತಿ ಮುಕ್ತಿಗಳ ಕೊಟ್ಟು ರಕ್ಷಿಸು ಶ್ರೀಶ ೧೩೮

ಉಡುಪಾನ್ವಯಜ ನಾನು ಉಡುಪಾನ್ವಯದ ನೀನು
ಉಡುಪಿ ಹುಟ್ಟೂರೆನಗೆ ನೀನುಡುಪಿಗತಿಥಿ
ಮಧ್ವ ಹೃದಯವು ನಿನಗೆ ವಾಸದ ಸ್ಥಾನವಿರೆ
ಮಾಧ್ವಕೋಟಿಗಳಲ್ಲಿ ಕೀಟನಾಗಿಹೆ ನಾನು ೧೩೯

ವಿಷ್ಣು ಪದದೊಳಗಿರುವ ಜ್ಯೋತಿಲೋಕದ ಒಡೆಯ
ಆ ಜ್ಯೋತಿಲೋಕಕ್ಕೆ ಕರೆದೊಯ್ಯುತ ನನ್ನ
ಭಕುತರಿಗೆ ಮುಕುತಿ ಕೊಡುವುದೆ ನಿನ್ನ ಸಂಕಲ್ಪ
ಅದರಿಂದ ನಿನ್ನನ್ನು ಶರಣು ಶರಣೆಂಬೆ ೧೪೦

ಚಾಂದ್ರಮಾನದ ಪಿಂಗಳಾಖ್ಯ ಸಂವತ್ಸರದಿ
ಚೈತ್ರ ಮಾಸದ ನವಮಿಯ ದಿನದಲ್ಲಿ
ರಾಮೋತ್ಸವದ ಕಾಲ ಇದನರ್ಪಿಸುತ ನಾನು
ಕೃತಕೃತ್ಯನಾದೆ ಶ್ರೀಕೃಷ್ಣ ಕಾಪಾಡು ೧೪೧

# ಪ್ರಸ್ತಾವನೆ

(ಈ ಕೀರ್ತನೆಗಳ ಕರ್ತೃಗಳಾದ ಶ್ರೀ. ಬಿ. ವೆಂಕಟರಾವ್ ಅವರ ಜೀವನದ ಬಗ್ಗೆ ಹೆಚ್ಚು ಮಾಹಿತಿ ದೊರೆತಿಲ್ಲ. ಅವರು ೧೮೮೬ನೇ ಇಸವಿಯಲ್ಲಿ ಜನಿಸಿ ವಿದ್ಯಾಭ್ಯಾಸದ ನಂತರ ಮಂಗಳೂರಿನ ಸಮೀಪ ನಿಡ್ಡೋಡಿ ಮತ್ತು ಕಟೀಲುಗಳಲ್ಲಿ ಹೈಯರ್ ಎಲಿಮೆಂಟರಿ ಶಾಲೆಗಳಲ್ಲಿ ಅಧ್ಯಾಪಕರಾಗಿದ್ದು ನಿವೃತ್ತರಾದುದಾಗಿ ತಿಳಿದು ಬರುತ್ತದೆ.)

ಈ ಕೃತಿಗಳ ರಚನೆ ಮತ್ತು ಪರಿಷ್ಕರಣಕ್ಕೆ ವೆಂಕಟರಾಯರು ಪೊಳಲಿ ಶ್ರೀ ಶಂಕರನಾರಾಯಣ ಶಾಸ್ತ್ರೀ ಮತ್ತು ಅಂದಿನ ಕಟೀಲು ದುರ್ಗಾಪರಮೇಶ್ವರಿ ದೇವಸ್ಥಾನದ ಪ್ರಧಾನ ಅರ್ಚಕರಾಗಿದ್ದ ಶ್ರೀ ಗೋಪಾಲಕೃಷ್ಣ ಅಸ್ರಣ್ಣನವರುಗಳಿಂದ ಪ್ರೇರಣೆ, ಸಲಹೆ ಉತ್ತೇಜನಗಳನ್ನು ಪಡೆದಿರುವುದಾಗಿ ತಿಳಿದು ಬರುತ್ತದೆ. ಇವೆಲ್ಲಕ್ಕೂ ಶ್ರೀ ದೇವಿಯ ಅನುಗ್ರಹವೇ ಕಾರಣವೆಂದು ಕರ್ತೃಗಳು ಭಾವಿಸಿರುತ್ತಾರೆ. ವೆಂಕಟರಾಯರು ತಮ್ಮ ಕೃತಿಗಳನ್ನು ಶ್ರೀ ದುರ್ಗಾಪರಮೇಶ್ವರಿಯ ಸಮ್ಮುಖದಲ್ಲಿ ಹಾಡುತ್ತಿದ್ದು ಅದಕ್ಕಾಗಿ ತಮಗೆ ವಿವಿಧ ವಾದ್ಯಗಳ ಹಿಮ್ಮೇಳನವನ್ನು ಒದಗಿಸುತ್ತಿದ್ದ ಅವರ ಸಹೋದ್ಯೋಗಿ ಶ್ರೀ ರಾಮಕೃಷ್ಣಯ್ಯನವರ ಉಪಕಾರವನ್ನು ಕೃತಜ್ಞತೆಯಿಂದ ಸ್ಮರಿಸಿದ್ದಾರೆ.

ಈ ಸಂಗ್ರಹಕ್ಕೆ ಆಕರವಾದ 'ದೇವತಾ ಕೀರ್ತನಾವಳಿ' ಎಂಬ ಪುಸ್ತಕವು ಕರ್ತೃಗಳ ಎಂಬತ್ತನಾಲ್ಕನೆಯ ವಯಸ್ಸಿನಲ್ಲಿ ೧೯೭೦ ರಲ್ಲಿ ಮುದ್ರಿಸಲ್ಪಟ್ಟಿದ್ದು ಅವರಿಂದಲೇ ಶ್ರೀ ದೇವಿಯ ಪಾದಾರವಿಂದಗಳಲ್ಲಿ ಅರ್ಪಿತವಾಗಿದೆ.

ವೆಂಕಟರಾಯರು ಕಟೀಲಿನ ಶ್ರೀ ದುರ್ಗಾಪರಮೇಶ್ವರಿಯ ಪರಮ ಭಕ್ತರಾಗಿದ್ದು ಕೃತಿಗಳನ್ನು ಪರವಶತೆಯಿಂದ ರಚಿಸಿದ್ದಾರೆ. ಹರಿದಾಸರ ಕೀರ್ತನೆಗಳ ದ್ವಿತೀಯಾಕ್ಷರ ಪ್ರಾಸಾದಿ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸದಿದ್ದರೂ ಭಕ್ತಿರಸದ ಮಹಾಪೂರವನ್ನೇ ಹರಿಸಿದ್ದಾರೆ.

ವೆಂಕಟರಾಯರ ಕೃತಿಗಳಲ್ಲಿ 'ಅಂಕಿತ' ಅಥವಾ 'ಮುದ್ರಿಕೆ' ಎಲ್ಲಿಯೂ ಕಂಡು ಬರುವುದಿಲ್ಲ. ಅವರು ಸ್ಮಾರ್ತ ಸಂಪ್ರದಾಯದವರಾಗಿದ್ದು ಯಾವ ಗುರು ಶಿಷ್ಯ ಪರಂಪರೆಗೂ ಸೇರಿದವರಲ್ಲವೆನಿಸುತ್ತದೆ. ಯಾವ ತಾತ್ವಿಕ ವಿಚಾರಗಳ ಗೋಜಿಗೂ ಹೋಗದ, ಕೃತಿಗಳು ಸರಳ ಸುಲಭ ಶೈಲಿಯಲ್ಲಿ ಕೇವಲ ಸ್ತೋತ್ರ ರೂಪದಲ್ಲಿದ್ದು ಗೇಯವಾಗಿವೆ. ಪ್ರಧಾನವಾಗಿ ಕೃತಿಗಳು ಶ್ರೀ ದೇವಿಯಪರವಾಗಿದ್ದು ಇತರ ದೇವತೆಗಳಪರವಾದವು ಅಲ್ಪ ಸಂಖ್ಯೆಯಲ್ಲಿವೆ.

ಈ ಸಂಗ್ರಹಕ್ಕೆ ಆಕರಸಾಮಗ್ರಿಗಳನ್ನೊದಗಿಸಿ ಸೂಕ್ತ ಸಲಹೆಗಳನ್ನಿತ್ತ ಡಾ|| ಶ್ರೀನಿವಾಸ ಹಾವನೂರ ಅವರಿಗೆ ನನ್ನ ಕೃತಜ್ಞತಾ ಪೂರ್ವಕ ವಂದನೆಗಳು.

ಎ.ಎನ್. ಅನಂತಸ್ವಾಮಿರಾವ್

## ಕೀರ್ತನೆಗಳ ಕ್ರಮಸೂಚಿ

| ಕೀರ್ತನೆ ಸಂಖ್ಯೆ | ಕೀರ್ತನೆಯ ಮೊದಲ ಸಾಲು | ಪುಟ ಸಂಖ್ಯೆ |
|---|---|---|
| ೩೦. | ಪರಿಪಾಲಿಸು ಎನ್ನನು ಶ್ರೀ ಜಗದಂಬ | ೩೩೯ |
| ೩೧. | ಪರಿಪಾಲಿಸು ಶ್ರೀ ಪರಮೇಶ್ವರಿಯೆ | ೩೪೧ |
| ೩೨. | ಪಾದವ ನುತಿಸುವೆ ದೇವಿ ಜಯ ಜಯ | ೩೪೧ |
| ೩೩. | ಪಾಲಿಸಮ್ಮ ಶ್ರೀ ಮೂಕಾಂಬಿಕೆಯೆ | ೩೪೨ |
| ೩೪. | ಪಾಲಿಸು ಪರತರ ಪಾವನೆ ಮಾತೆ | ೩೪೩ |
| ೩೫. | ಪಾವನಾತ್ಮಕಿಯೆ ಪಾಲಿಸು | ೩೪೩ |
| ೩೬. | ಪೊರೆಯುವಳು ದೇವಿ ಪೊರೆಯುವಳು | ೩೪೪ |
| ೩೭. | ಬಾ ಕೃಪಾಕರೆ ಮೋದದಿ | ೩೪೫ |
| ೩೮. | ಮಾತೆ ದಾತೆ ಹಿತೆ ಘನ ಸುಚರಿತೆ | ೩೪೬ |
| ೩೯. | ಶರತ್ಕಾಲ ಶಶಿ ಪೂರ್ಣನಿಭಾವನೆ | ೩೪೭ |

## ಆತ್ಮನಿವೇದನೆ

| | | |
|---|---|---|
| ೪೦. | ಕರುಣದಿಂದಲಿ ಪೊರೆಯೊ ನೀ ಎನ್ನ | ೩೪೮ |
| ೪೧. | ಕೃಷ್ಣರಾಯನೆ ಎನ್ನಯ ಕಷ್ಟವ ನೀಗಿ | ೩೪೯ |

## ಲೋಕನೀತಿ

| | | |
|---|---|---|
| ೪೨. | ಮನವೇ ನೀ ಭಜಿಸು | ೩೫೦ |

## ಮಂಗಳ

| | | |
|---|---|---|
| ೪೩. | ಮಂಗಳಾರತಿ ಬೆಳಗುವೆನೀಗ | ೩೫೧ |

## ಗಣೇಶ ಪ್ರಾರ್ಥನೆ

### ೧

ಕರಿವರವದನ। ದುರಿತಸೂದನ।

ಸ್ಮರಿಸುವೆ ನಿನ್ನ ಚರಣ ಪ

ಸುರುಚಿರ ಸುಮನ। ಕರುಣಾಭರಣ।

ಪರಮಪಾವನ।ಸುರವರ ಸುಗುಣ॥

ಕರುಣದೊಳನುದಿನ। ಶರಣನ ಪೊರೆಯಲು।

ಸ್ಮರಿಸುವೆ ನಿನ್ನ ಚರಣ ಅ.ಪ

ಸುರವರ ಖ್ಯಾತ । ಕರುಣಿ ವಿಖ್ಯಾತ ।

ಚರಣವ ಸ್ಮರಿಸುವೆ । ಅನವರತ

ಶರಣನ ಪೊರೆಯನು।ಕರುಣದೊಳಾಲಾಲಿಸು

।ಗೌರಿಜಾತ ಪ್ರೀತ ೧

ಮೂಷಿಕ ವಾಹನ । ಮೋದಕ ಹಸ್ತ ।

ಪಾಶಾಂಕುಶಧರ । ಪಾವನ ಚರಿತ ॥

ಆಶ್ರಿತ ಜನರಭಿ । ಲಾಷೆಯ ಸಲಿಸುವ ।

ಈಶಜಾತ ಖ್ಯಾತ ೨

ರಕ್ತಾಂಬರಧರ । ರಕ್ತಶರೀರ

। ರಕ್ತವಸ್ತ್ರ ತವ। ಭಕ್ತರ ಪೊರೆವ ॥

ಶಕ್ತನೆ ನೀ ಶಿವ । ಶಕ್ತಿ ಕುಮಾರನೆ । ಭಕ್ತದಾತ ಪ್ರೀತ ೩

ಪ್ರಥಮದಿ ನಿನ್ನ । ಸ್ತುತಿಯನು ಗೈವೆ ।
ಮತಿಯನು ನೀಡೈ। ಹಿತದಾಯಕನೆ॥
ಸತತವು ವಿಜಯದ । ಪಥವನು
ಕಾಣಿಸು ಭೂತನಾಥ ಜಾತ ೪

## ಶ್ರೀಹರಿಸ್ತುತಿ

### ೨

ಕರುಣವಿತ್ತು ಪೊರೆದನು ದೇವ ನಾರಾಯಣ
ಈ ಮಹಾಮಹಿಯ ಪ

ಆದಿ ಮೊದಲಿನೊಳು । ಭೇದಿಸಿ ತಮನನು ।
ವೇದವನು ಸಾಧಿಸುತ ೧

ಸುರಾಸುರರು ಕೂಡಿ । ಶರಧಿಯ ಮಥಿಸಲು ।
ಹರುಷದೊಳಾ ಗಿರಿಯನೆತ್ತಿ ೨

ಧರಣಿಯಚೋರನ । ವರಾಹವತಾರದಿ।
ಹರಣವನು ಹೀರುತಲಿ ೩

ನರಹರಿ ರೂಪದೊ । ಉದರವ ಬಗಿಯುತ ।
ವರ ಪ್ರಹ್ಲಾದನಿಗೊಲಿದು ೪

ಮೂರಡಿ ಭೂಮಿಯ ।ಕೋರುತ ಬಲಿಯೊಳು ।
ಈರಡಿಯ ಮಾಡುತಲಿ ೫

ಛಲವನು ಪಿಡಿಯುತ । ಇಳೆಯೊಳು ಕ್ಷತ್ರಿಯ ।
ಕುಲವನು ತಾನಳಿಸುತಲಿ ೬

ತರುಣಿಯನೊಯ್ದಾ । ದುರುಳನ ಛೇದಿಸಿ ।
ಶರಣಶಿಖಾಮಣಿಗೊಲಿದು ೭

ಗಿರಿಯನು ತಾನೆತ್ತಿ। ಕಿರುಬೆರಳಿಂದಲಿ।
ಸರಸದೊಳಾತುರುಗಳನು ೮

ಅದ್ಭುತ ಮಹಿಮೆಯ । ತೋರುತಲೀತನು ।
ವಧಿಸುತಲಾ ತ್ರಿಪುರರನು ೯

ಕಲಿಯುಗದೀತನು । ಕಲ್ಕಿಸ್ವರೂಪನು ।
ಕಳೆವನು ಭೂಭಾರವನು ೧೦

ಪಂಕಜನಾಭನು । ಪರಮ ಪವಿತ್ರನು
ಕಿಂಕರರಿ ಗೊಲಿದವನು ೧೧

೩

ತೋರುವನೂ । ದಯ ದೋರುವನೂ॥
ಭಕ್ತರಿಗೆ । ದಯ। ದೋರುವನು ಪ

ತೋರುತಲವರನು । ಪರಿಪರಿವಿಧದೊಳು
ಪೊರೆಯುವನೂ । ಹರಿ । ಮೆರೆಯುವನೂ ಅ.ಪ

ಆದಿಯೊಳಾ। ತಮನೆಂಬಾಸುರನನು ॥
ಭೇದಿಸಿ ವೇದವ ತಂದವನು ॥
ಮೋದದಿ ಗಿರಿಯನು । ಕೂರ್ಮವತಾರದಿ ।
ಸಾಧಿಸಿ ಬೆನ್ನೊಳು ಪೊತ್ತವನು ೧

ಧರಣಿಯ ಕದ್ದೊಯ್ದುಸುರನ ಬಗಿಯಲು ।
ವರಾಹವತಾರವ ತಳೆದವನು॥
ನರಮೃಗರೂಪದೊ। ಳುದಿಸುತ ಕಂಬದಿ।
ವರ ಪ್ರಹ್ಲಾದನ ಪೊರೆದವನು ೨

ಬಲಿಯೊಳು ದಾನವ ।ಬೇಡುತ ಮೂರಡಿ।
ಯೊಳಗಿಳೆಯನು ತಾನಳೆದವನು॥

ಛಲದೊಳು ಕ್ಷತ್ರಿಯ । ಕುಲವನು ಅಳಿಸಿದ ।
ಭಾರ್ಗವನೂ ಭೃಗು ಮೊಮ್ಮಗನು। ೩

ಶರಣಗೆ ಲಂಕಾ। ಪುರದೊಡೆತನವನು।
ಸ್ಥಿರವಾಗಿತ್ತಿಹ ರಾಘವನು॥
ಕಿರುಬೆರಳಿಂದಲೇ।ಗಿರಿಯನು ಎತ್ತುತ।
ತುರುಗಳ ನಿಕರವ ಪೊರೆದವನು ೪

ಬೌದ್ಧವತಾರವ । ಧರಿಸಿದ ಮಹಿಮನು।
ಕಲ್ಕಿಸ್ವರೂಪದಿ ಮೆರೆಯುವನು॥
ಶ್ರದ್ಧೆಯೋಳವನನು । ಭಜಿಸಲು ಮುದದಲಿ ।
ಅಬ್ಧಿವಾಸ ಮೈದೋರುವನು ೫

ಮಧುವನದಲಿ ಧ್ರುವ । ತಪವಾಚರಿಸಲು ।
ಮುದದೊಳು ಧ್ರುವಪದವಿತ್ತವನು ।
ಸುದತಿಯು ಮೊರೆಯಿಡ । ಲಕ್ಷಯ ಸೀರೆಯ ।
ಇತ್ತವನೂ ದಯವಿತ್ತವನು ೬

ಶೇಷಗಿರೀಶನು । ದಾಸರಿಗೊಲಿದವ ।
ರಾಸೆಯ ಸಲಿಸಿದ । ಶ್ರೀವರನು ॥
ಶೇಷಶಯನ ಹರಿ । ದಾಸದಾಸನೆ ।
ನ್ಯಾಸೆಯನೂ ತಾನೀಯುವನು ೭

ಪಂಕಜನಾಭನು । ಪರಮಪವಿತ್ರನು ।
ಕಿಂಕರಜನಪರಿಪಾಲಕನು ॥
ಶಂಕಚಕ್ರಂಗಳ ಧರಿಸಿದ ಶ್ರೀಪತಿ ।
ವೆಂಕಟೇಶ ದಯದೋರುವನು ೮

## ೪

ನಾಮಧ್ಯಾನವ ಮಾಡಿರೋ। ಶ್ರೀ ರಾಮನ
ನಾಮಧ್ಯಾನವ ಮಾಡಿರೋ ಪ

ನಾಮಧ್ಯಾನವ ಮಾಡಿ । ಕಾಮಿತಾರ್ಥವ ಬೇಡಿ ॥
ಶ್ಯಾಮಸುಂದರ ಸು । ಪ್ರೇಮಿ ಶ್ರೀರಾಮನ ಅ.ಪ

ಕಾಮವರನ ಸತಿ । ಹೈಮಾವತಿಯು ಸದಾ॥
ಪ್ರೇಮದಿ ಜಪಿಸುವ । ರಾಮಚಂದ್ರನ ಗುಣ ೧

ಶಿವನ ಧನುವ ಮುರಿ। ದವನಿಜೆ ಗೊಲಿದಾ॥
ರಘುವಂಶಾಬುಧಿ ಸೋಮ। ಭುವನ ವಿಖ್ಯಾತನ ೨

ಕಡುಭಕ್ತಿಯಿಂದಿತ್ತ । ಶಬರಿಯುಚ್ಛಿಷ್ಟವ॥
ಬಿಡದೆ ಸ್ವೀಕರಿಸಿದ । ಪ್ರಭು ರಾಮಚಂದ್ರನ ೩

ಕರಗಳ ಕಡಿದು ಕ। ಬಂಧನ ಶಾಪವ॥
ಪರಿಹಾರ ಗೈದ ವ। ಸುಂಧರಪಾಲನ ೪

ಬ್ರಹ್ಮಪದವಿಯನ್ನು । ಅಂಜನೆಸುತಗಿತ್ತ
ಬ್ರಹ್ಮಾಂಡನಾಯಕ । ಕಂಜಾಕ್ಷ ರಾಮನ ೫

೫

ನಾರಾಯಣ ನಿನ್ನ । ಚಾರು ದರುಶನವನ್ನ ।
ಕೋರಿ ಸ್ಮರಿಸುವೆನು ಹರಿಯೆ ಪ

ಕಾರುಣ್ಯ ಸಾಗರ । ಪರಮಕೃಪಾಕರ ।
ಸಾರಸುಗುಣ ಗಂ । ಭೀರ ರಮಾವರ॥
ಮಾರಜನಕಾ । ಪಾರಮಹಿಮ ।
ಘೋರದುರಿತ ಸಂ । ಹಾರ ಕುಜನಕು ।
ತಾರ ಭುವನೋ । ದ್ಧಾರ ದೀನೋ ।
ದ್ಧಾರ ಪತ್ತವ । ತಾರ ಶ್ರೀಹರಿ ೧

ಇಂದಿರೇಶನೆ ನಿನ್ನ । ದ್ವಂದ್ವಪಾದಗಳನ್ನ ।
ಚಂದದಿ ಪೂಜಿಸಿ ದೇವ ॥

ಕಂದರ್ಪನಯ್ಯನೆ । ಮಂಧರಧರನೆ ಮು ।
ಕುಂದ ಗೋವಿಂದ । ಬೃಂದಾರಕ ವಂದ್ಯ ॥
ಕುಂದರದನನೇ । ಸುಂದರಾಂಗನೆ ।
ನಂದಕಂದನೆ । ಸಿಂಧುಶಯನನೆ ।
ಬಂಧಭವಭಯ । ಹರಣ ಜಗದಾ ।
ನಂದಮೂರುತಿ । ವೆಂಕಟೇಶನೆ ೨

೬

ಪಾಲಿಸು ಶ್ರೀಕೃಷ್ಣ । ಬಾಲ ಮುಕುಂದ ಗೋ।
ಪಾಲಬಾಲಕ ಸುಂದರ ಪ

ಕಾಳೀಯ ಮರ್ದನ । ಲೀಲಾವಿನೋದ ಭೂ ।
ಲೋಲ ಶ್ರೀವರ ಶ್ರೀಕರ
ಬಾಲಭಾಸ್ಕರತೇಜ ವರ ವನ।ಮಾಲ
ಶೋಭಿತ ಕೋಮಲಾಕರ।
ನೀಲವರ್ಣ ಶುಭಾಂಗ ಮುನಿಜನ ।
ಪಾಲ ನೀ ಕರುಣಾಲವಾಲನೆ ೧

ನವನೀತದಧಿಚೋರ । ಭುವನಮೋಹನಾಕಾರ ।
ಭುವನೋದ್ಧಾರಕ ಶ್ರೀಧರ॥
ಪವಮಾನಸುತ ಸೇವ್ಯ । ಭುವನವಂದಿತ ದಿವ್ಯ ।
ವಿವಿಧಮಾನುಷವಿಗ್ರಹ ॥
ಅವನಿಯೊಳಗವತರಿಸಿ ದೇವಕಿ।
ಕುವರ ನೀನೆನಿಸುತ್ತ ಯಾದವ ।
ನಿವಹದೊಳು ನೀನಿರ್ದು ಗೋವ್ಗಳ ।
ಭುವನದಲಿ ಪಾಲಿಸಿದ ಶ್ರೀಹರಿ ೨

ಕಂಕಣ ಕೇಯೂರ। ಕಡಗಾದ್ಯಲಂಕಾರಿ
। ಕಿಂಕರಜನಪ್ರಿಯ ಶೌರಿ ॥

ಮಂಕು ಮೂಡಿದ ಸತೀ । ಸಂಕುಲವನು ಅತಿ ।
ಬಿಂಕದ ಗೋವಳರಾಯ
ಶಂಖಚಕ್ರವ ಕರದಿ ಧರಿಸುತ ।
ಸಂಖ್ಯೆಯಿಲ್ಲದ ದುಷ್ಟದಾನವ ।
ಸಂಕುಲವ ನಳಿಸಿರ್ದ ನೀನಖಿ ।
ಳಾಂಕ ಮಹಿಮಾನಂತ ರೂಪನೆ ೩

ಅಂಬುಜೋದ್ಭವತಾತ । ಜಂಭಾರಿ ಸುರನುತ ।
ಶಂಭುಸುಪ್ರೀತ ಖ್ಯಾತ॥
ಅಂಬುಧಿವಾಸನೆ ಅಂಬುಜನಾಭನೆ।
ಕಂಬುಕಂಧರ ದೇವ ಕುಂಭಿನಿನಾಥ ॥
ಅಂಬುಜಾಕ್ಷನೆ ಜಂಭಭೇದಿಸ್ವ ।
ಯಂಭು ತ್ರಿದಶರಿಗಿಂಬುದೋರಲು ।
ಕುಂಭಿನಿಯ ಭಾರಹರಿಸುತ ।
ಬೆಂಬಿಡದೆ ಪಾಲಿಸಿದ ಶ್ರೀಹರಿ ೪

## ೭

ಭಗವನ್ನಾಮವನಾಡು ಅಡಿಗಡಿ।
ಗಾಡು ಅಡಿಗಡಿಗಾಡು ಅಡಿಗಡಿ ಪ

ಭಗವನ್ನಾಮದ ಸುಧೆಯನು ಸೇವಿಸಿ ।
ಸೊಗದಿಂ ನಲಿನಲಿದಾಡು ಅಡಿಗಡಿ ಅ.ಪ

ಪಾಪವ ನೀಗಿ ಪಾವನನಾಗಿ।
ಶ್ರೀಪತಿಯನು ಕೂಡ್ಯಾಡು ಅಡಿಗಡಿ ೧

ಪಾಮರಗೋಲಿದಾ ರಾಮನ ನಾಮವ ।
ಪ್ರೇಮದಿ ಮನದೊಳಗಾಡು ಅಡಿಗಡಿ ೨

ತರುಣಿಯ ಸೀರೆಗೆ ಅಕ್ಷಯವಿತ್ತ ।
ಕೃಷ್ಣನ ನಾಮವನಾಡು ಅಡಿಗಡಿ ೩

ದಾಸಜನರ ಮನದಾಸೆಯ ಸಲಿಸುವ ।
ವಾಸುದೇವನ ಕೂಡ್ಯಾಡು ಅಡಿಗಡಿ ೪

ಇಂಗಿತವೀಯುವ ಮಂಗಳಮಹಿಮ ।
ರಂಗನ ನಾಮವ ನಾಡು ಅಡಿಗಡಿ ೫

ಮರಣಕಾಲದೊಳಜಾಮಿಳಗೊಲಿದಾ ।
ನಾರಾಯಣ ನೊಡನಾಡು ಅಡಿಗಡಿ ೬

ವೆಂಕಟರಮಣನ ಸಂಕಟಹರಣನ ।
ಕಿಂಕರನಾಗಿ ನೀನಾಡು ಅಡಿಗಡಿ ೭

## ೮

ಮುರಲಿ ನಾದವ ಮಾಡಿ । ಕುಣಿದಾಡಿ ಬಾರೊ।
ಕೃಷ್ಣ । ಕುಣಿದಾಡಿ ಬಾರೋ ಪ

ಕಿರುನಗೆ ಸೂಸುತ। ನಲಿದಾಡಿ ಬಾರೋ ಅ.ಪ

ರಂಗಯ್ಯ ಬಾರೋ । ಕೃಷ್ಣಯ್ಯ ಬಾರೋ
ಮಂಗಳಾತ್ಮಕ ಮುದ್ದು । ಕಂದಯ್ಯ ಬಾರೋ ೧

ನೊರೆಹಾಲ ನೀವೆ । ಸರಸದಿ ಬಾರೋ ।
ನವನೀತವೀಯುವೆ । ನಲಿದೋಡಿ ಬಾರೋ ೨

ಕಜ್ಜಾಯ ಕೊಡುವೆ। ಮುದ್ದು ನೀ ಬಾರೋ ॥
ಗೆಜ್ಜೆನಾದವ ಮಾಡಿ । ಎದ್ದೋಡಿ ಬಾರೋ ೩

## ೯

ವೈದೇಹೀಧವ ರಾಮ ನಿನ್ನ । ಪಾದವ
ಬೇಡುವೆ ಪರಿಪಾಲಿಸೆನ್ನ ಪ

ಜಗದಭಿರಾಮ । ಅಗಣಿತ ಮಹಿಮ
ಜಗವನುದ್ಧರಿಸುವ । ಘನ ಗುಣಧಾಮ ೧

ಕೌಸಲ್ಯ ರಾಮ । ಪಶುಪತಿ ಪ್ರೇಮ ॥
ಕೌಶಿಕ ಮಖಪರಿ । ಪಾಲಕ ರಾಮ ೨

ಪಾವನ ರಾಮ । ಶ್ರೀವರ ರಾಮ ॥
ಪವನಜಸೇವಿತ। ರವಿಕುಲಸೋಮ ೩

ದಶರಥರಾಮ । ವಸುಧೀಶ ರಾಮ ॥
ಋಷಿಪತ್ನಿಯಹಲ್ಯೋ। ದ್ಧಾರಕ ರಾಮ ೪

ಅಸುರಾರಿ ರಾಮ । ಬಿಸಜಾಕ್ಷ ರಾಮ ॥
ದಶಮುಖಭಂಜನ । ಕೋದಂಡರಾಮ ೫

## ೧೦

ಹರಿಯೆ ನಿನ್ನಯ ಮಹಿಮೆ। ಏನನ್ನುವೆ ।
ನರಿಯುವುದಸದಳವು ಪ

ಪರಿಪರಿವಿಧದೊಳು। ರೂಪವ ಧರಿಸುತ್ತ ॥
ಧರಣಿ ಭಾರವನ್ನೆಲ್ಲ। ಪರಿಹಾರ ಮಾಡುವ ಅ.ಪ

ನೀರೊಳು ಮತ್ಸ್ಯನಾದೆ । ಏನನ್ನುವೆ ।
ಕೂರ್ಮರೂಪವ ತಳೆದೆ ॥
ವರಹನು ನೀನಾದೆ । ನರಹರಿಯಾದೆ ನೀ॥
ಮೂರಡಿ ಭೂಮಿಯ । ವಟುವಾಗಿ ಬೇಡಿದೆ ೧

ಭಾರ್ಗವ ರಾಮನಾದೆ । ಏನನ್ನುವೆ ।
ಕಾಕುಸ್ಥ ರಾಮನಾದೆ ॥
ಯಾದವಪತಿಯಾದೆ । ಬೌದ್ಧನು ನೀನಾದೆ ।
ಕಲ್ಕಿರೂಪದಿ ಬಂದು । ಧರೆಯನುದ್ಧರಿಸಿದೆ ೨

ಜಗದಾದಿ ದೇವ ನೀನು । ಏನನ್ನುವೆ ।
ಜಗದೇಕನಾಯಕನು ॥
ಜಗವನುದ್ಧರಿಸುವ । ಜಗನ್ನಿಯಾಮಕ ನೀನು ॥
ನಿಗಮಕೆ ಸಿಲುಕದ । ಅಗಣಿತ ಮಹಿಮನು ೩

ಚಿನ್ಮಯಾತ್ಮಕನು ನೀನು । ಏನನ್ನುವೆ ।
ಪ್ರಣವ ಸ್ವರೂಪ ನೀನು ॥
ಅಣುರೇಣು ತೃಣಕಾಷ್ಠ । ಭರಿತನಾಗಿಹ ನೀನು ॥
ಜನನಮರಣವಿರ । ಹಿತನಾದ ದೇವನು ೪

## ೧೧

ಹರಿ ನಿನ್ನ ನಾಮದ । ಸ್ಮರಣೆಯ ನಾನು ॥
ನಿರುತವು ಮಾಡುವೆ । ಪೊರೆಯೆನ್ನ ನೀನು ಪ

ಶರಣರ ಪೊರೆವ। ಪರಮ ಪಾವನನು ।
ಕರುಣಾಳು ನಿನ್ನಯ । ಶರಣನಾಗಿಹೆನು ಅ.ಪ

ಕರಿರಾಜಗಿತ್ತೆ ನೀ । ವರ ಮುಕ್ತಿಪಥವ ॥
ತರಳನಿಗೊಲಿದಿತ್ತೆ । ವರಧ್ರುವಪದವ ೧

ಹರಿಯನು ತೋರೆಂದು । ಗರ್ಜಿಸಿ ಜರೆದ॥
ದುರುಳನ ಬಗಿಯುತ್ತ। ತರಳನಿಗೊಲಿದ ೨

ನಾಮವನರಿಯದ । ಪಾಮರಗೊಲಿದು ॥
ಕಾಮಿತಾರ್ಥವನಿತ್ತೆ। ಪ್ರೇಮದೊಳನಿಶ ೩

ಮರಣದ ಸಮಯದಿ । ಕರೆದಜಾಮಿಳಗೆ॥
ಪರಮಪದವನಿತ್ತು । ಕರುಣದಿ ಪೊರೆದ ೪

ಅರಿತಾದರು ಮನ। ಕ್ಕರಿಯದೆ ಗೈದ ॥
ದುರಿತಂಗಳಿರೆ ಪರಿ। ಹರಿಸೆಂದು ಸತತ ೫

ನೀನಲ್ಲದೆನ್ನನು । ಪೊರೆಯುವರಿಲ್ಲ ॥
ನಿನ್ನ ಸೇವೆಯ ಮಾಡ । ಲರಿಯೆ ನಾನಲ್ಲ ೬

ಇಹಪರಸುಖವಿತ್ತು । ಮುಕ್ತಿಯನೀವ ॥
ಮಹಿಮನೆಂದರಿತಿಹೆ । ಭಕ್ತಸಂಜೀವ ೭

## ೧೨

ಹರಿಯೇ ನಿನ್ನಯ । ಅಪಾರ ಮಹಿಮೆಯ ।
ನರಿತಿಹರಾರಿಹರು ॥
ಪರಿಕಿಸಿ ನೋಡಲು । ಪರಮಪೂಜ್ಯನು ।
ಪರತರಪಾವನನು ಪ

ಭಗವದ್ರೂಪನು। ತ್ರಿಗುಣಾತ್ಮಕನು। ಜಗದಾಧಾರಕನು ॥
ಜಗನ್ನಿವಾಸನು। ಜಗದಾನಂದನು। ಜಗದೀಶನು ನೀನು ೧

ಜಗನಿಯಾಮಕ । ಜಗದುದ್ಧಾರಕ । ತ್ರಿಜಗವಿರಾಜಿತನು॥
ಅಗಣಿತಮಹಿಮನು। ನಿಗಮಗೋಚರ । ತ್ರಿಜಗದ್ವಂದಿತನು ೨

ಭಕ್ತದಾತನು । ಮುಕ್ತಿದಾತನು । ಭಕ್ತೋದ್ಧಾರಕನು ॥
ಭಕ್ತಾನಂದನು। ಭಕ್ತಾಧೀನನು। ಭಕ್ತಪರಾಯಣನು ೩

ಶರಣಾಗತಪರಿ । ಪಾಲಕ । ನೀನು। ಕರುಣಾಸಾಗರನು॥
ಪರಬ್ರಹ್ಮನು । ಪರಂಜ್ಯೋತಿಯು । ಪರಮಾತ್ಮನು ನೀನು ೪

ನಿನ್ನಯ ನಾಮೋ। ಚ್ಚರಿಸಿದ ಪಾಮರ । ಪಾವನನಾಗುವನು॥
ನಾಮಾಮೃತವನು । ಸೇವಿಸೆ ಬ್ರಹ್ಮಾ। ನಂದವ ಪೊಂದುವನು ೫

## ಲಕ್ಷ್ಮೀದೇವಿ

### ೧೩

ಭಾಗ್ಯವ ಕೊಡು ತಾಯೆ। ನೀ ಸೌ।
ಭಾಗ್ಯವ ಕೊಡು ತಾಯೆ ಪ

ಭಾರ್ಗವಿ ನಿನ್ನಯ। ಪದಯುಗಕೆರಗುವೆ।
ಭಾಗ್ಯದ ಲಕ್ಷ್ಮೀ ಸೌ। ಭಾಗ್ಯದ ನಿಧಿಯೇ ಅ.ಪ

ಸಾಗರಸಂಜಾತೆ। ದೇವಿ। ನಾಗವರದಪ್ರೀತೆ ॥
ಯೋಗಿಜನಾವಳಿ। ಮಾನಸಪೂಜಿತೆ ।
ಅಗಣಿತಗುಣಮಣಿ। ತ್ರಿಜಗದ್ವಂದಿತೆ ೧

ಸುರುಚಿರಸುಮಗಾತ್ರೆ । ದೇವಿ। ಹಿಮಕರನಿಭವಕ್ತ್ರೆ ॥
ಸುರನರ ಕಿನ್ನರ । ಸುರಮುನಿ ಪೂಜಿತೆ ।
ಕಾಮಿತವೀಯುವ ॥ ಕರುಣಾಕರೆಯೆ ೨

ಜನನಿಯೆ ನಿರತವು ನೀ । ಪ್ರೇಮವ । ನಿರಿಸುತಲೆನ್ನೊಳು ನೀ ।
ಕನಕದ ವೃಷ್ಟಿಯ । ಕರೆಯುತಲನುದಿನ ।
ಮನ್ಮನದಿಷ್ಟವು । ಸಿದ್ಧಿಸುವಂದದ ೩

ಅಹಿಪತಿ ಶಯನನಿಗೆ । ಮೋಹದ । ಮಹಿಷಿಯು ನೀನಾಗೆ ॥
ಮಹಿಮಾಕರೆ ನೀ । ಮಹಿಯೊಳಗನಿಶವು ।
ಇಹಪರ ಸುಖವನು । ಭವಿಸುವ ತೆರದಾ ೪

ಅಜಭವಸುರವಿನುತೆ । ದೇವಿ । ಸುಜನಾವಳಿಪ್ರೀತೆ ॥
ಗಜವಾಹಿನಿ ವರ । ಮದಗಜಗಮನೆಯೆ ।
ವಿಜಯವಿಠಲಪ್ರಿಯೆ ಶ್ರೀ ಗಜಲಕ್ಷ್ಮಿಯೆ ೫

ಮಂಗಳಕರವಕ್ತ್ರೆ । ನೀ ಶುಭ । ಮಂಗಳೆ ಸುಪವಿತ್ರೆ ॥
ಮಂಗಳಾಂಗಿ ನರ । ಸಿಂಗನ ರಮಣಿಯೆ ।
ಮಂಗಳಕಾರ್ಯಗ । ಳನುದಿನವೆಸಗುವ ೬

ಪಂಕಜದಳನೇತ್ರೆ । ದೇವಿ । ಕಿಂಕರನುತಿಪಾತ್ರೆ ॥
ಶಂಖಚಕ್ರಾಂಕಿತ । ಶ್ರೀ ವೈಕುಂಠನ ।
ಅಂಕದಿ ಮೆರೆವಖಿ । ಳಾಂಕ ಮಹಿಮಳೇ ೭

## ಲಕ್ಷ್ಮೀದೇವಿ

## ೧೪

ಜನನಿ ಬ್ರಹ್ಮನ ರಾಣಿ । ಪುಸ್ತಕಪಾಣಿ ಪ.

ಫಣಿರಾಜನಿಭವೇಣಿ । ವರವೀಣಾಪಾಣಿ ॥
ಘನವಿದ್ಯಾದಾಯಿನಿ । ಪರಮಕಲ್ಯಾಣಿ ೧

ಶರದಿಂದುನಿಭವಕ್ತ್ರೆ । ಅರವಿಂದದಳನೇತ್ರೆ ॥
ಪರಮಕೋಮಲಗಾತ್ರೆ । ಸುರಮುನಿನುತಿಪಾತ್ರೆ ೨

ನೃತ್ಯವಿನೋದಿನಿ । ಸ್ತೋತ್ರ ಸುಪ್ರೀತೆ ನೀ
ಭೃತ್ಯೌಘಪಾಲಿನಿ । ನಿತ್ಯಕಲ್ಯಾಣೀ ೩

## ೧೫

ಜನನಿ ಬ್ರಹ್ಮಾಣಿಯೆ ।
ವರ ವೀಣಾಪಾಣಿಯೆ ॥ ಜನನಿ ಬ್ರಹ್ಮಾಣಿಯೆ ಪ.

ವಾಣಿಯೆ । ವಿಧಿರಾಣಿಯೆ ಘನ ।
ಕರುಣಿಯೆ । ಫಣಿವೇಣಿಯೆ ॥
ಬಾ ಬಾ ಶುಕವಾಣೀ । ಜನನೀ ಬ್ರಹ್ಮಾಣಿಯೆ ೧

ಶಾರದೆ । ಸಲಹು ಸನ್ನುತೆ । ದಯವ
ದೋರುತೆ ವರಗಳೀಯುತೆ ।
ಬಾ ಬಾ ಗೀರ್ವಾಣೀ ಜನನಿ ಬ್ರಹ್ಮಾಣಿಯೆ ೨

ಶರಣರ ಪೊರೆವ ಪ್ರೀತೆಯೆ । ಸುಖವಿದಾತೆಯೆ ।
ವಿಮಲಚರಿತೆಯೆ ॥
ಬಾ ಬಾ ವಾಗ್ವಾಣೀ । ಜನನಿ ಬ್ರಹ್ಮಾಣಿಯೆ ೩

## ೧೬

ಮನ ಒಲಿದೆನ್ನನು । ಪಾಲಿಸು ಜನನಿ ಪ.

ಘನ ವಿದ್ಯಾದಾಯಿನಿ । ಜಲಜಾಂಬಕಿ ನೀ ಅ.ಪ

ವಿದ್ಯಾವಿದಾತೆ ಬುದ್ಧಿಪ್ರದಾತೆ ॥
ಶ್ರದ್ಧೆಯ ಬೇಡುವೆ । ಸದ್ಗುಣಭರಿತೆ ೧

ಗಾನವಿಲೋಲೆ । ವಿನಮಿತಪಾಲೆ ॥
ಜ್ಞಾನಪ್ರದಾಯಿನಿ । ಘನಗುಣಶೀಲೆ ೨

ಆಡುವ ನುಡಿ ಕೈ । ಗೂಡುವ ತೆರದಲಿ ॥
ಮಾಡೌ ಬೇಡುವೆ । ನಡಿಗಳಿಗೆರಗಿ ೩

ಮನ್ಮನದಿಷ್ಟವ । ನಿತ್ತೆನ್ನ ಪೊರೆ ನೀ ॥
ಬೊಮ್ಮನ ರಾಣಿ । ನಿತ್ಯಕಲ್ಯಾಣಿ ೪

## ೧೭

ಶಾರದಾಂಬೆ । ಜಯ ಜಯ । ಶಾರದಾಂಬೆ ಪ.

ತವ ಚರಣವ ಸ್ಮರಿಸುವ । ಶರಣರ ಪೊರೆವುದು ।
ಶಾರದಾಂಬೆ ಅ.ಪ

ನಿರತವು ನೀ ಮನ। ವೊಲಿಯುತಲೆನ್ನಯ ।
ಜಿಂಹ್ವೆಯೊಳಿರುವುದು । ನಲಿನಲಿದು
ಕರುಣಿಯೆ ನೀ ದಯ । ದೋರುತ ಪೊರೆವುದು । ಶಾರದಾಂಬೆ ೧

ಹರಿನಾಮಾಮೃತ । ವನುದಿನವೆನ್ನಯ ।
ರಸನೆಯು ಸೇವಿಸು । ವಂದದಿ ನೀ ॥
ವರಗಳ ನೀ ವಾ। ಗ್ದೇವಿಯೆ ಕರುಣಿಸು । ಶಾರದಾಂಬೆ ೨

ಮರಣದ ಕಾಲದಿ । ಹರಿಯನು ಬಾಯೊಳು ।
ಸ್ಮರಿಸುವ ಜ್ಞಾನವ । ನೀಯುತಲಿ ॥
ಶರಣನ ಪೊರೆವುದು । ಪರಮ ಕೃಪಾಕರಿ । ಶಾರದಾಂಬೆ ೩

ಆಡುವ ನುಡಿ ಕೈ । ಗೂಡುವ ತೆರದಲಿ ।
ಮಾಡು ನೀ ಕೃಪೆಯ । ನ್ನನವರತ ॥
ಜೋಡಿಸಿ ಕೈಗಳ । ವಿನಯದಿ ಬೇಡುವೆ । ಶಾರದಾಂಬೆ ೪

ವೀಣಾಪಾಣಿ । ಕೋಕಿಲ ವಾಣಿ ।
ಪನ್ನಗವೇಣಿ । ಬೊಮ್ಮನ ರಾಣಿ ॥
ದೀನನ ನುಡಿಗಭಿ । ಮಾನವನೀವುದು । ಶಾರದಾಂಬೆ ೫

## ರುದ್ರದೇವರು

## ೧೮

ಸಾಂಬ ಸದಾಶಿವ । ಸಾಂಬ ಸದಾಶಿವ ।
ಸಾಂಬ ಸದಾಶಿವ । ಸಾಂಬ ಶಿವ ಪ

ಶಂಭೋಶಂಕರ । ಶಶಾಂಕಶೇಖರ ।
ಶಾಂಭವಿಪ್ರಿಯವರ । ಸಾಂಬ ಶಿವ ಅ.ಪ.

ಗಂಗಾಧರ ವರ । ಅಂಗಜ ಮದಹರ ।
ತುಂಗಕೃಪಾಕರ । ಸಾಂಬ ಶಿವ ॥

ಸಂಗರಹಿತನೇ ಭು। ಜಗಭೂಷ ವರ ।
ಮಂಗಳಮಹಿಮನೆ । ಸಾಂಬ ಶಿವ ೧

ವ್ಯೋಮಕೇಶಭವ । ಭಕ್ತಪರಾಯಣ ।
ಭೀಮ ಪರಾತ್ಪರ । ಸಾಂಬ ಶಿವ ॥
ವಾಮದೇವ ಪ್ರಮ । ಥಾಧಿಪ ಶಂಕರ ।
ಸಾಮಗಾನಪ್ರಿಯ । ಸಾಂಬ ಶಿವ ೨

ಖಂಡ ಪರಶು ಮಾ । ರ್ತಾಂಡಸಮಪ್ರಭ ।
ರುಂಡಮಾಲಧರ । ಸಾಂಬ ಶಿವ ॥
ದಂಡಧರ ಹರ । ಮೃತ್ಯುಂಜಯ ಭೂ ।
ಮಂಡಲನಾಯಕ । ಸಾಂಬ ಶಿವ ೩

ಜಟಾ ಮಕುಟ ಸುರ । ತಟನೀ ಧರ ವರ ।
ಕುಠಾರಧರ ಹರ । ಸಾಂಬ ಶಿವ ॥
ಸ್ಫಟಿಕಸನ್ನಿಭ । ಖಲತ್ರಿಪುರಾಂತಕ ।
ನಿಟಿಲಾಂಬಕ ಮೃಡ । ಸಾಂಬ ಶಿವ ೪

ನಕ್ತಂಚರ ಹರ । ಶತ್ರುಭಯಂಕರ ।
ಕಿಂಕರಪ್ರಿಯಕರ । ಸಾಂಬ ಶಿವ ॥
ಭಕ್ತವಶಂಕರ । ಭಜಕಸುಖಂಕರ ।
ಮುಕ್ತಿಪ್ರದಾಯಕ । ಸಾಂಬ ಶಿವ ೫

## ದುರ್ಗಾಪರಮೇಶ್ವರಿ

### ೧೯

ಇದು ಪ್ರೇಮವೆನ್ನೊಳತಿ । ಹೈಮಾವತಿ ।
ಇದುಪ್ರೇಮವೆನ್ನೊಳತಿ ಪ

ಅಡಿಗೆರಗುವೆ ತಾಯೆ । ಉಡುರಾಜವದನೆಯೆ ॥
ಜಡರುಹದಳ ನೇತ್ರೆ । ಉಡುಪತಿಧರಜಾಯೆ ಅ.ಪ

ಸಿರಿಯರಸನ ಸಹೋ । ದರಿ ನಿನ್ನ ನಂಬಿದೆ ॥
ಪರಮಪಾವನೆ ಗೌರಿ । ಪರಮೇಶ್ವರಿ ದೇವಿ ೧

ಆದಿಶಕ್ತಿಯು ನೀನೆ । ಆದಿ ಮಾಯೆಯು ನೀನೆ ॥
ಮೋದದಾಯಕಿ ಜಗ । ದಾದಿ ನಾರಾಯಣಿ ೨

ತನು ಮನ ಧನ ನಿನ್ನ । ಘನ ಪಾದ ಸೇವೆಗೆ ॥
ವಿನಯದಿಂದರ್ಪಣೆ । ಯನುದಿನ ಗೈವಂತೆ ೩

## ೨೦

ಇನ್ನಾದರು ದಯಬಾರದು ನಿನಗೇಕೆ ।
ಸನ್ನುತೆ ಶಂಕರಿ ದೇವಿ ಪ

ನಿನ್ನ ಪಾದಂಗಳನು ಭಜಿಸುವೆ ।
ನಿನ್ನ ನಾಮಂಗಳನು ನುತಿಸುವೆ ॥
ಎನ್ನ ಮನದಿಷ್ಟಾರ್ಥವನು ಕೊಡು ।
ಎನ್ನುತೆರಗುವ ದೀನನೆನ್ನೊಳು ಅ.ಪ.

ಆದಿಮೊದಲು ಮಧು ಕೈಟಭರನು ಸೀಳಿ ।
ಮೇದಿನಿಯನು ಪೊರೆದವಳು ।
ದೇವಿ ಮೇದಿನಿಯನು ಪೊರೆದವಳು ॥
ಕ್ರೋಧದಿಂದಲಿ ಮಹಿಷ ವದನನ ।
ಭೇದಿಸಿದೆ ನೀ ಧೂಮ್ರಲೋಚನ
ಸಾಧಿಸುತೆ ನೀ ಚಂಡ ಮುಂಡರ ।
ಕಾದಿ ಗೆಲಿದಿಹ ದೇವಿ ಎನ್ನೊಳು ೧

ಮದ ಮುಖ ನಾಗಿರ್ದ ರುಧಿರ ಬೀಜಾಖ್ಯನ ।
ರುಧಿರವ ಹೀರುತಲಿ ॥
ದೇವಿ । ರುಧಿರವ ಹೀರುತಲಿ ॥
ಅಧಮ ದೈತ್ಯನ ಮದವನಿಳಿಸುವ ।
ಸದೆದು ಮಹಿಯೊಳು ಕೆಡುಹುತವನನು ।
ಮುದದಿ ಭಕ್ತರ ಕಷ್ಟಕೊದಗಿದ ।
ಪದುಮಲೋಚನೆ ದೇವಿ ಎನ್ನೊಳು ೨

ಶಂಭುಮನೋಹರೆ ಕುಂಭಪಯೋಧರಿ ।
ಶುಂಭದೈತ್ಯರ ಮರ್ದಿಸಿದೆ ನೀ ।
ನಂಬುಜಾಂಬಕಿ ನಿನ್ನ ಪಾದಾಂಬುಜಕೆ
ಮಣಿಯುವ ದೀನನನ್ನೊಳು ೩

ಕರುಣವಾರಿಧಿ ನೀನು ಸ್ಮರಣಮಾತ್ರದಿ ನಿನ್ನ ।
ಶರಣರ ಭ್ರಮರ ರೂಪದಿ ।
ಶರಣರಿಷ್ಟವ ನೀವೆ ನಿನ್ನಯ ।
ಚರಣ ಸ್ಮರಿಸುವನಾಥನನ್ನೊಳು ೪

ಸೃಷ್ಟಿಯೊಳಗೆ ಅತಿ ಕಷ್ಟಪರಂಪರೆಯ ।
ನೆಷ್ಟೆಂದು ಸಹಿಸಲಿ ದೇವಿ ।
ನಾನಿ । ನ್ನೆಷ್ಟೆಂದು ಸಹಿಸಲಿ ದೇವಿ ॥
ದುಷ್ಟನಾಶಿನಿ ಶಿಷ್ಟ ಪಾಲಿನಿ ॥ ಅಷ್ಟವಿಧ ಸೌಭಾಗ್ಯದಾಯಿನಿ ।
ಇಷ್ಟದಾಯಕಿ ದೇವಿ ಎನ್ನಾ ।
ಭೀಷ್ಟವನುಕೊಡು ಎಂದು ಬೇಡುವೆ ೫

## ೨೧

ಒಲಿಯುತ ಬಾರಮ್ಮ ।
ನೀ ಮನಒಲಿಯುತೆ ಬಾರಮ್ಮ ಪ

ನಲಿನಲಿದಾಡುತ । ಒಲುಮೆಯದೋರುತ ।
ನಲವಿನಿಂದ ಸ । ಜ್ಜನರಿಗೊಲಿವಳೇ ಅ.ಪ

ಖಳಕುಲವಳಿಸುತಲಿ । ಶರಣರಿಗೊಲಿಯುತ ಹರುಷದಲಿ ॥
ಇಳೆಯೊಳು ಮೆರೆಯುವ । ನಂದಿನಿ ನದಿಯೊಳು ।
ನೆಲೆಯಾಗಿರುತಿಹ । ಜಲದುರ್ಗಾಂಬಿಕೆ ೧

ಕರುಣವ ಬೀರುತಲಿ । ತವ ಪದ । ಶರಣರ ಪೊರೆಯುತಲಿ ॥
ಪರಿಪರಿವಿಧದಲಿ । ಧರಣಿಯ ಭಾರವ ।
ಪರಿಹರಿಸಿದ ಶ್ರೀ । ಪರಮೇಶ್ವರಿಯೆ ೨

ಅಂಬುಜದಳನಯನೆ । ನಿನ್ನನು । ನಂಬಿದೆ ಗುಣಸದನೆ ॥
ಶಂಭುಮನೋಹರೆ । ಶಾಂಭವಿ ಶಂಕರಿ ।
ನಂಬಿದ ಭಕುತರಿ । ಗಿಂಬು ಗೊಡಲು ನೀ ೩

ದೇಶ ದೇಶದೆಲ್ಲ । ನಿನ್ನಾ । ಶ್ರೈಸುವ ಜನಕೆಲ್ಲ ॥
ತೋಷವ ಪಡಿಸುತ । ಆಸೆಯ ನೀವೆ ।
ನ್ನಾಸೆಯ ಸಲ್ಲಿಸು । ಕಟಿಲಪುರೇಶ್ವರಿ ೪

## ೨೨

## ದೇವಿ ಭಜನೆ

ಓಂ ನಮೋ ಓಂ ನಮೋ ಓ ನಮೋ ದೇವಿ ॥
ಓಂ ನಮೋ ಓಂ ನಮೋ ಭಕ್ತ ಸಂಜೀವಿ ಪ.

ಶಂಭು ಮನೋಹರೆ । ಶಾಂಭವಿ ದೇವಿ ॥
ಜಂಭಾರಿ ಸುರನರ । ವಂದಿತೆ ದೇವಿ ಅ.ಪ.

ಮಧುಕೈಟಭಾಖ್ಯರ ವಧಿಸಿದ ದೇವಿ ॥
ಮುದದೊಳೀ ಮಹಿಯ । ನುದ್ಧರಿಸಿದ ದೇವಿ ೧

ಮಹಿಷಾಖ್ಯ ದಾನವ ಮರ್ದಿನಿ ದೇವಿ ॥
ದಹಿಸಿದೆ ಧೂಮ್ರಾಕ್ಷ । ನನು ಮಹಾದೇವಿ ೨

ಚಂಡಮುಂಡಾಖ್ಯರ । ಖಂಡಿಸಿ ಶಿರಗಳ ॥
ಚೆಂಡಾಡಿದ ಶ್ರೀ ಚಾಮುಂಡಿ ದೇವಿ ೩

ರುಧಿರಬೀಜಾಖ್ಯನ । ರುಧಿರವ ಹೀರಿ ॥
ವಧಿಸಿದೆ ಅದ್ಭುತ । ಮಹಿಮೆಯದೋರಿ ೪

ಶುಂಭ ನಿಶುಂಭ ನಿ । ಷೂದಿನಿ ದೇವಿ ॥
ಕುಂಭಿನಿ ಭಾರವ । ಹರಿಸಿದ ದೇವಿ ೫

ಅರುಣಾಸುರ ಸಂ । ಹಾರಿಣಿ ದೇವಿ ॥
ಶರಣರಿಗೊಲಿದ ಶ್ರೀ । ಭ್ರಾಮರಿ ದೇವಿ ೬

ನಂದಿನಿ ನದಿಯೊಳು । ನೆಲೆಸಿದ ದೇವಿ ॥
ಕಂದರಂತೆಮ್ಮನು । ಸಲಹುವ ದೇವಿ ೭

ನಂಬಿದ ಭಕ್ತರ । ವೃಂದವ ದೇವಿ ॥
ಅಂಬಿಕೆ ಪಾಲಿಸು । ಜಗದಂಬ ದೇವಿ ೮

ಜಟಾಧರೇಶನ । ರ್ಧಾಂಗಿನೀ ದೇವಿ ॥
ಕಟಿಲೊಳು ಮೆರೆದ । ಭ್ರಮರಾಂಬ ದೇವಿ ೯

## ಆರತಿ

## ೨೩

ಚಿತ್ರಜನಯ್ಯನ ಸಹಭವೆಗೆ । ನಿತ್ಯ ಕಲ್ಯಾಣಿ ಪರಶಿವೆಗೆ ॥
ಅತ್ಯುತ್ತಮ ನವರತ್ನದಿ ಕೆತ್ತಿದ । ಮುತ್ತಿನ ಆರತಿ ಬೆಳಗುವೆನು ॥
ದೇವಿಗಾರತಿಯ ಬೆಳಗುವೆನು ೧

ಚಂದನ ಕುಂಕುಮ ಪುನುಗು ಜವಾಜೀ ।
ಗಂಧ ಕಸ್ತುರಿ ಪರಿಮಳದಿ ॥

ಚಂದ್ರಚೂಡನರ್ಧಾಂಗಿಯ ಪಾದಕೆ ।
ಕುಂದಣದಾರತಿ ಬೆಳಗುವೆನು ॥
ದೇವಿಗಾರತಿಯ ಬೆಳಗುವೆನು ೨

ಮರುಗ ಮಲ್ಲಿಗೆ ಸುರಗಿ ಸೇವಂತಿಗೆ ।
ಪರಿಪರಿ ಸುಮದಲಿ ಶೃಂಗರಿಸಿ ॥
ಚರಣದೊಳೆರಗುತ ಕರಗಳ ಜೋಡಿಸಿ ।
ವರ ಸುಮದಾರತಿ ಬೆಳಗುವೆನು ॥
ದೇವಿಗಾರತಿಯ ಬೆಳಗುವೆನು ೩

ಮಂಗಳ ಗೌರಿ ಕೃಪಾಕರಿಗೆ । ಮಂಗಳದಾಯಕಿ ಶಂಕರಿಗೆ ॥
ಮಂಗಳ ವಾದ್ಯದ ಘೋಷದಿ ಪಾದಕೆ ।
ಮಂಗಳಾರತಿಯ ಬೆಳಗುವೆನು ॥
ದೇವಿಗಾರತಿಯ ಬೆಳಗುವೆನು ೪

## ೨೪

ಜಗದಂಬಿಕೆ ಪೊರೆ । ಭವಾನಿ । ಅಘಸಂಹರೆ ।
ಲೋಕೈಕ ಮಾತೆ ಪ.

ಪರಮ ಪಾವನೆ । ಗೌರಿ ಮನೋಹರೆ ॥
ಪರಮೇಶ್ವರಿ । ಕರುಣಾಕರೆ ಶ್ರೀ ಅ.ಪ.

ಚಂದಿರಾನನೆ । ಸ್ಕಂದಮಾತೆಯೆ । ವಿಂಧ್ಯವಾಸಿನಿ ।
ಸುಂದರಾಂಗಿಯೆ ॥
ವಂದಿಸುವೆ ನಿನ್ನ । ಕಂದರಂತೆಯೆನ್ನ ।
ಚಂದದೀ ಪೊರೆ । ಚಂದ್ರಚೂಡಪ್ರಿಯೆ ೧

ವೇದವಿನುತೆ । ಮೇದಿನಿವಿಖ್ಯಾತೆ ।
ಆದಿಶಕ್ತಿ ದೇವಿ ಆದಿನಾರಾಯಣಿ ।

ಸಾಧುಪ್ರಿಯೆ ತವ । ಪಾದಸೇವೆ ಗೈವೆ ।
ಮೋದದೀ ಪೊರೆ । ಮೋದದಾಯಕಿಯೆ ೨

ಪಂಕಜಾಂಬಕಿ । ಅಖಿಳಾಂಕ ಮಹಿಮೆ ।
ಶಂಖಚಕ್ರಧರೆ । ಕಿಂಕರಪ್ರಿಯಕರೆ ॥
ಬಿಂಕದಾಸುರರ । ಸಂಕುಲವಳಿಸಿದ ।
ವೆಂಕಟೇಶನಾ । ಸೋದರಿ ಶಂಕರಿ ೩

## ೨೫

ಜನನಿ ಪೊರೆಯೆ ರುದ್ರಾಣಿ । ಜಗ ।
ಜ್ಜನನಿ ಪೊರೆಯೆ ರುದ್ರಾಣಿ ಪ.

ಅಘಸಂಹಾರಿಣಿ । ಮೃಗಪತಿವಾಹಿನಿ ॥
ಅಗಣಿತಗುಣಮಣಿ । ಭಗವತಿ ಶ್ರೀ ಜಗ ಅ.ಪ.

ಸಿರಿ ಕಾತ್ಯಾಯಿನಿ । ಗೌರಿ ಭವಾನಿ ॥
ಪರಮಪಾವನೆ । ಪರಮೇಶ್ವರಿ ಜಗ ೧

ಶುಂಭಧ್ವಂಸಿ । ನಿಶುಂಭನಿಷೂದಿನಿ ॥
ಅಂಬುಜಮುಖಿ ಮೂ । ಕಾಂಬಿಕೆ ಶ್ರೀ ಜಗ ೨

ಗಾನವಿನೋದಿನಿ । ದಾನವ ಮಥಿನಿ ॥
ದೀನಜನಾವಳಿ । ಪಾಲಿನಿ ಶ್ರೀ ಜಗ ೩

ಜಟಾಮುಕುಟಸುರಾತಟನೀಧರಸತಿ ॥
ನಿಟಿಲಾಂಬಕಿ ಶ್ರೀ । ಕಟಿಲೇಶ್ವರಿ ಜಗ ೪

## ೨೬

ಜಯ ಜಯ ಜಗನ್ಮಾತೆ । ನಮಸ್ತೆ ।
ಜಯ ಜಯ ಜಗನ್ಮಾತೆ ಪ.

ಜಯ ಜಯ ಸುಲಲಿತೆ । ಜಯ ಜಯ
ಸನ್ನುತೆ । ಜಯ ಜಯ ಸುಖದಾತೆ ।
ನಮಸ್ತೆ । ಜಯ ಜಯ ಸುಖದಾತೆ ಅ.ಪ.

ರಾಕಾಶೋಭಿತೆ । ಲೋಕ ಸುಪೂಜಿತೆ ।
ನಾಕಾಧಿಪವಿನುತೆ । ನಮಸ್ತೆ ।
ನಾಕಾಧಿಪ ವಿನುತೆ ೧

ಅಜಭವ ಸುರನುತೆ । ತ್ರಿಜಗದ್ವಂದಿತೆ ।
ಭಜಕಾವಳಿ ಪ್ರೀತೆ ನಮಸ್ತೆ ॥
ಭಜಕಾವಳಿ ಪ್ರೀತೆ ೨

ಕೋಮಲ ಚರಿತೆ । ಘನ ಗುಣ ಭರಿತೆ ।
ಕಾಮಿತ ಫಲದಾತೆ ನಮಸ್ತೆ ।
ಕಾಮಿತ ಫಲದಾತೆ ೩

ತ್ರಿಭುವನ ಮಾತೆ । ವಿನಮಿತ ದಾತೆ ।
ನತಜನ ಸಂಪ್ರೀತೆ । ನಮಸ್ತೆ ।
ನತಜನ ಸಂಪ್ರೀತೆ ೪

ಶಂಖಚಕ್ರಾಂಕಿತೆ । ಕಿಂಕರ ಪಾಲಯೆ ।
ಶಂಕರಿ ಜಗನ್ಮಾತೆ । ನಮಸ್ತೆ ।
ಶಂಕರಿ ಜಗನ್ಮಾತೆ ೫

## ೨೭

ದಯದೋರು। ದಯದೋರು । ದಯದೋರು । ಜನನಿ ಪ

ಜಯ ಜಗನ್ಮಾತೆ ನೀ । ದಯದೋರಿ ಪೊರೆ ನೀ ಅ.ಪ

ಆದಿ ನಾರಾಯಣಿ । ಮಾಧವಭಗಿನಿ ॥
ಸಾಧುಸುಪ್ರೀತೆ ನೀ। ವೇದವಂದಿತೆ ನೀ ೧

ಭುವನಪಾಲಿನಿ ದೇವಿ । ಭುವನವಂದಿತೆ ನೀ ॥
ಭವಭಯಹಾರಿಣಿ । ಭುವನೇಶ್ವರಿ ನೀ ೨

ಶಂಖಚಕ್ರಾಂಕಿತೆ । ಶಂಕರಿ ಸುಗುಣೆ ।
ವೆಂಕಟರಮಣನ । ಪ್ರೇಮದ ಭಗಿನಿ ೩

## ೨೮

ದೇವಿ ಪಾಲಿಸು। ಅಂಬ। ದೇವಿ ಪಾಲಿಸು ಪ

ದೇವಿ ಅಂಬುಜವದನೆ ಗೌರಿ ।
ದೇವಿ ಪರಮಪಾವನೆ ಶಂಕರಿ ಅ.ಪ

ಸುರರ ಮೊರೆಯನಾಲಿಸುತಲಿ। ದುರುಳನಾದ ಅರುಣಾಸುರನ
ಹರಣ ಹೀರಿ ಮೆರೆವನುಪಮ। ಚರಿತೆ ಎನ್ನಿಷ್ಟಾರ್ಥವೀಯುತ ೧

ನಂದಿನಿನದಿಯ ಮಧ್ಯದಿ ನೆಲೆಸಿ । ಬಂಧುಭಾವದಿಂದ ಶರಣ॥
ವೃಂದವನ್ನಾನಂದದಿಂದ । ಕಂದರಂತೆ ಸಲಹುತಿರುವೆ ೨

ವಿಮಲಚರಿತೆ ಸುಗುಣಭರಿತೆ। ಅಮರವಿನುತೆ ಲೋಕಮಾತೆ॥
ಕ್ಷಮಿಸುತೆನ್ನಪರಾಧಗಳನು। ಕಮಲನೇತ್ರೆ ಪರಮಮಂಗಳೆ ೩

ನಿನ್ನ ಹೊರತು ಪೊರೆವರಿಲ್ಲ। ನಿನ್ನ ಭಜಿಸುತಿರುವೆನಲ್ಲ॥
ಎನ್ನನು ಪೊರೆವ ಭಾರವೆಲ್ಲ। ನಿನ್ನ ಪದಕೊಪ್ಪಿಸಿದೆನಲ್ಲ ೪

ಪಂಕಜಾಕ್ಷಿ ಪಾಪರಹಿತೆ। ಕಿಂಕರಜನನಿ ಶಂಕರಪ್ರಿಯೆ॥
ಶಂಖಚಕ್ರಧಾರಿಣಿ ದೇವಿ। ವೆಂಕಟರಮಣನ ಸೋದರಿ ಶಂಕರಿ ೫

## ೨೯

ಪರಮ ಸಂತೋಷವಿದು। ದುರ್ಗಾ। ಪರಮೇಶ್ವರಿಯನು।
ಸೇವಿಸುತಿರುವುದು ಪ

ಶರಣರ ಪೊರೆಯುವ। ಪರತರ ಪಾವನೆ।
ಪರಮ ಕಲ್ಯಾಣಿಯ ಸ್ಮರಿಸುತಲಿ॥
ಪರಮಾನಂದದಿ। ಚರಣವ ಸ್ಮರಿಸುತ। ದುರಿತಗಳನು ಪರಿ।
ಹರಿಸುತಲಿರುವುದು ೧

ವಿನಯದಿ ಭಜಿಸಲು। ಘನಗುಣ ಮಣಿಯು।
ಮನವೊಲಿದೆಮ್ಮನು। ಸಲಹುವಳು॥
ವಿನಮಿತಶರಣರ । ಜನನಿಯಂತಿರಲು।
ತನುಮನಧನವನ್ನರ್ಪಿಸುತಿರುವುದು ೨

ಚಂದನ ಕುಂಕುಮ। ಗಂಧ ಕಸ್ತುರಿ ಅರ।
ವಿಂದ ಸಂದೋಹವ । ಚಂದದಲಿ॥
ಚಂದಿರಮುಖಿಪದದ್ವಂದ್ವದೊಳರ್ಪಿಸಿ। ವಂದಿಸಿ ದೇವಿಯ।
ಪೂಜಿಸುತಿರುವುದು ೩

ಶಂಖಚಕ್ರಾಂಕಿತೆ। ಪಂಕಜನೇತ್ರೆಯ।
ಮಹಿಮೆಯ ಸ್ಮರಿಸುತ । ಭಕುತಿಯಲಿ ॥
ಶಂಕರಿ ದೇವಿಯ । ಕಿಂಕರರಾಗುತ। ಇಹಪರ ಸುಖವನು ।
ಸಾಧಿಸುತಿರುವುದು ೪

## ೩೦

ಪರಿಪಾಲಿಸು ಎನ್ನನು। ಶ್ರೀ ಜಗದಂಬ।
ಪರಿಪಾಲಿಸು ಎನ್ನನು ಪ

ಪರಮಪಾವನೆ ಶಿವಮನೋಹರೆ।ಪರಮ
ಕರುಣಾಶರಧಿ ಶಂಕರಿ।
ಶರಣರಕ್ಷಾಮಣಿಯೆ ನಿನ್ನಯ।ಚರಣ
ಕಮಲವ ಸ್ಮರಿಸಿ ಬೇಡುವೆ ಅ.ಪ

ಮಧುಕೈಟಭನಾಶಿನಿ। ಶ್ರೀ ಜಗದಂಬ।
ರುಧಿರಬೀಜಸಂಹಾರಿಣಿ॥

ಮುದದಿ ತರಿಯುತ ಚಂಡ ಮುಂಡರ।
ವಧಿಸಿ ಶುಂಭ ನಿಶುಂಭ ದೈತ್ಯರ॥
ಕದನದಲಿ ಆಮಹಿಷ ವದನನ।ಸದೆದು
ಮಹಿಯನು ಪೊರೆದ ಮಾತೆ ೧

ಲಂಬೋದರ ಜನನಿ। ಶ್ರೀ ಜಗದಂಬ।
ಕಂಬುಕಂಧರೆ ಸುಗುಣಿ॥
ಅಂಬುಜಾಂಬಕಿ ಜಂಭಭೇದಿ ಸ್ವ । ಯಂಭು
ರುದ್ರಾದ್ಯಮರ ವಂದಿತೆ॥
ನಂಬಿದವರಿಗಿಷ್ಟಾರ್ಥವೀಯುವ । ಶಂಭು
ಸುಮನೋಹರೆಯೆ ಶಂಕರಿ ೨

ಸುರರ ಮೊರೆಯನಾಲಿಸಿ।ಶ್ರೀ ಜಗದಂಬ।
ಅರುಣಾಸುರನ ವಧಿಸಿ।
ಧರಣಿಯೊಳು ಕಟಿಲೆಂಬ ಪುರದಲಿ ।
ಮೆರೆವ ನಂದಿನಿನದಿಯ ಮಧ್ಯದಿ
ಸ್ಥಿರದಿ ನೆಲೆಯಾಗುತ್ತ ಶರಣರ।ಮೊರೆಯ
ಲಾಲಿಸಿ ಪೊರೆವ ಜನನಿ ೩

ಸೃಷ್ಟಿಸ್ಥಿತಿಲಯಕಾರಿಣಿ। ಶ್ರೀ ಜಗದಂಬ।
ದುಷ್ಟದಾನವ ಮರ್ದಿನಿ॥
ಸೃಷ್ಟಿಯೊಳು ತವ ಬಿರುದುಗಳ ನಾ।
ನೆಷ್ಟು ಪೊಗಳಿದರೆನಗಸಾಧ್ಯವು॥
ದುಷ್ಟನಾಶಿನಿ ಶಿಷ್ಟಪಾಲಿನಿ।ಅಷ್ಟವಿಧ
ಸೌಭಾಗ್ಯದಾಯಿನಿ ೪

ಕಿಂಕರಪ್ರಿಯಜನನಿ। ಶ್ರೀ ಜಗದಂಬ।
ಶಂಕರಿ ಘನಸುಗುಣಿ॥
ಶಂಖಚಕ್ರವ ಕರದಿ ಧರಿಸುತ। ಬಿಂಕದಸುರರ
ಗೆಲಿದು ಮೆರೆಯುವ॥

ಪಂಕಜಾಂಬಕಿ ಪರಮಪಾವನೆ।
ಕಿಂಕರನ ಮನದಿಷ್ಟವೀಯುತ ೫

## ೩೧

ಪರಿಪಾಲಿಸು ಶ್ರೀ ಪರಮೇಶ್ವರಿಯೆ।
ಕರುಣದೊಳೆನ್ನನು ನೀ ಪ

ಪರಿಪರಿ ಕಷ್ಟವ। ಪರಿಹರಿಸುತ ಘನ। ಬಿರುದನು
ಪಡೆದ।ಜಗದೀಶ್ವರಿಯೆ ಅ.ಪ

ದುರುಳರ ಬಾಧೆಯೊ। ಳಮರರ ಪಾಲಿಸಿ।
ಧರಣಿಯ ಭಾರವನು॥
ಪರಿಹರಿಸುತ ಪದ। ಶರಣಗೊಲಿದ ಕರುಣಾಕರಿ।
ಶ್ರೀ। ಸರ್ವೇಶ್ವರಿಯೆ ೧

ಅಂಬಿಕೆ ತವ ಪಾ। ದಾಂಬುಜ ಯುಗವನು।
ನಂಬಿಹೆ ಶಂಕರಿಯೆ ॥
ಶಂಭುಮನೋಹರೆ। ಶಾಂಭವಿ ಶಂಕರಿ।
ಇಂಬುಗೊಡುತ ನೀ। ಬೆಂಬಿಡದೆನ್ನನು ೨

ಪಂಕಜಮುಖಿ ಶ್ರೀ। ಶಂಕರಿ ಶುಭಕರಿ। ಕಿಂಕರಪಾಲಿನಿಯೆ ॥
ಬಿಂಕದ ದಾನವ। ಸಂಕುಲವಳಿಸಿದ। ಶಂಖಚಕ್ರಾಂಕಿತೆ
। ಶ್ರೀ ದುರ್ಗಾಂಬಿಕೆ ೩

## ೩೨

ಪಾದವ ನುತಿಸುವೆ। ದೇವಿ ಜಯ ಜಯ ಪ

ಸಾಧು ಪ್ರೀತೆ ಮಹಾ। ಮಾತೆ ಘನಸುಖಿ ।
ದಾತೆ ಜಯ ಜಯ ಅ.ಪ

ರವಿಶಶಿಶೋಭಿತೆ। ಪಾವನಚರಿತೆ ॥
ಕುವಲಯದಳ ಸು। ಶ್ಯಾಮಲೆ ಕೋಮಲೆ ೧

ಗಾನವಿಲೋಲೆ। ಘನಗುಣಶೀಲೆ॥
ದೀನಜನಾವಳಿ। ಪಾಲಯೆ ಸದಯೆ ೨

ಭಕ್ತವಶಂಕರೆ। ಭಜಕಸುಖಂಕರೆ॥
ಮುಕ್ತಿದಾತೆ ಶಿವ। ಶಕ್ತಿಸ್ವರೂಪೆ ೩

## ೩೩

ಪಾಲಿಸಮ್ಮ ಶ್ರೀ। ಮೂಕಾಂಬಿಕೆಯೆ॥ ಹಿಮಶೈಲಸಂಭವೆ॥
ಪಾಲಿಸಮ್ಮ ಶ್ರೀ। ಮೂಕಾಂಬಿಕೆಯೇ॥ ಪ

ಕಾಳಿಕರುಣಿಕ।ಪಾಲಿಲೋಚನ। ಲೋಲೆ
ಸುಲಲಿತೆ। ದೇವಿ ಮಂಗಳೆ॥
ಬಾಲೆಯನುಪಮ। ಲೀಲೆ ಶುಭಚರಿತೆ।ಭೂಲೋಕಪಾಲೆ
ಸುಶೀಲೆ ಕಾತ್ಯಾಯಿನಿ ೧

ಅಂಬುಜಾಕ್ಷಿ ಸ್ವ। ಯಂಭುಮುನಿ ನಿಕು।
ರುಂಬನುತೆ ಜಗ।ದಂಬೆ ಶಂಕರಿ॥
ಶುಂಭಧ್ವಂಸಿ ನಿ।ಶುಂಭಮರ್ದಿನಿಯೆ।ನಂಬಿದೆ ನಿನ್ನ
ಹೇರಂಬನ ಮಾತೆಯೆ ೨

ದೇವಿ ನಿನ್ನಡಿ। ದಾವರೆಯ ಬಡ।ಸೇವಕರಿಗ್ವರ।
ವೀವುದನುದಿನ॥
ಭಾವವಿರಿಸುತ । ಪಾವನಾತ್ಮಕಿಯೆ।
ದೇವಿ।ಮೃಡಾನಿ।ಭವಾನಿ।ಶರ್ವಾಣಿಯೆ ೩

## ೩೪

ಪಾಲಿಸು ಪರತರ। ಪಾವನೆ ಮಾತೆ॥ ಲಾಲಿಸು ನುಡಿಗಳ।
ಭುವನವಿಖ್ಯಾತೆ॥
ಪಾಲಿಸು ಪರತರ। ಪಾವನೆ ಮಾತೆ ಪ

ಕಾಳಿಯೆ ಕರುಣಿಯೆ। ಶೀಲಸಂಪನ್ನೆಯೆ॥
ಖಳಕುಲನಾಶಿನಿ । ಜಲಜಾಂಬಿಕೆಯೆ ಅ.ಪ

ಸುರ ನರ ಕಿನ್ನರ। ಉರಗರು ಸೇವೆಯ॥
ನಿರುತವು ಸಲಿಸುವ। ಪರಮೇಶ್ವರಿಯೆ ೧

ಚರಣವ ಭಜಿಸುವ। ಶರಣರ ಪೊರೆವ॥
ಬಿರುದನು ಪಡೆದ। ಕರುಣಾಕರೆಯೆ ೨

ಶಂಕರಿ ಶುಭಕರಿ॥ ಶಂಕರಪ್ರಿಯಕರಿ॥
ಕಿಂಕರಪಾಲಯೆ। ಪಂಕಜಮುಖಿಯೆ ೩

ಕರಿವರಗಮನೆಯೆ। ಕರಿಮುಖಜನನಿಯೆ॥
ಕರುಣದಿ ಪಾಲಿಸು। ಕಟಲೇಶ್ವರಿಯೆ ೪

## ೩೫

ಪಾವನಾತ್ಮಕಿಯೆ । ಪಾಲಿಸು । ಪಾವನಾತ್ಮಕಿಯೆ ಪ

ಪಾವನಾತ್ಮಕಿ ಪಾವನಚರಿತೆ।
ಭಾವಜಾರಿಹಿತೆ ಸುಪ್ರೀತೆ॥
ದೇವಿ ಭುವನಭರಿತೆ ವಿನುತೆ।
ದೇವಿಪಾವನೆ ಪಾಲಿಸು ಮಾತೆ ಅ.ಪ

ಸೃಷ್ಟಿ ಭಾರರಾಗುತಿರ್ದ। ದುಷ್ಟ ದನುಜರಸುವ ಹೀರ್ದ॥
ಶಿಷ್ಟರಿಂಗೆ ದಯವದೋರ್ದ। ಸೃಷ್ಟವಿನುತೆ ಶಿಷ್ಟದಾತೆ ೧

ವೇದವಿನುತೆ ಭೇದರಹಿತೆ। ಸಾಧುಸುಜನಮೋದದಾತೆ॥
ಆದಿಮಧ್ಯಾಂತರಹಿತೆ। ಮಾಧವನ ಸಹಜಾತೆ ೨

ಶಂಖಚಕ್ರಗಳನು ಧರಿಸಿ। ಬಿಂಕದ ಸುರರನ್ನು ವಧಿಸಿ॥
ಕಿಂಕರರೊಳು ದಯವಿರಿಸಿದ ವೆಂಕಟರಮಣನ
ಸೋದರಿ ಶಂಕರಿ ೩

## ೩೬

ಪೊರೆಯುವಳು ದೇವಿ ಪೊರೆಯುವಳು॥
ಕರುಣದಿಂದ ನಮ್ಮ ಪೊರೆಯುವಳು ಪ

ಶರಣರಿಗೊಲಿದವರಿಷ್ಟವ ಸಲಿಸುವ।
ಪರಮಪಾವನೆ ದೇವಿ ಪೊರೆಯುವಳು ಅ.ಪ

ತೋಷದಿಂದಲವಳಾಶ್ರಿತ ಜನರಭಿ।
ಲಾಷೆಯ ಸಲಿಸುತ ಪೊರೆಯುವಳು॥
ವಾಸವಾದಿ ಸುರವಂದಿತೆ ಶ್ರೀ ಪರ।
ಮೇಶ್ವರಿದೇವಿಯು ಪೊರೆಯುವಳು ೧

ಮಹಿಷಾಸುರನನು ಮಹಿಯೊಳು ಕೆಡಹಿದ।
ಮಹಿಷಮರ್ದಿನಿದೇವಿ ಪೊರೆಯುವಳು॥
ಮಹಿಮೆಯದೋರುತ ಖಳ ಧೂಮ್ರಾಕ್ಷನ।
ದಹಿಸುತ ಮಹಿಯನು ಪೊರೆದವಳು ೨

ಚಂಡ ಮುಂಡ ಖಳ ತಂಡವಳಿಸಿ ಬ್ರ ।
ಹ್ಮಾಂಡದ ಭಾರವ ಕಳೆದವಳು॥
ರುಂಡವ ತರಿಯುತ ಚೆಂಡಾಡಿದ ಶ್ರೀ।
ಚಾಮುಂಡೇಶ್ವರಿ ಪೊರೆಯುವಳು ೩

ಭಕ್ತರ ಪೊರೆಯಲು ರಕ್ತಬೀಜಾಖ್ಯನ।
ರಕ್ತ ಪಾನವನು ಗೈದವಳು॥

ಯುಕ್ತಿಯಿಂದಲಾ ನಕ್ತಂಚರನನು।
ಶಕ್ತಿಸ್ವರೂಪಿಣಿ ತರಿದವಳು ೪

ಶುಂಭ ನಿಶುಂಭರ ವಧಿಸಿದ ಶ್ರೀ ಜಗ।
ದಂಬಾದೇವಿಯು ಪೊರೆಯುವಳು॥
ಅಂಬುಜಲೋಚನೆ ಶಂಭುಮನೋಹರೆ ।
ಇಂಬುಗೊಡುತ ನಮ್ಮ ಪೊರೆಯುವಳು ೫

ದುರುಳರ ಬಾಧೆಗೆ ಬೆದರುತ ಸುರತತಿ ।
ಮೊರೆಯಿಡಲಭಯವನಿತ್ತವಳು॥
ಅರುಣಾಸುರನ ಸಂಹರಿಸುತ ನಂದಿನಿ।
ನದಿಯೊಳು ಶರಣರಿಗೊಲಿದವಳು ೬

ಪರಿಪರಿ ವಿಧದಲಿ ಧರಣಿಯ ಭಾರವ
ಪರಿಹರಿಸುತಲಿ ಪೊರೆದವಳು॥
ಪರಮಕೃಪಾಕರಿ ಶ್ರೀ ಜಗದೀಶ್ವರಿ
ಶರಣರಾದ ನಮ್ಮ ಪೊರೆಯುವಳು ೭

ಶಂಕರಿ ಶುಭಕರಿ ಕಿಂಕರಪ್ರಿಯಕರಿ॥
ಪಂಕಜಲೋಚನೆ ಪೊರೆಯುವಳು॥
ಶಂಖಚಕ್ರಾಂಕಿತೆ ಶ್ರೀ ದುರ್ಗಾಂಬಿಕೆ।
ಕಿಂಕರರೆಮ್ಮನು ಪೊರೆಯುವಳು ೮

ಕೈಟಭಾದಿ ಖಳಸಂಕುಲವಳಿಸಿದ।
ನಿಟಲಾಂಬಕಿ ಶಿವೆ ಪೊರೆಯುವಳು॥
ಜಟಾಮಕುಟ ಸುರತಟನೀಧರಸತಿ।
ಕಟೀಲಪುರೇಶ್ವರಿ ಪೊರೆಯುವಳು ೯

## ೩೭

ಬಾ ಕೃಪಾಕರೆ। ಮೋದದಿ। ಬಾ ಕೃಪಾಕರೆ ಪ

ತವ ಪಾದವ ನುತಿಸುವೆ। ಪೊರೆಯಲು ಮೋದದಿ।
ಬಾ ಕೃಪಾಕರೆ ಅ.ಪ

ಕಮಲದಳಾಂಬಕಿ। ಕಮಲಾನನೆಯೆ।
ಕಮಲಜಪಿತನ। ಸಹಭವೆಯೆ॥
ಕಾಮಿತವೀಯುತ।ಪೊರೆಯಲು ಮೋದದಿ ೧

ನೃತ್ಯ ಗೀತ ಸು। ಪ್ರೀತೆಯೆ ಸುಗುಣಿ।
ನಿತ್ಯಕಲ್ಯಾಣಿ।ಭೃತ್ಯರ ಜನನಿ॥
ನಿತ್ಯವು ನುತಿಸುವೆ। ಪೊರೆಯಲು ಮೋದದಿ ೨

ಭುವನ ಪಾಲಿನಿ। ಭುವನೇಶ್ವರಿ ನೀ।
ಭುವನ ಮೋಹಿನಿ। ತ್ರಿಭುವನಜನನಿ॥
ಭವಭಯಹಾರಿಣಿ। ಪೊರೆಯಲು ಮೋದದಿ ೩

## ೩೮

ಮಾತೆ ದಾತೆ ಹಿತೆ। ಘನ ಸುಚರಿತೆ। ಮಾತೆ ದಾತೆ ಹಿತೆ ಪ

ಮಾತೆ ಸದ್ಗುಣ ಭರಿತೆ ಘನ ವಿ। ಖ್ಯಾತೆ ಭುವನ ವಿರಾಜಿತೆ॥
ದಾತೆ ದೀನಾನಾಥ ಜನಸಂ।ಪ್ರೀತಿಯುತೆ ಪರಿಪೋಷಿತೆ ಅ.ಪ

ಶಿರವ ಬಾಗಿಸಿ ಕರವ ಜೋಡಿಸಿ। ವಿನಯದಿಂದಲಿ ಬೇಡುವ॥
ಶರಣನನು ಅನವರತ ಪಾಲಿಸು। ಅಖಿಳ ಸಂಪದವೀಯುತ ೧

ಆದಿಶಕ್ತಿಸ್ವರೂಪಿಣಿ ತವ। ಪಾದ ಸೇವೆಯ ಗೈಯುವೆ॥
ಆದರಿಸಿ ಪೊರೆಯೆನ್ನ ಸರ್ವಪ। ರಾಧಗಳನು ಕ್ಷಮಿಸುತ ೨

ಜನನಿ ನೀನತಿಕರುಣೆಯಿಂದಲಿ। ಸುರರಿಗಭಯವನೀಯುತ॥
ದುರುಳ ದೈತ್ಯನ ವಧಿಸಿ ನಂದಿನಿ। ನದಿಯ ಮಧ್ಯದಿ ನೆಲೆಸಿದ ೩

ಪಂಕಜಾಂಬಕಿ ಪರಮಪಾವನೆ। ಶಂಕರಿ ಸರ್ವೇಶ್ವರಿ॥
ವೆಂಕಟಾಚಲನಿಲಯ ಶ್ರೀವರ। ವೆಂಕಟೇಶನ ಸೋದರಿ ೪

## ೩೯

ಶರತ್ಕಾಲ ಶಶಿ।
ಪೂರ್ಣನಿಭಾನನೆ।
ಜಗದಂಬ, ಜಗದಂಬ ಪ

ನಿರುತವು ನಿನ್ನಯ।
ಚರಣವ ಸ್ಮರಿಸುವ।
ಶರಣಾಮರತರು।
ಕರುಣೆ ಭವಾನಿ।
ಜಗದಂಬ, ಜಗದಂಬ॥ ೧

ನೀ ಕರುಣಿಸದೆ ನಿ।
ರಾಕರಿಸಲು ಎನ್ನ।
ಸಾಕುವರಾರು ಪ।
ರಾತ್ಪರ ಜನನಿ।
ಜಗದಂಬ, ಜಗದಂಬ॥ ೨

ಶರಣಾಗತರನು।
ಪೊರೆವಳೆಂಬ ಘನ।
ಬಿರುದನಾಂತ ಶ್ರೀ।
ಪರಮೇಶ್ವರಿಯೆ।
ಜಗದಂಬ, ಜಗದಂಬ॥ ೩

ಪಂಕಜಾಕ್ಷಿ ಅಖಿ।
ಲಾಂಕಮಹಿಮೆ ತವ।
ಕಿಂಕರರನು ಪೊರೆ।
ಶಂಕರಿ ದೇವಿ।
ಜಗದಂಬ, ಜಗದಂಬ॥ ೪

ಜಟಾಮಕುಟಸುರ।
ತಟನೀಧರಸತಿ।

ನಿಟಿಲಾಂಬಕಿ ಶ್ರೀ।
ಕಟಿಲಪುರೇಶ್ವರಿ।
ಜಗದಂಬ, ಜಗದಂಬ॥ ೫

### ಆತ್ಮನಿವೇದನೆ

### ೪೦

ಕರುಣದಿಂದಲಿ ಪೊರೆಯೊ ನೀ ಎನ್ನ।
ನರಹರಿಯೆ ಮುನ್ನ । ಚರಣಕಮಲವ ಸ್ಮರಿಸುವೆನು ನಿನ್ನ ಪ

ಶರಣಜನಪರಿಪಾಲನೆಂಬೀ ।
ಬಿರುದ ಧರಿಸುತ ಮೆರೆವೆಯಾದರೆ।
ಕರುಣವಿರಿಸುತ ಭರದಿ ಬಂದು ನೀ।
ಪೊರೆಯಬಾರದೆ ಶರಣು ಶ್ರೀಹರಿ ಅ.ಪ

ಗೋಪವೃಂದವ ಬಿಡದೆ ನೀ ಪೊರೆದೆ।
ಗೋಪಾಲಕೃಷ್ಣ। ಗೋಪಸ್ತ್ರೀಯರ ಹರುಷಗೊಳಿಸಿದೆ॥
ಪಾಪಿ ಕಂಸಾಸುರನ ಕೆಡಹುತ। ಗೋಪ
ವೃಂದದಿ ನಲಿದು ಮೆರೆದೆ।
ರೂಪುದೋರದೆ ಸೀರೆಗಕ್ಷಯ।
ದ್ರುಪದ ಸುತೆಯಳಿಗಿತ್ತ ಶ್ರೀಹರಿ ೧

ಭಾವದಿಂದನವರತ ನೀ ಬಿಡದೆ।
ಗೋವೃಂದ ಸಲಹಿ। ಗೋವಿಂದಾಭಿಧಾನವನು ಪಡೆದೆ॥
ಭಾವಜಾರಿ ಸ್ವಯಂಭುವಿಬುಧರ।ಭಾವವರಿಯುತ ಭರದಿ ನಾನಾ।
ಭಾವದಿಂದವತರಿಸಿ ಭೂ ಭಾ ।
ರವನು ಹೀರಿದ ಕರುಣೆ ಶ್ರೀಹರಿ ೨

ಹಿಂದು ಮುಂದೆನಗಾರು ದಿಕ್ಕಿಲ್ಲ।
ಇಂದೀವರಾಭನೆ। ಬಂಧುಬಾಂಧವರಾರು ಹಿತರಲ್ಲ॥

ಇಂದಿರೇಶನೆ ನಿನ್ನ ಚರಣ। ದ್ವಂದ್ವದೊಳು ಮನವಿತ್ತೆನಾಪ ।
ದ್ಬಂಧುವಾದರೆ ಪ್ರೇಮವಿರಿಸುತ ॥ ಬಂಧಗಳ ಪರಿಹರಿಸುತೆನ್ನನು ೩

ಪತಿತಪಾವನ ಈಶ ಸರ್ವೇಶ।
ಮಹಶೇಷಶಯನ । ಹಿತವಿಧಾಯಕ ಸರ್ವಭೂತೇಶ॥
ಪಿತನ ತೆರದಲಿ ಹಿತವ ಬಯಸುತ ।
ಮಾತೆಯಂದದಿ ಮಮತೆ ಬೀರುತ।
ಪಥವ ಕಾಣಿಸು ಎನಗೆ ನೀ ಸ। ದ್ಗತಿಯು
ದೊರಕುವ ತೆರದೊಳನುದಿನ ೪

ಶೋಕವನು ಎನಗೇತಕೀಯುವೆ।
ಶ್ರೀಕಾಂತ ಸಲಹೈ। ಲೋಕಭರಿತನೆ ಸುಖವಿಧಾಯಕನೆ॥
ಲೋಕಪೂಜಿತ ಲೋಕಪಾಲಕ ।
ಲೋಕವಂದಿತ ಲೋಕನಾಥಾ ।
ನೇಕಚರಿತನೇ ಮುಕುತಿದಾತ ಪಿ।
ನಾಕಿವಂದಿತ ಭಕ್ತವತ್ಸಲ ೫

ನಿನ್ನ ಪಾದವ ನಂಬಿ ನಾನಿಹೆನು।
ದೇವಾದಿದೇವಾ। ನಿನ್ನ ನಾಮಾವಲಿಯ ಸ್ಮರಿಸುವೆನು॥
ಮುನ್ನ ಮಾಡಿದ ಪಾಪವೆಲ್ಲವ। ನಿನ್ನ ನಾಮ ಸ್ಮರಣದಲಿ ಸಂ।
ಪೂರ್ಣ ಪರಿಹರಗೊಳಿಸಿ ನಿನ್ನಯ। ಸನ್ನುತಾಂಘ್ರಿಯ
ಸೇವೆಗಿರಿಸುತ ೬

## ೪೧

ಕೃಷ್ಣರಾಯನೆ ಎನ್ನಯ । ಕಷ್ಟವ ನೀಗಿ।
ಇಷ್ಟಾರ್ಥ ಪಾಲಿಸಯ್ಯ ಪ

ಭ್ರಷ್ಟನಾದೆನು। ಧರಣಿಯೊಳಗತಿ।
ದುಷ್ಟಜನ ಸಂಸರ್ಗದಿಂದಲಿ।
ಕೃಷ್ಣನಿನ್ನಯ। ದಾಸರಾಗಿಹ। ಶ್ರೇಷ್ಠ ಜನರನು। ಪೊರೆವ ತೆರದಿ ೧

ಮತಿಹೀನನಾದೆನಯ್ಯ। ಭೂತಳದೊಳು।
ಗತಿಹೀನನಾದೆನಯ್ಯ॥
ಮತಿಯ ಪಾಲಿಸಿ । ಕರುಣದಿ ಸ।
ದ್ಗತಿಯು ದೊರಕುವ। ತೆರದಿ ನಿನ್ನನು।
ಸತತ ಸ್ಮರಿಪಾ। ನಾಥಾ ಶರಣರ ।
ಪತಿಕರಿಸಿ ಪಿತ। ನಂತೆ ಪೊರೆವ ೨

ಪಂಕಜನಾಭ ದೇವ। ವೆಂಕಟರಾಯ। ಕಿಂಕರರನು ಪೊರೆವ।
ವೆಂಕಟೇಶನೆ। ನಿನ್ನ ಚರಣದ ।
ಕಿಂಕರಗೆ ಮತಿ। ದೋರಿ ಪೊರೆಯೈ।
ಶಂಕರಾದಿ ಸು । ರೇಂದ್ರ ವಂದಿತ।
ಪಂಕಜಾಂಬಕ । ಪರಮಪಾವನ ೩

## ಲೋಕನೀತಿ

### ೪೨

ಮನವೇ ನೀ ಭಜಿಸು। ರಾಮನಾಮವನು
ಘನ ಮುಕ್ತಿಸಾಧನೆ । ಪಾದನಾಮವನು ಪ

ಅಂದದ ನಾಮ। ಚಂದದ ನಾಮ॥
ವಂದಿಸೆ ಮನಕಾ। ನಂದದ ನಾಮ ೧

ಕೋಮಲ ನಾಮ। ನಿರ್ಮಲ ನಾಮ।
ಕಾಮಿತಪೀವ ಸು। ಪ್ರೇಮದ ನಾಮ ೨

ಪಾವನ ನಾಮ। ಶ್ರೀವರ ನಾಮ॥
ಪವನಸಂಜಾತನು ಸ್ಮರಿಸುವ । ನಾಮ ೩

ಅಘಹರ ನಾಮ। ಅಗಣಿತ ಮಹಿಮ॥
ಜಗದಭಿರಾಮನ । ಘನಗುಣ ನಾಮ ೪

ಭಕ್ತಾದಿ ಜನರು। ಭಜಿಸುವ ನಾಮ।
ಮುಕ್ತಿಸಾಧನವಾದ। ಭಕ್ತಿಯ ನಾಮ ೫

## ಮಂಗಳ

### ೪೩

ಮಂಗಳಾರತಿ। ಬೆಳಗುವೆನೀಗ।
ಶೃಂಗರಿಸುತ ಸುಮ। ಸಂದೋಹದಿ ಪ

ಮಂಗಲವನು ಹಾಡಿ। ಇಂಗಿತವನು ಬೇಡಿ।
ಮಂಗಳಾತ್ಮಕಿ ದೇವಿಯ ಪಾದಕೆ ಅ.ಪ

ಅಜಭವ ಸುರನರ। ತ್ರಿಜಗಪೂಜಿತ ಪಾದ।
ಭಜಿಸುತ ಮನದೊಳು। ಮೊದಲೊಂದಿಸಿ॥
ಗಜಮುಖ ನಿನ್ನಯ। ಪಾದ ಪೂಜೆಯ ಮಾಡಿ।
ನಿಜಭಕ್ತಿಯಿಂದಲಿ। ಜಯ ಜಯವೆನ್ನುತ ೧

ಮಂದರಧರ ನಿನ್ನ। ದ್ವಂದ್ವಪಾದಗಳನ್ನ।
ಚಂದದಿ ಪೂಜಿಸಿ। ಭಜಿಸುತಲಿ॥
ಕಂದರ್ಪನಯ್ಯನೆ। ಸಿಂಧುಶಯನನೆ।
ಇಂದಿರೇಶನಿಗಾ। ನಂದದಿಂದಲಿ ೨

ಮತ್ಸ್ಯವ ತಾರಿಗೆ। ಕೂರ್ಮಗೆ ವರಾಹಗೆ।
ನರಹರಿ ರೂಪಗೆ। ವಾಮನಗೆ॥
ಭಾರ್ಗವ ರಾಮಗೆ। ಜಾನಕಿರಮಣಗೆ।
ಯಾದವಕುಲದೀಪ। ಮುರಲಿ ಕೃಷ್ಣಗೆ ೩

ಬೌದ್ಧವತಾರವ। ಧರಿಸಿದ ಮಹಿಮಗೆ।
ಕಲ್ಕಿಸ್ವರೂಪದಿ। ಮೆರೆವವಗೆ॥
ದಶವಿಧರೂಪದಿ। ಧರೆಯನು ಪೊರೆದ।
ವಿಜಯವಿಠಲ ನಮ್ಮ। ಗುರುವೆಂಕಟೇಶಗೆ ೪

# ಪ್ರಸ್ತಾವನೆ

ಕನ್ನಡ ಹರಿದಾಸ ಪಂಥಕ್ಕೆ ಅಚಲಾನಂದದಾಸರೆಂಬುವವರು ಮೊದಲಿಗರೆಂದೂ, ಅವರು ಕ್ರಿ.ಶ. ೯ನೆಯ ಶತಮಾನದಲ್ಲಿ ಇದ್ದರೆಂದೂ, ಬೇಲೂರು ಕೇಶವದಾಸರು ಒಂದು ವಾದವನ್ನು ಮುಂದಿಟ್ಟರು. ಅದಕ್ಕೆ ಅವರಿಗೆ ದೊರೆತ ಆಧಾರ ಒಂದು ಸಂಸ್ಕೃತ ಪದ್ಯ *. ಅಲ್ಲದೆ "ಅಚಲಾನಂದವಿಠಲ ಮುದ್ರಿಕೆಯ ಕೆಲವು ದೇವರ ನಾಮಗಳೂ, ಉಗಾಭೋಗಗಳೂ, ೧೬ನೇ ಶತಮಾನದ ಕನ್ನಡ ಭಾಷೆಯಂತಿವೆ. ಭಾಷಾಶಾಸ್ತ್ರಜ್ಞರು ಇವರನ್ನು ಹದಿನೈದನೇ ಶತಮಾನಕ್ಕಾದರೂ ಸೇರಿಸಬೇಕೆನ್ನುತ್ತಾರೆ. ಒಂಬತ್ತನೇ ಶತಮಾನದವರನ್ನು ಹದಿನೈದನೆಯ ಶತಮಾನಕ್ಕೆ ಕೈಹಿಡಿದು ತರಬೇಕೆಂದರೆ ಅವರ ಇತರ ಚರಿತ್ರಾಧಾರಗಳು ಬಾಧಕವಾಗಿವೆ. ಆ ವಂಶೀಕರು ತಿಳಿಸುವ ಪ್ರಮಾಣಗಳು ಅಡ್ಡಿಯಾಗಿವೆ" ಎಂದು ಅಭಿಪ್ರಾಯಪಟ್ಟಿದ್ದಾರೆ . ಇದಕ್ಕೆ ಪೋಷಕವಾಗಿ ಡಾ. ಎ. ಟಿ. ಪಾಟೀಲರು, 'ಕರ್ನಾಟಕದಲ್ಲಿ ಮೊದಲು ವೈಷ್ಣವ ಭಕ್ತಿಯನ್ನು ಬೀರಿದವರೆಂದರೆ ಅಚಲಾನಂದರು' ಎಂದಿರುವರು. 'ಭಾಷೆಯ ಸ್ವರೂಪದಿಂದಲೂ, ವಿಚಾರ ಶಬ್ದಪ್ರಯೋಗಗಳ ಸಾಮ್ಯದಿಂದಲೂ, ಅವರು ಪುರಂದರದಾಸರಿಗಿಂತ ಇತ್ತೀಚಿನವರೆಂದು ತಿಳಿಯಬೇಕಾಗುತ್ತದೆ' ಎಂಬುದು ಆರ್. ಎಸ್. ಪಂಚಮುಖಿಯವರ ಅಭಿಪ್ರಾಯವಾದರೆ, ಡಾ. ಕೆ. ಎಂ. ಕೃಷ್ಣರಾಯರು, 'ಅಚಲಾನಂದದಾಸರು ೯ನೆಯ ಶತಮಾನದಲ್ಲಿದ್ದರೆಂದು ಹೇಳುವುದಕ್ಕೆ ಸಾಕಷ್ಟು ಸಾಕ್ಷಿಸಾಹಿತ್ಯ ಸಿಕ್ಕಿಲ್ಲ' ವೆನ್ನುತ್ತಾರೆ. ಹುಲಗೂರು ಕೃಷ್ಣಾಚಾರ್ಯ, ಡಾ. ಹೆಚ್. ಕೆ. ವೇದವ್ಯಾಸಾಚಾರ್ಯ, ರಂ. ಶ್ರೀ. ಮುಗಳಿ,

---

* ಕರ್ನಾಟಕ ಭಕ್ತವಿಜಯ, ಪು.೫೬ (೧೯೬೩)

ಹೆಚ್. ಜಿ. ಬೆಂಗೇರಿ, ಕಪಟರಾಳ ಕೃಷ್ಣ ಮೊದಲಾದ ವಿದ್ವಾಂಸರು, 'ನರಹರಿ ತೀರ್ಥರೆ ಹರಿದಾಸ ಪರಂಪರೆಯಲ್ಲಿ ಮೊದಲಿಗರು ; ಅಚಲಾನಂದರಲ್ಲ' ಎಂದು ಅಭಿಪ್ರಾಯಪಟ್ಟಿದ್ದಾರೆ. ಅದಕ್ಕೆ ಅವರು ಕೊಡುವ ಕಾರಣಗಳನ್ನು ಹೀಗೆ ಕ್ರೋಡೀಕರಿಸಬಹುದು :

ಅಚಲಾನಂದವಿಠಲರ ಉಪಲಬ್ಧ ರಚನೆಗಳಲ್ಲಿ ಕೆಲವಂತೂ ವಚನಗಳೆಂದೇ ಕರೆಸಿಕೊಳ್ಳಲು ಯೋಗ್ಯವಾಗಿವೆ. ಅವುಗಳ ಭಾಷೆ ೯ನೆಯ ಶತಮಾನದ್ದಲ್ಲ ; ಸು. ೧೫ನೆಯ ಶತಮಾನದ ಕನ್ನಡ. ಅಚಲಾನಂದವಿಠಲ ಅಂಕಿತದಲ್ಲಿರುವ ಕೃತಿಯೊಂದು ಮಧ್ವಾಚಾರ್ಯರ ಸ್ತುತಿಯಾಗಿದೆ. ೧೩ನೆಯ ಶತಮಾನದಲ್ಲಿದ್ದ ಮಧ್ವಾಚಾರ್ಯರನ್ನು ೯ನೆಯ ಶತಮಾನದಲ್ಲಿದ್ದ ಅಚಲಾನಂದರು ಸ್ಮರಿಸುವುದು ಹೇಗೆ ಸಾಧ್ಯ ?

– ಈ ಅಂಶಗಳನ್ನಾಧರಿಸಿ ವಿದ್ವಾಂಸರು ಬೇಲೂರು ಕೇಶವದಾಸರ ವಾದವನ್ನು ತಳ್ಳಿ ಹಾಕಿದ್ದಾರೆ.

ಇತ್ತೀಚೆಗೆ ಡಾ. ಜಿ. ವರದರಾಜರಾಯರು ಅಚಲಾನಂದದಾಸರ ಮನೆತನದವರಲ್ಲಿದ್ದ ಕೆಲವು ಓಲೆಯ ಪ್ರತಿಗಳನ್ನು ಪರಿಶೀಲಿಸಿ, ಕನ್ನಡದಲ್ಲಿ ರಚಿತವಾಗಿರುವ ಒಂದು ಗ್ರಂಥದ ನಾಲ್ಕೇ ನಾಲ್ಕು ಓಲೆಗರಿಗಳಲ್ಲಿ ಅಚಲಾನಂದರನ್ನು ಕುರಿತ ಕೆಲವು ಸಂಗತಿಗಳಿವೆಯೆಂದಿದ್ದಾರೆ *. ಕೇಶವದಾಸರಿಗೆ ಪದ್ಯದಲ್ಲಿ ದೊರೆತಿದ್ದ ವಿವರಗಳು ಇವರಿಗೆ ಗದ್ಯದಲ್ಲಿ ದೊರೆತಿವೆ. ಪಂಢರಪುರದಲ್ಲಿ ಅಚಲಾನಂದರಿಗೆ ವಿಠಲನ ದರ್ಶನವಾದ ವಿಷಯ ಸ್ಪಷ್ಟವಾಗಿ ಗದ್ಯದಲ್ಲಿ ಹೀಗೆ ಬರೆದಿದೆ :

"ಸ್ವಸ್ತಿ ಶ್ರೀ ವಿಜಯಾಭ್ಯುದಯ ಶ್ರೀಮನ್ನೃಪ ಶಾಲೀವಾಹನ ಶಕ ವರ್ಷಃ ೮೦೧ನೆ ವಿಳಂಬಿ ಸಂವತ್ಸರದ ಚೈತ್ರ ಶುದ್ಧ ೧೦ಯಲು ಶ್ರೀಮದ ... ನದಿಯಲು ಮಾಧ್ಯಾಹ್ನಿಕಾರ್ಘ್ಯ ಪ್ರದಾನ ಕಾಲದಲ್ಲಿ ಪ್ರತ್ಯಕ್ಷರಾಗಿ ಹಸ್ತಗತರಾದ ಶ್ರೀ ವಿಠಲ ಮೂರ್ತಿಯ....."

---

* ಶ್ರೀಪಾದರಾಜರ ಕೃತಿಗಳು. ಪೀಠಿಕೆ. ಪು. ii

ಅಷ್ಟೇ ಅಲ್ಲದೆ ಅಚಲಾನಂದರ ಕಾಲದಿಂದ ಪೂಜೆಗೊಳ್ಳುತ್ತಿರುವ ವಿಗ್ರಹಗಳ ಪಟ್ಟಿಯಲ್ಲಿ 'ಅಚಲಾನಂದ ದಾಸರಿಗೆ ಪಾಂಡುರಂಗೆಯಲ್ಲೂ, ಅರ್ಘ್ಯ ಕಾಲದಲ್ಲೂ ಪ್ರತ್ಯಕ್ಷವಾದ ವಿಠಲಮೂರ್ತಿ ೧' ಎಂಬ ದಾಖಲೆಯಿದೆ. ಇದರೊಂದಿಗೆ ಅಚಲಾನಂದರು ಸ್ಥಾಪಿಸಿದ ಮಠಗಳ ಪಟ್ಟಿ (ಕೇಶವದಾಸರಿಗೆ ಈ ವಿವರಗಳು ದೊರೆತಿಲ್ಲ. ಅಚಲಾನಂದರು ಆರು ಮಠಗಳನ್ನು ಸ್ಥಾಪಿಸಿದ್ದಾರೆಯಾದರೂ ಆ ಪೀಠಗಳು ಎಲ್ಲೆಲ್ಲಿ ಸ್ಥಾಪಿತವಾದುವೆಂಬ ವಿವರ ದೊರೆಯುವುದಿಲ್ಲ. – ಕಭವಿ. ಪು. ೬) ಅವರ ಶಿಷ್ಯರ ಪಟ್ಟಿ, ಅವರ ಕಾಲದಿಂದ ಪೂಜೆಗೊಳ್ಳುತ್ತಿರುವ ವಿಗ್ರಹಗಳ ಪಟ್ಟಿ, ಮಠಕ್ಕೆ ಉಂಬಳಿಯಾಗಿ ಬಿಟ್ಟ ಗ್ರಾಮಗಳ ಪಟ್ಟಿ ಎಲ್ಲವನ್ನೂ ಹೇಳಿದೆ *. ಅಚಲಾನಂದರು ತಮ್ಮ ಪೂಜಾದಿ ಕಾರ್ಯಗಳಿಗೆ ಒಂದು ಮಠವನ್ನು ನಿರ್ಮಿಸಿದ ಉಲ್ಲೇಖವಿದೆ. ಅದರ ಪರಂಪರೆಯಲ್ಲಿ ಗೋಪೀನಾಥದಾಸರು, ಮುದ್ದು ವಿಠಲದಾಸರು ಮತ್ತು ಪಾಂಡುರಂಗದಾಸರು ಕಾಲಕಾಲಕ್ಕೆ ಅಧಿಕಾರ ವಹಿಸಿ ಪೂಜಾಕಾರ್ಯವನ್ನು ನಿರ್ವಹಿಸಿದ ವಿಚಾರವೂ ಇದೆ.

ಈ ಇಬ್ಬರು ವಿದ್ವಾಂಸರುಗಳಿಗೆ ದೊರೆತಿರುವ ವಿವರಗಳಿಂದ ಕ್ರಿ.ಶ. ೯ನೇ ಶತಮಾನದಲ್ಲಿ ಒಬ್ಬರು ಅಚಲಾನಂದರು ಇದ್ದರು. ಅವರು ಮಠಾಧಿಪತಿಗಳಾಗಿದ್ದು ದಲ್ಲದೆ ಬೇರೆ ಮಠಗಳನ್ನೂ ಸ್ಥಾಪಿಸಿದ್ದಾರೆಂಬುದು ಸ್ಪಷ್ಟ. ಆದರೆ ಅವರ ರಚನೆಗಳ ಭಾಷೆ ? ಅದು ೧೫-೧೬ನೆಯ ಶತಮಾನದ ಕನ್ನಡವೆಂಬುದು ಸತ್ಯ. ಉದಾಹರಣೆಗೆ ಅಚಲಾನಂದವಿಠಲ ಅಂಕಿತದಲ್ಲಿರುವ ಸುಳಾದಿಯ ಒಂದು ನುಡಿಯನ್ನು ನೋಡಬಹುದು :

ಮನ್ನವಚನಕಾಯದಿಂದ ಅನ್ಯವನರಿಯದ
ಹನುಮಂತನವೊಲು ನಿನ್ನ ದಾಸನೆಂದೆನಿಸಯ್ಯ
ಎನ್ನಂದದ ಕೃಪಣಂಗೆ ಕೃಪಾಕರ ನಿನ್ನ ದಾಸನೆಂದೆನಿಸಯ್ಯ
ಉನ್ನಂತ ಭಕುತಿಯನಿತ್ತೆನಗನುದಿನ
ನಿನ್ನವನೆನಿಸಚಲಾನಂದ ವಿಠಲ ೫

* ಶ್ರೀಪಾದರಾಜರ ಕೃತಿಗಳು, ಪೀಠಿಕೆ, ಪು. V

ಈ ಸಂದಿಗ್ಧದಲ್ಲಿ ಸಿಲುಕಿದ ಡಾ. ವರದರಾಜರಾಯರು "ಭಾಷಾ ಸ್ವರೂಪವನ್ನು ಕಡೆಗಣಿಸಿ ಅಚಲಾನಂದವಿಠಲಾಂಕಿತವಾದ ರಚನೆಗಳನ್ನು ಕ್ರಿ. ಶ. ೯ನೆಯ ಶತಮಾನಕ್ಕೆ ಸೇರಿದ ಅಚಲಾನಂದಸ್ವಾಮಿಗಳು ಬರೆದರೆನ್ನುವುದಾಗಲಿ ಅಥವಾ ಆ ಕೃತಿಗಳ ಸಲುವಾಗಿಯೇ ಅವರನ್ನು ಇತ್ತೀಚಿನ ಕಾಲಕ್ಕೆ ಸರಿಸುವುದಾಗಲಿ ಸರಿಯೆನ್ನಿಸುವುದಿಲ್ಲ. ಆದುದರಿಂದ ಬೇರೆ ಬೇರೆ ಕಾಲಕ್ಕೆ ಸೇರಿದ ಇಬ್ಬರು ಅಚಲಾನಂದರು ಇದ್ದಿರಬೇಕು ಎನ್ನುವುದು ಸೂಕ್ತವಾದುದು" ಎಂದಿದ್ದಾರೆ [1]. ಅವರ ಊಹೆಗೆ ಪೂರಕವಾಗಿ ಶ್ರೀರಂಗಪಟ್ಟಣದ ಬಳಿಯಿರುವ ತೊಣ್ಣೂರು ದೇವಾಲಯದ ತಾಮ್ರಶಾಸನವನ್ನು ಹೆಸರಿಸಬಹುದು:

೧೫ ಹಲಗೆಗಳಲ್ಲಿ ಲಿಖಿತವಾಗಿರುವ ಶಾಸನವಿದು. ಮೈಸೂರಿನ ದೊರೆ ಮೊದಲನೇ ಕೃಷ್ಣರಾಜನು ತೊಂಡೂರು-ಅತ್ತಿಕುಪ್ಪೆ ಹಳ್ಳಿಗಳನ್ನು ಅಗ್ರಹಾರವನ್ನಾಗಿ ಪರಿವರ್ತಿಸಿ, ಆ ಅಗ್ರಹಾರಗಳನ್ನು ೧೧೨ ವೃತ್ತಿಗಳಾಗಿ ವಿಭಜಿಸಿ, ಹೊರನಾಡುಗಳಿಂದ ಆಹ್ವಾನಿತರಾಗಿ ಬಂದ ಬ್ರಾಹ್ಮಣರಿಗೆ ಅಲ್ಲಿಯೇ ನೆಲೆಸಲೆಂದು ಹಂಚಿ ಕೊಟ್ಟ ವಿಚಾರ ಅದರಲ್ಲಿದೆ :

" ............ **ಅಚಲಾನನ್ದ ದಾಸಾಖ್ಯ**
ವಿಷ್ಣುಭಕ್ತಕುಲೋದ್ಭವಃ ಆಶ್ವಲಾಯನ ವಾಸಿಷ್ಠ
ಋಕ್ಶಾಖ್ಯಪ್ಪಣ ಪುತ್ರಜಃ । ವೃತ್ತಿಂ
ನೃಸಿಂಹಜೋತ್ರೈಕಾಂ ಹರಿದಾಸಸ್ಸಮಶ್ನುತೇ [2]

ವೃತ್ತಿಗಳನ್ನು ಪಡೆದ ೧೧೨ ಜನರಲ್ಲಿ ವೈಷ್ಣವ ಮನೆತನದಲ್ಲಿ ಹುಟ್ಟಿದ, ನೃಸಿಂಹನ ಮಗನೂ, ಅಪ್ಪಣ್ಣನ ಮೊಮ್ಮಗನೂ ಆದ, ವಾಸಿಷ್ಠ ಗೋತ್ರ ಆಶ್ವಲಾಯನ ಸೂತ್ರ ಋಕ್ ಶಾಖಾಧ್ಯಾಯಿ ಅಚಲಾನಂದದಾಸನೂ ಒಬ್ಬನು.

---

1. ಶ್ರೀಪಾದರಾಜರ ಕೃತಿಗಳು, ಪೀಠಿಕೆ, ಪು. vii
2. ಎಪಿಗ್ರಾಫಿಯ ಕರ್ನಾಟಿಕಾ, Vol. VI, P. ೧೮೨, ೯೯ ( II ಶ್ರೀರಂಗಪಟ್ಟಣ ೬೪), ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು (ಈ ಶಾಸನದ ಕಡೆ ನನ್ನ ಗಮನ ಸೆಳೆದ ಶ್ರೀ ಜಿ. ಜಿ. ಮಂಜುನಾಥ್‌ರವರಿಗೆ ವಂದನೆಗಳು.)

ಈ ಶಾಸನದ ಕಾಲ ಕ್ರಿ. ಶ. ೧೭೨೨ ಡಿಸೆಂಬರ್ ೧೧. ಆ ಹೊತ್ತಿಗಾಗಲೇ ಕರ್ನಾಟಕದಲ್ಲಿ ಹರಿದಾಸ ಪರಂಪರೆ ವಿಪುಲವಾಗಿ ಭಕ್ತಿಸಾಹಿತ್ಯಕೃಷಿಯನ್ನು ನಡೆಸಿತ್ತು. ಹರಿ ದಾಸರು ಶ್ರೀರಂಗಪಟ್ಟಣದ ರಂಗನಾಥನನ್ನು ಹಾಡಿ ಹೊಗಳಿದ್ದರು.

ಇದರೊಂದಿಗೆ ಹಾಸನ ಜಿಲ್ಲೆ ಆಲೂರು ತಾಲ್ಲೂಕಿನ ನಲ್ಲೂರು ಶಾಸನ * ವನ್ನೂ ಹೆಸರಿಸಬಹುದು. ಈ ಶಾಸನದ ಕಾಲ ೧೫-೧೬ನೇ ಶತಮಾನ. ನಲ್ಲೂರಿನ ಒಂದು ಬಯಲಿನಲ್ಲಿ ಹೂತಿರುವ ಕಲ್ಲಿನ ಮೇಲೆ 'ಶ್ರೀ ಅಚಲಾನಂದ ವಿಠಲ' ಎಂಬ ಬರೆಹವಿದೆ.

ಈ ದಾಖಲೆಗಳನ್ನು ಗಮನಿಸಿದಾಗ ಇಬ್ಬರು ಅಚಲಾನಂದರಿದ್ದುದು ಸ್ಪಷ್ಟ. ಒಬ್ಬರು ಕ್ರಿ. ಶ. ೯ನೇ ಶತಮಾನದಲ್ಲಿದ್ದು, ಸ್ವತಃ ಮಠಾಧಿಪತಿಗಳಾಗಿದ್ದುದಲ್ಲದೆ, ಪಾಂಡುರಂಗೆ, ಕಳಸ, ವಿದ್ಯಾನಗರ, ಪೆನುಗೊಂಡೆ, ರಾಮೇಶ್ವರ, ಕಾಶಿ, ಕೆಳದಿ, ಬಿದಲೂರುಗಳಲ್ಲಿ ಒಂದೊಂದು ಮಠ (ಒಟ್ಟು ೭) ವನ್ನು ಸ್ಥಾಪಿಸಿದ ಅಚಲಾನಂದ ಸ್ವಾಮಿಗಳು. ಇನ್ನೊಬ್ಬರು ಮೈಸೂರಿನ ದೊರೆ ಮೊದಲನೆ ಕೃಷ್ಣರಾಜರಿಂದ ವೃತ್ತಿಯನ್ನು ಪಡೆದ 'ಅಚಲಾನಂದದಾಸರು'. ಇವರು ಶ್ರೀಪಾದರಾಜರು, ವ್ಯಾಸರಾಯರು ಮತ್ತು ಪುರಂದರದಾಸರು - ಈ ಮೂವರನ್ನೂ ಸ್ತುತಿಸಿರುವರು. (ನೋಡಿ. ಉಗಾಭೋಗ. ೨೮) ಈಗ ದೊರೆತಿರುವ ಅಚಲಾನಂದವಿಠಲಾಂಕಿತ ಕೃತಿಗಳು ಈ ಎರಡನೇ ಅಚಲಾನಂದರಿಂದ ರಚಿತವಾದವುಗಳಾಗಿರಬೇಕು.

**ಡಾ. ಟಿ. ಎನ್. ನಾಗರತ್ನ**

---

* ಎಪಿಗ್ರಾಫಿಯಾ ಕರ್ನಾಟಕಾ Vol. VIII P. 456-58

## ಕೀರ್ತನೆಗಳ ಕ್ರಮಸೂಚಿ

**ಕೀರ್ತನೆಗಳು**



**ಸುಳಾದಿಗಳು**

## ಉಗಾಭೋಗಗಳು

### ೧*

ಅಂಗುಟದಲ್ಲಿ ಹೆಣ್ಣು ಪೆತ್ತವರುಂಟೇ
ಪೊಕ್ಕುಳದಲ್ಲಿ ಗಂಡು ಪೆತ್ತವರುಂಟೇ
ಮಿಕ್ಕಾದ ದೇವರಿಗೆ ಇನಿತು ಸೊಬಗುವುಂಟೇ
ಅಚಲಾನಂದವಿಠಲರೇಯಾ

### ೨

ಅಂಬರದಳವು ರವಿಶಶಿಗಲ್ಲದೆ ತಳದಲ್ಲಾಡೊ ಪಕ್ಷಿ ಬಲ್ಲದೆ
ಜಲದ ಪ್ರಮಾಣವ ತಾವರೆಗಲ್ಲದೆ ದಡದ
ಮೇಲಣ ಗಿಡವು ತಾ ಬಲ್ಲದೆ
ಪುಷ್ಪದ ಪರಿಮಳ ಮಧುಕರಗಲ್ಲದೆ
ಹಾರುವ ನೊಣವು ತಾ ಬಲ್ಲದೆ
ಮಾವಿನ ಹಣ್ಣು ಅರಗಿಳಿಗಲ್ಲದೆ ಚೀರುವ ಕಾಗೆ ತಾ ಬಲ್ಲದೆ
ಊಟದ ಸವಿರುಚಿ ನಾಲಿಗೆಗಲ್ಲದೆ ಕಲಸುವ ಕೈ ತಾ ಬಲ್ಲದೆ
ಸುರತಸುಖಗಳು ಯವ್ವನರಿಗಲ್ಲದೆ
ಬಾಲಕಜನರು ತಾವು ಬಲ್ಲರೆ
ದೇವ ನಿನ್ನ ಮಹಿಮೆಯ ಸಜ್ಜನರು
ಬಲ್ಲರಲ್ಲದೆ ದುರುಳರು ಅರಿಯೋರೆ
ಭಕುತರಿಗೆ ನೀನೆ ಗತಿಯೊ ಅಚಲಾನಂದವಿಠಲ

---

* ಈ ಉಗಾಭೋಗ ಪುರಂದರದಾಸರ ಅಂಕಿತದಲ್ಲೂ ಇದೆ.

೩

ಇದಕ್ಯಾರಂಜುವರೋ ಗೋಪಾಲ
ಇದಕ್ಯಾರಂಜುವರೋ
ನಾಳೆಗೆ ಬಾಹೋ ಪಿಡುಗು ನಮಗೆ
ಇವತ್ತೆ ಬರಲಿ
ಇವತ್ತೆ ಬರುವ ಪಿಡುಗು ನಮಗೆ
ಈಗಲೇ ಬರಲಿ
ಈಗಲೇ ಬರುವ ಪಿಡುಗು ನಮ
ಗೀಕ್ಷಣಕ್ಕೆ ಬರಲಿ
ನಮಗ್ಯಾತರ ಭಯವೋ ನೀನಿರಲು
ಅಚಲಾನಂದವಿಠಲ

೪

ಉದರ ಮಲವನ್ನು ತಾನರಿಯದೆ
ಮರಳಿ ಮರಳಿ ಸರೋವರದಿ ಮುಳುಗುವುದಕ್ಕಿಂತ
ಉದಯಾಸ್ತಮಯವಾಗಿ ನೀರೊಳಗಿದ್ದು
ಮುದಿಕಪ್ಪೆಗಳು ಮಾಡಿದ ತಂತ್ರಗಳೇನಯ್ಯ ಅಚಲಾನಂದವಿಠಲ

೫

ಒಡೆಯನುಳ್ಳ ತೊತ್ತಿಗ್ಯಾತರ ಚಿಂತೆ ಎ-
ನ್ನೊಡೆಯ ದ್ವಾರಕಾವಾಸಿಯ ಛತ್ರವಿರೆ
ಇಂದಿಗೆಂಬ ಚಿಂತೆ ನಾಳೆಗೆಂಬ ಚಿಂತೆ
ನಾಡಿದ್ದಿಗೆಂಬುವ ಚಿಂತೆ ತೊತ್ತಿಗ್ಯಾತಕಯ್ಯ
ಕೇಳಯ್ಯ ಅಚಲಾನಂದವಿಠಲ

೬

ಒಬ್ಬರನೊಬ್ಬರು ಮರೆ ಹೊಗುವರೆ ದೇವ
ಮರೆಹೊಕ್ಕರೆ ಕಾವುದಲ್ಲದೆ
ಅಲ್ಲಿ ಗುಣಾವಗುಣವನ್ನು ದುರಾಚಾರವನು
ಮರೆಹೊಕ್ಕವರಲರಸುವರುಂಟೆ
ದುಷ್ಟಭೀತನಾಗಿ ದುರಾಚಾರಿಯಾಗಿ
ಮರೆಹೊಕ್ಕೆ ಕಾವುದಚಲಾನಂದ ವಿಠಲ

೭

ಕಣ್ಣಲ್ಲಿ ನೀರಿಲ್ಲ ಮನದೊಳಕ್ಕರವಿಲ್ಲ
ಅತ್ತೆ ಸತ್ತರೆ ಸೊಸೆ ಅಳುವಳಂತೆ
ಅತ್ತೆ ಅತ್ತೆ ಅತ್ತೆಂದತ್ತೆ ಅತ್ತೆ ಸತ್ತರೆ
ಎನಗೆ – ಹುಚ್ಚು ಹೋಯಿತು
ಅತ್ತೆ ಸತ್ತರೆ ಎನಗೆ ಬುದ್ಧಿಯಾಯಿತು
ಅತ್ತೆ ಅತ್ತೆ ರಾಮಕೃಷ್ಣರ ಭಕ್ತಿಯಿಲ್ಲದವಗೆ
ಇದೇ ಪಾಡು ಕೇಳಯ್ಯ ದೇವ ಅಚಲಾನಂದವಿಠಲ

೮

ಕುಂಬಳ ಕಾಯಿಗೆ ಕಬ್ಬಿಣದ ಕಟ್ಟನು ಹಾಕಿದರೆ
ಅಳಿವಲ್ಲದೆ ಮತ್ತೆ ಉಳಿಯಬಲ್ಲದೆ ದೇವ
ಅಳಿಮನದವರಿಗೆ ದೀಕ್ಷೆಯಿತ್ತರೆ, ದೀಕ್ಷೆ ದೀಕ್ಷೆಯಂತೆ
ತಾನು ತನ್ನಂತೆ ಕೇಳಯ್ಯ ದೇವ ಅಚಲಾನಂದವಿಠಲ

೯

ಕೃಷ್ಣಾಂಜನವಾದರೆ ಜ್ಞಾನಸಿದ್ಧಿ
ವ್ಯಾಘ್ರಾಂಜನ ಮೋಕ್ಷವಯ್ಯ

ನಿಷ್ಠೆಯಿಂದಲಿ ಕಂಬಳಾಸನದಿ ಬಾಹ
ಧರಣಿಯಲ್ಲಿ ದುಃಖ ಅಷ್ಟೈಶ್ವರ್ಯ ನೀಗುವುದು
ದೂರ್ವಾ ಕಷ್ಟ ರೋಗ ಪಾಷಾಣದಲ್ಲಿ
ಇರದಾಪಥಿಯ ಅಚಲಾನಂದವಿಠಲ

೧೦

ಕೆಟ್ಟೆನೆಂದೆನಲ್ಯಾಕೊ ಕ್ಲೇಶವ ಪಡಲ್ಯಾಕೊ
ಹೊಟ್ಟೆಗೋಸುಗ ಪರರ ಕಷ್ಟಪಡಿಸಲ್ಯಾಕೊ
ಕೊಟ್ಟರುಣಲುಂಟು ಕೊಡದಿದ್ದರೇನುಂಟು
ಸೃಷ್ಟಿ ಮಾಡಿದ ದೇವರು ಹುಲ್ಲುಮೇಯಿಸುವನೆ
ಕೇಳಯ್ಯ ದೇವ ಅಚಲಾನಂದವಿಠಲ

೧೧

ಕೊಡಲಿ ಬೇಕು ಪಾಪದ ಬೇರ ಕಡಿವಡೆ
ಕೊಡಲಿ ಬೇಕು ಪುಣ್ಯವ ಕಟ್ಟಿಕೊಂಬರೆ
ಕೊಡಲಿ ಬೇಕು ಗುರುಹಿರಿಯರ ಕೈಯಲಿ
ಕೊಡಲಿ ಬೇಕು ಸತ್ಪಾತ್ರಂಗಳೆಡೆಯಲಿ
ಕೊಡಲಿಲ್ಲದವನಿಗೆ ನೀ
ಕೊಡಲಿಲ್ಲ ಎನ್ನೊಡೆಯ ಕೇಳೋ ಅಚಲಾನಂದವಿಠಲ

೧೨

ಚಂದ್ರಕಾಂತದ ಕರಡಿಗೆಯೊಳಗೆ ಇಂದ್ರನೀಲದಿಂದೆಸೆವ
ಕುಂದಕುಟ್ಮಲ ಪ್ರಜ್ವಲಿತ ಇಂದೀವರಾಸ್ಯ ಕೋಮಲಾಂಗ
ಚಂದದಿಂದೆನ್ನ ಮನದಿಂದಗಲದಿರು ಹರಿ ನಿನ್ನ ಸಿರಿಚರಣವಿರಲಿ
ಅಚಲಾನಂದವಿಠಲ ಬೇಲೂರ ಚೆನ್ನಿಗರಾಯ

## ೧೩

ತಂದೇ ತಂದೇ ತಂದೆನ್ನತಂದೆ ನಾ ಬಂದೆ
ಒಂದಲ್ಲ ಎರಡಲ್ಲ ಮೂರಲ್ಲ ನಾಲ್ಕಲ್ಲ
ಲಕ್ಷ ಎಂಬತ್ತುನಾಲ್ಕು ಜೀವರಾಶಿಗಳಲ್ಲಿ
ಎಲ್ಲೆದೋರದು ತಂದೆ
ಹಿಂದಿನ ಜನ್ಮವು ಹ್ಯಾಗಾದರಾಗಲಿ
ಮುಂದೆನ್ನ ಕರುಣಿಸೊ
ತಂದೆ ಅಚಲಾನಂದವಿಠಲ

## ೧೪

ತಾ ಮಾಡಿದ ಪಾಪ ತನಗಲ್ಲದಿರ್ದಡೆ
ವಿಧಿಯನ್ನ ಬೈದರೆ
ವಿಧಿ ತಾ ಎಲ್ಲಿಂದ ಕದ್ದು ತಾಹೋದಯ್ಯ
ಕೇಳಯ್ಯ ಅಚಲಾನಂದವಿಠಲ

## ೧೫*

ದೇವ ತಪ್ಪಿಲ್ಲದೆ ಅವಗುಣವಿಲ್ಲದೆ
ಒಬ್ಬರೊಬ್ಬರ ಮರೆಹೊಗುವರೆ
ಮರೆಹೊಕ್ಕರೆ ಕಾವರಿಲ್ಲದೆ ಅಲ್ಲಿ
ಕುಲಾಚಾರ್ಯನಾಗಿ ದುಃಖ ಭೀತನಾಗಿ
ಮರೆಹೊಕ್ಕೆ ಕಾಯೊ ಅಚಲಾನಂದವಿಠಲ

## ೧೬

ನಾನು ನಾನು ನಾನು ನನ್ನದು ನನ್ನದು ಎಂದು
ತಂದು ತಂದು ತಂದು ವ್ಯರ್ಥವಾಯಿತು
ತೋರುವ ಹರಿಗೋಲು ವೈಕುಂಠಕೆರಗಿತ್ತದರಲ್ಲಿ

---

* ಇದು ಉಗಾಭೋಗ ೬ರ ಪಾಠಾಂತರದಂತಿದೆ.

ನಾನೇನ ಕಂಡುದಿಲ್ಲ
ಆನಂದಮೂರುತಿ ಅಚಲಾನಂದವಿಠಲನ
ಪಾದತೀರ್ಥದಿ ಮುಳುಗದನ್ನಕ

## ೧೭

ನಿಂದಿರೆ ನೆರಳಿಲ್ಲ ಹಿಡಿವರೆ ಕೊಂಬಿಲ್ಲ
ಮುಂದೆ ಬಾವಿ ಹಿಂದೆ ಕಿಚ್ಚು ಬೆನ್ನಟ್ಟುತಿದೆ
ಬಂದಿದೆ ವಿಪತ್ತು ಎನ್ನ ಕಾವರ ಕಾಣೆ
ಅಂಧಕನಾಗಿ ಉರ್ವಿಯೊಳು ಸಿಲುಕಿದೆ
ತಂದೆ ಸಲಹೋ ಅಚಲಾನಂದವಿಠಲ

## ೧೮

ನಿನ್ನ ಡಿಂಗರಿಗನೆಂದುರದಲುಂಡಿಗೆಯೊತ್ತಿ
ಇನ್ನು ಸಲಹದಿರ್ದಡಾರು ಮೆಚ್ಚುವರಯ್ಯ
ನಿನ್ನಗೆ ಎನಗೆ ಆಚಾರವಿಚಾರ
ನಿನ್ನ ಸೆರಗ ಬಿಡೆ ಆರಿಗಾದರು ಹೇಳು
ಎನ್ನೊಡೆಯನೆ ಅಚಲಾನಂದವಿಠಲ
ಎನ್ನ ಸಲಹದಿರ್ದಡೆ ನಿನಗೆ ಭಕುತರಾಣೆ

## ೧೯*

ಪಾಡಿದರೆನ್ನೊಡೆಯನ ಪಾಡುವೆನು
ಬೇಡಿದರೆನ್ನೊಡೆಯನ ಬೇಡುವೆನು ಎ-
ನ್ನೊಡಲನು ಒಡೆಯಗೆ ತೋರುವೆನು
ಬಡತನವನು ನಾ ಬಿನ್ನಹ ಮಾಡುವೆ
ಪಾಡಿದರೆನ್ನೊಡೆಯನ ಪಾಡುವೆನು ಎ-

ನ್ನೊಡೆಯ ಅಚಲಾನಂದವಿಠಲ ನಿನ್ನ ಚರಣ
ದೆಡೆಯ ಸಾರಿ ಬದುಕುವೆನನುದಿನ

## ೨೦*

ಪಾತಕರೊಳಗೆಲ್ಲ ನಾನೆ ವೆಗ್ಗಳನಯ್ಯ
ಪ್ರಾಯಶ್ಚಿತ್ತಕ್ಕೆ ನಿನ್ನ ನಾಮವೇ ಘನವಯ್ಯ
ಪಾತಕವನು ನಾನು ಮಾಡಿದ್ದು ಏನು
ಪಾತಕ ಪಾವನ ಎರಡು ನಿನ್ನಾಧೀನ
ಪಾತಕಿ ನಾನಲ್ಲ ಪ್ರಾಯಶ್ಚಿತ್ತವೆನಗಿಲ್ಲ
ಕೇಳಯ್ಯ ದೇವ ಅಚಲಾನಂದವಿಠಲ

## ೨೧

ಫಣಿಯಂ ಮೆಟ್ಟಿ ತುಳಿದನೆಂತೆಂಬರೊ
ಫಣಿಯೆಂತು ತಾಳಿತೊ ದೇವ ನಿಮ್ಮ
ಫಣಿಯು ಬ್ಯಾರಿಲ್ಲ ನೀನೆ ಫಣಿಯು (?)
ಪ್ರಣವಮೂರುತಿ ಅಚಲಾನಂದವಿಠಲ

## ೨೨

ಬೆಟ್ಟದಂಥ ದುರಿತವು ಸುತ್ತು ಮುತ್ತು ಕವಿದಾಗ
ಕೃಷ್ಣನಾಮಕಿಡಿ ಬಿದ್ದು ದುರಿತ ಬೆಂದುದ ಕಂಡೆ
ಎಲೆ ಎಲೆ ದುರಿತವೆ ತಿರುಗಿ ನೋಡದೆ ಪೋಗು
ಜನನ ಮೃತ್ಯುವಿನ ದೂತರಿಗೆ ಗಂಟಲಗಾಣ
ದಾತರದಾತ ಅಚಲಾನಂದವಿಠಲ
ಎನ್ನೊಡೆಯ ಕಂಡರೆ ನಿನ್ನ ಶಿರವ ಚೆಂಡಾಡುವ

---

* ಈ ಉಗಾಭೋಗಗಳು ಪುರಂದರವಿಠಲ ಅಂಕಿತದಲ್ಲೂ ಇವೆ

## ೨೩*

ಬೆಲ್ಲದ ಕಟ್ಟೆಯ ಕಟ್ಟಿ ಬೇವಿನ ಬೀಜ ಬಿತ್ತಿ
ಜೇನು ಮಳೆಗರೆದರೆ ವಿಷ ಹೋಗಬಲ್ಲದೆ
ಅಲ್ಲದ ಮನುಜಂಗೆ ಅಸಮ ತತ್ವಂಗಳು
ಹಲವು ಪೇಳಿದರೇನು ಕೆಲವು ಕೇಳಿದರೇನು
ಕೊಳಲ ದನಿಗೆ ಸರ್ಪ ತಲೆದೂಗುವಂತೆ
ಎನ್ನೊಡೆಯ ಕೇಳು ಅಚಲಾನಂದವಿಠಲರೇಯ

## ೨೪

ಮನ ವಚನ ಕಾಯದಿಂದ ಅನ್ಯವನರಿಯದ
ಹನುಮಂತನವೊಲು ನಿನ್ನ ದಾಸನೆಂದೆನಿಸಯ್ಯ
ಎನ್ನಂದದ ಕೃಪಣಂಗೆ ಕೃಪಾಕರ ನಿನ್ನ ದಾಸನೆಂದೆನಿಸಯ್ಯ
ಉನ್ನಂತ ಭಕುತಿಯನಿತ್ತೆನ್ನನನುದಿನ
ನಿನ್ನವನೆನಿಸಚಲಾನಂದ ವಿಠಲ

## ೨೫

ಮರವಿದ್ದರೆ ಫಲವೇನು ನೆರಳಿಲ್ಲದನಕ
ವರತಿ ಇದ್ದರೆ ಫಲವೇನು ನೀರಿಲ್ಲದನಕ
ಧನವಿದ್ದರೆ ಫಲವೇನು ಮನವಿಲ್ಲದನಕ
ಏನಿದ್ದರೆ ಫಲವೇನು ಜ್ಞಾನವಿಲ್ಲದನಕ

**

ಕೋಳಿಗೆ ಹೊನ್ನ ಪಂಜರವಿನ್ಯಾಕೊ
ಬೋಳಿಗೆ ಇನ್ಯಾತಕೊ ಜಾಜಿ ಮಲ್ಲಿಗೆ ದಂಡೆ
ಆಳಿಲ್ಲದವನ ಅರಸುತನವ್ಯಾಕೆ
ಮಾಳಿಗೆ ಮನೆಯು ಡೊಂಬಗಿನ್ಯಾಕೊ
ಕೇಳೆಲೊ ಅಚಲಾನಂದವಿಠಲ ನಿನ್ನ
ಊಳಿಗವಿಲ್ಲದ ಬಾಳುವೆ ಇನ್ಯಾಕೆ

---

* ಈ ಉಗಾಭೋಗ ಪುರಂದರವಿಠಲ ಅಂಕಿತದಲ್ಲೂ ದೊರೆತಿದೆ.

* ಇಲ್ಲಿಂದ ಮುಂದಿನ ಭಾಗ ಪುರಂದರ ವಿಠಲ ಅಂಕಿತದಲ್ಲೂ ಇದೆ.

## ೨೬

ಮುಗುಳುನಗೆಯ ನಗುತ ಈತನೇ ಜಗಕೆ
ಈತನೇ ಪರಗತಿಗೆ
ಈತನೇ ಸಕಲವೆಂಬುದು ಸನ್ಮಾರ್ಗ
ಅಜಾತ ನೀನೆಂದು ಸೋತು ಶರಣುಹೋಗುವ
ವಿಧಾತರ ಕಂಡು ಅಚಲಾನಂದವಿಠಲ ನಗುವ
ಈತನೇ ಜಗಕೆ ಈತನೇ ಪರಗತಿಗೆ

## ೨೭

ಮುನಿಗಳು ಮನದಲ್ಲಿ ನುತಿಸಲರಿಯದ
ಮಹಾಮಹಿಮ ನಿನ್ನ
ಉಪನಿಷತ್ತುಗಳು ತುತಿಸಲರಿಯದ
ಮಹಾಮಹಿಮ ನಿನ್ನ
ಸಕಲ ಕ್ರತುರಾಸಿಗಳು ತುತಿಸಲರಿಯದ
ಮಹಾ ಮಹಿಮ ನಿನ್ನ
ಎತ್ತಿಕೊಂಡು ಜೋಗುಳ್ಹಾಡುವ
ಮೊಲೆಯೂಡುವ ಮೊಗನೋಡುವ
ಗೋಪಿದೇವಿ ಪುಣ್ಯವೆಂಥಾದ್ದೊ ಅಚಲಾನಂದವಿಠಲ

## ೨೮

ವರ ಧ್ರುವನವತಾರವೆ ಶ್ರೀಪಾದರಾಯರು
ರಂಗವಿಠಲನೌಪಾಸಕರು
ತರಳ ಪ್ರಹ್ಲಾದನವತಾರವೆ ವ್ಯಾಸರಾಯರು
ಶ್ರೀಕೃಷ್ಣನೌಪಾಸಕರು
ನಾರದರವತಾರವೆ ಪುರಂದರದಾಸರು
ವಿಠಲನೌಪಾಸಕರು
ಇವರು ಮೂವರು ನರರೆಂದು ತಿಳಿವರೆ
ನರಕವಾಸಿಗರಯ್ಯ ಅಚಲಾನಂದವಿಠಲ

## ೨೯

ವಿಷಯವುಳ್ಳವನಿಗೆ ವಿವೇಕವಿಲ್ಲ
ಹಸಿವೆ ಅರಿತು ಉಂಬನಿಗೆ ರೋಗವಿಲ್ಲ
ಲೋಭಿಗೆ ತನ್ನವರೆಂಬೋರಿಲ್ಲ
ಚ್ಯುತ ಶೀಲಗುಣಗೆ ಸತ್ಯವಿಲ್ಲ
ಕೇಳಯ್ಯ ದೇವ ಅಚಲಾನಂದವಿಠಲ
ನಿನ್ನ ನೆನೆಯದವ ಪಾಮರನಯ್ಯ

## ೩೦

ಶಿಲೆಯ ಕುಸುಮದಲ್ಲಿ ಪರಿಮಳವುಂಟೆ
ಬೆಲೆವೆಣ್ಣಿನೊಲುಮೆಗೆ ನೆಲೆಯುಂಟೆ ಎಲೆದೇವ
ಎಲವದ ಮರನಲ್ಲಿ ತನಿವಣ್ಣ ಮೆಲಲುಂಟೆ
ಹಲವು ದೈವವ ನಂಬಿ ಫಲವುಂಟೆ ಎಲೊ ದೇವ
ಹಲವು ಮಾತ್ಯಾಕೆ ಅಚಲಾನಂದವಿಠಲನನೊಲಿದು
ಪೂಜಿಸದಂಗೆ ಮುಕುತ್ಯುಂಟೆ ಎಲೆದೇವ

## ೩೧

ಸಿರಿ ನಿನಗುಂಟೆಂದು ಗರ್ವಿಸಲಿ ಬೇಡ
ಸಿರಿ ಎನಗಿಲ್ಲೆಂದು (ಜರಿದು) ಮುನಿದು ನೋಡಲಿಬೇಡ
ಹರಿಯೆ ನಿನ್ನಂಥ ಒಡೆಯರು ಎನಗುಂಟು
ಅರುಹೊ ನಿನ್ನೊಡೆಯರ ಅಚಲಾನಂದವಿಠಲ

## ೩೨*

ಸುಖವಾದರೆ ತನ್ನಿಂದಾಯಿತು ಎಂಬೋದು
ದುಃಖವಾದರೆ ದೈವ ಮಾಡಿತು ಎಂಬೋದು
ದುಃಖಕೆ ತಾನ್ಯಾರೊ ಸುಖಕೆ ತಾನ್ಯಾರೊ

---

* ಈ ಉಗಾಭೋಗ ಪುರಂದರವಿಠಲ ಅಂಕಿತದಲ್ಲೂ ಇದೆ.

ಸುಖದುಃಖವೆರಡು ಶ್ರೀಹರಿಯ ಅಧೀನವೆಂದು
ಸುಖಿಯಾಗಿಹನೆ ನೆರೆ ಜಾಣ
ರುಕುಮಿಣಿಪತಿ ಅಚಲಾನಂದವಿಠಲ

### ೩೩

ಹಗಲು ನಿನ್ನ ನೆನೆಯಲಿಲ್ಲ ಹಸುವಿಗಳಿಂದ
ಇರುಳು ನಿನ್ನ ನೆನೆಯಲಿಲ್ಲ ವಿಷಯಗಳಿಂದ
ವ್ಯಯವಾಗಿ ಹೋಯಿತಲ್ಲ ನಿನ್ನ ನೆನೆಯಲಿಲ್ಲ
ಸಂಸಾರದೊಳು ಸುಖವಿಲ್ಲ ಕೇಳಯ್ಯ
ದೇವ ಅಚಲಾನಂದವಿಠಲ

### ೩೪

ಹರಿ ಗೋವಿಂದನೆಂದೇಳು ಹತ್ತಾವತಾರ ಪೇಳು
ಗೆರೆ ಕರದೊಳರ್ಥ ನೋಡುತ ತುಲಶಿ ಗೋಮಾಳಗಳಿಗೆರಗಿ
ನೈರುತ್ಯಕ್ಕೆ ಪೋಗಿ ತೃಣವನಿಟ್ಟು
ಗುರು ಪವಮಾನನೊಡೆಯ ಅಚಲಾನಂದವಿಠಲ
ಹರಿಯ ಚರಣಸೇವಕನಾಗಿ ಬಾಳಬೇಕು

## ಕೀರ್ತನೆಗಳು

### ೩೫*

ಅಪರಾಧಿ ನಾನಲ್ಲ ಅಪವಾದಯನಗಿಲ್ಲಾ ಪ.

ಕಪಟನಾಟಕ ಕೃಷ್ಣ ಯನಗೆ ನೀನಪರಾಧಿ ಅ.ಪ.

ನೀನು ಆಡಿಸಲು ಜೀವಗಳನುದಿನದ ಬೊಂಬೆ
ಆನೆ ಬಲ್ಲೆನೆ ಬ್ಯಾರೆ ಪಥವನೊಂದಾ
ನೀನಿಟ್ಟ ಸೂತ್ರದಂತಿರಲು ಕೈಕಾಲುಗಳು
ನೀನು ಮುಗ್ಗಿಸಲು ಮುಗ್ಗುವ ಜೀವ ನಾನಾದೆ ೧

* ಈ ಕೀರ್ತನೆ ಅಲ್ಪ ಸ್ವಲ್ಪ ಪಾಠ ವ್ಯತ್ಯಾಸದೊಡನೆ ಪುರಂದರ ವಿಠಲ ಅಂಕಿತದಲ್ಲೂ ಇದೆ.

ಒಂಬತ್ತು ಬಾಗಿಲುವುಳ್ಳ ಪಟ್ಟಣದೊಳಗೆ
ತುಂಬಿದಿಪ್ಪತ್ನಾಲ್ಕು ಮೊನೆಯಾಳ್ಗಳ
ನಂಬಿಸಿ ಕಾವಲು ನೀನು ಎನ್ನೊಳಗಿದ್ದು
ಕಂಬುದಾ (?) ಯೇರಿ ಕೊಲಿಸುವುದು ನಿನಗನ್ಯಾಯ ೨

ಅಂತರಾತ್ಮಕ ನೀನು ಒಳಗಿದ್ದಾ ಬರಿ
ತಂತ್ರಿಯೆಂದೆನ್ನ ಕೊಲ್ಲಿಸುವರೇನೊ ಹೇಳೋ
ಕಂತುವಿನ ಜನಕ ಲಕ್ಷ್ಮೀರಮಣ ಕಾಯಬೇ-
ಕೆಂತೆಂದೆನ್ನ ಅಚಲಾನಂದವಿಠಲ

## ೩೬

ಈಡುಗಾಣೆನಯ್ಯ ಜಗದೊಳಗೆ ಪ.

ಬೇಡಿದಭೀಷ್ಟಗಳ ಕೊಡುವ ಹನುಮ
ಭೀಮ ಮಧ್ವರಾಯ ಅ.ಪ.

ಅಷ್ಟದಿಕ್ಕಲಿ ಭೂಪರಾಳಿದ ದುಷ್ಟರಾವಣನ್ನ ಪುರವ
ದೃಷ್ಟಿಸಿ ನೋಡಿ ಸಮರದಲಿ ಪ್ರಹಾರವನೆ ಕೊಡಲು
ಕಷ್ಟದಿ ಮೂರ್ಛ್ಯಕೃತನಾಗಿಯೆದೆ ಹಿಟ್ಟಾಗಿಸನಂತಕಂದಿಸಿಯೆ
ಕಂಗೆಟ್ಟು ಹತ್ತು ದಿಸೆಗೆ ಓಡಿಸಿದ್ಯೊ
ದಿಟ್ಟನಾಗಿ ನಿರಂತರದಿ ಹನುಮಾ ೧

ನಾರದ ಅಯೋಧ್ಯದಿ ಪೇಳಲು ಶ್ರೀ ರಾವಣ ಸೈನ್ಯಗಳ ಓಡಿಸಿ
ವಾರಿಧಿಗಳ ದಾಟಿ ಬೇಗ ನೂರುತಲೆ ಅಸುರನ ಪಟ್ಟಣದ
ದ್ವಾರ ಬಂಧಿಸಿ ಸಕಲದ್ವೀಪದಲ್ಲಿದ್ದ ಕ್ರೂರ ಅಸುರನ್ನ ಕಾಲಲೊದ್ದು
ವರ ವಿಭೀಷಣ ಸುಗ್ರೀವರ ಪುಚ್ಛದಲಿ
ತರುಬಿದಿಯೊ ಸಮರ್ಥ ಹನುಮಾ ೨

ರುದ್ರ ಬ್ರಹ್ಮರ ವರದಲವಧ್ಯನಾದ ಜರಾಸಂಧನಾ
ಅಧ್ವರ್ಯದಲಿ ಪಶುವಂದದೀ ಮರ್ದಿಸಿ ದುಷ್ಟ
ಖಳರ ಸೀಳಿದ್ಯೊ
ಖೇದರಾದ ನೃಪರ ಬಿಡಿಸಿದೆ ಅಧ್ವರ್ಯನಾಗಿಯಾಗದಿ
ನಿಂದೆ ಯುದ್ಧದಲಿ
ದುರ್ಯೋಧನನ ಕೊಂದ ಪ್ರಸಿದ್ಧ ಭೀಮರಾಯ ನಿಮಗೆ ೩

ವಾದಿಗಜಕೆ ಮೃಗೇಂದ್ರ ವಾದಿವಾರುಧಿ ಬಡಿವ ಮಾಯಾ
ವಾದಿ ಪರ್ವತಕೆ ವಜ್ರ ಭೇದ ಮತಾಂಬುಧಿಗೆ ಚಂದ್ರ
ಮೋದತೀರ್ಥಾನಂದಗೆ ಕೃಷ್ಣಾ ಅಷ್ಟವಾಳುಕ ಮುಷ್ಟಿ ತಂದೆ
ಸಾಧುಜನರಿಗೆ ತತ್ವಬೋಧಿಸಿದೆ
ಮೇದಿನಿಯೊಳು ಮಧ್ವರಾಯ ನಿಮಗೆ ೪

ಇಂದುಮುಖಿ ಸೀತೆಗೆ ಮುದ್ರಿಕೆಯನಿತ್ತು
ವಂದಿಸಿ ರಾಮಕಥೆಯ ಪೇಳಿದೆ
ಅಂದು ರೋಮಕೋಟಿ ಶಿವರಮಾಡಿ ಪುರುಷಮೃಗವನೆ
ತಂದೆ ಚಂದದಿಂ ಮಣಿಮಂತನ ಕೊಂದು ಸೌಗಂಧಿಕವ
ತಂದೆ ನಂದತೀರ್ಥರಾದ ಅಚಲಾನಂದ ವಿಠಲನ ದಾಸ ನಿಮಗೆ ೫

## ೩೭

ಕೇಳು ಜೀವನವೆ ನೀ ಮಧ್ವಮತವನುಸರಿಸಿ
ಶ್ರೀಲೋಲನಂಘ್ರಿಯನು ನೆನೆದು ಸುಖಿಸೊ ಪ.

ನರನಾಗಿ ಪುಟ್ಟುವುದು ದುರ್ಲಭವೆಲವೊ ಭೂ-
ಸುರಕುಲದಿ ಜನಿಸುವುದು ಬಹು ದುರ್ಲಭ
ಪರಮ ಸುಕೃತವದೇನು ಫಲಿಸಿತೊ ನಿನಗೀಗ
ದೊರಕಿದೀ ಜನುಮವನು ಸಫಲ ಮಾಡೊ ೧

ಅರಘಳಿಗೆ ಮಾತ್ರವೆ ಪೊತ್ತು ಪೋಗಲು ಆಯು
ಕೊರತೆಂದು ತಿಳಿ ನಿನ್ನ ಕ್ಲುಪ್ತದೊಳಗೆ

ಮರಳುತನದಲಿ ಬರಿದೆ ದಿನಗಳಿಯಬ್ಯಾಡೆಲವೊ
ಸ್ಥಿರವಲ್ಲ ಈ ದೇಹ ಸ್ವಪ್ನಸಮವೊ ೨

ದುರುಳರೊಡನಾಡಿ ದುರ್ವಿಷಯ ಲಂಪಟನಾಗಿ
ನರಕಯಾತನೆಗೆ ಗುರಿಯಾಗದಿರೆಲೊ
ಎರಡುದಿನದೋಡ್ಯಾಟ ಇರಬಂದುದಲ್ಲವಿದು
ಪರಗತಿಗೆ ಸಾಧನ ಮಾಡಿಕೊಳ್ಳೊ ೩

ಹೋಗುತಿವೆ ಹೋಗುತಿವೆ ದಿವಸ ವ್ಯರ್ಥವಾಗಿ
ಹೀಗೆ ಮೈಮರೆದಿಹುದು ನಿನಗೊಳ್ಳಿತೆ
ಬ್ಯಾಗ ಹರಿಯನು ಭಜಿಸು ಬಾ ಈ ಮಾತಲ್ಲ ನೀ
ಹೋಗಿನೋಡಲು ಯಮನ ಬಾಧೆ ಬಿರುಸೊ ೪

ಏನ ಹೇಳಲಿ ನಿನ್ನ ಮಂದಮತಿಯನು ಹಿಂದೆ
ಶ್ವಾನಸೂಕರ ಮೊದಲಾದ ನೀಚ-
ಯೋನಿಗಳೊಳಗೆ ಬಂದು ಅಂದದನು ಕ್ರಮಿಸಿದವನು
ಆ ನೋವನಾಗಲೆ ಮರೆದಿಯಲ್ಲೊ ೫

ಮುನ್ನ ದುಷ್ಕರ್ಮವ ಮಾಡಿದ ಪ್ರಾಣಿಗಳು
ಉನ್ನತ ನೀಚ ದೇಹಗಳ ಧರಿಸಿ
ಬನ್ನಬಡುತಿಹುದು ನೀ ನೋಡಿ ನೋಡಿ ಮತ್ತೆ
ದುರ್ನಡತೆಯನು ಮಾಡಲುದ್ಯೋಗಿಪೆ ೬

ಎಂಬತ್ತು ನಾಲ್ಕು ಲಕ್ಷ ಯೋನಿಗಳೊಳಗೆ
ಕುಂಭಿಣಿಯೊಳಗೆ ತಿರುತಿರುಗಿ ಪಾಪ
ಉಂಬುದನುಚಿತವೆಂದು ಮನ ಹೇಸಿ ವಾಕರಿಸಿ
ನಂಬುನಾರಾಯಣನ ಇನ್ನಾದರೂ ೭

ಜನನಿಯ ಗರ್ಭವಾಸ ದುಃಖ ಅತಿಶಯವೊ
ಜನನ ಮರಣದ ದುಃಖ ಬಲು ಅಧಿಕವೊ

ಘನ ನರಕದಾ ದುಃಖ ಪೇಳಲೊಶವಲ್ಲ ನಿನ-
ಗಿನಿತಾದರೂ ನಾಚಿಕಿಲ್ಲವೇನೊ ೮

ಸಾರಿ ಪೇಳುವೆನೀಗ ಪುಟ್ಟಿ ಬೆಳೆದಳಿವ ಸಂ-
ಸಾರ ಸುಖವಲ್ಲ ಮಹ ದುಃಖಪುಂಜ
ಘೋರ ಸಂತಾಪಕ್ಕೆ ಕಡೆಮೊದಲಿಲ್ಲವೊ
ವಾರಿಜಾಂಬಕನ ಮರೆಯೊಕ್ಕು ಬದುಕೊ ೯

ಹಿಂದೆ ಬಹುಜನುಮದಲಿ ಬಂದು ಬಳಲಿದ ಬವಣೆ
ಒಂದೊಂದು ನೆನೆಸಿಕೊಳಲತಿ ಕಷ್ಟವೊ
ಮುಂದಾದರು ಸರಿ ಎಚ್ಚೆತ್ತು ಬಿಡದೆ ಗೋ-
ವಿಂದನ ಪದಾಂಬುಜವ ಧ್ಯಾನ ಮಾಡೊ ೧೦

ಮಾರಿ ಇಲ್ಲಿದೆಯೆಂದು ಕೇಳುತಲಿ ಪೋಗಿ ನೀ
ಭೂರಿ ಭಯಕೊಳಗಹದು ನೀತಿಯಲ್ಲ
ದೂರ ತಿಳಿದು ನೋಡಿ ದುರ್ಮಾರ್ಗವನು ಜರಿದು
ಸೇರಿ ಸಜ್ಜನರ ಸುಪಥವ ಪಡೆಯೊ ೧೧

ನಿನ್ನಯ ಸ್ವರೂಪಕ್ಕೆ ಹೀಗಾಗುವುದೆಂದು
ಪುಣ್ಯವನೆ ಗಳಿಸಿಕೊ ಬ್ಯಾಗ ನೀನು
ಇನ್ನು ಈ ಧರೆಯಲ್ಲಿ ಬಿಟ್ಟು ಹೋಗುವ ದೇಹ-
ವನ್ನು ಪೋಷಿಸಿಕೊಂಡು ಹಿಗ್ಗಬೇಡ ೧೨

ವನಿತೆಸುತರನು ಪೊರೆಯಬೇಕೆಂಬ ಬುದ್ಧಿಯಲಿ
ಧನದಾಸೆಯಿಂದಲಗಣಿತ ಪಾಪವ
ಕ್ಷಣದೊಳಗೆ ಸಂಪಾದಿಸಿಕೊಂಬೆ ಎಲೊ ಮೂಢ
ನಿನಗಿವರು ಕೊನೆಗೆ ಸಂಗಡ ಬರುವರೆ ೧೩

ಕೆಡಬ್ಯಾಡ ವ್ಯರ್ಥಮೋಹಕೆ ಸಿಲುಕಿ ಜವನವರು
ಪಿಡಿದೊಯ್ದು ಕಡಿದಿರಿದು ಕೊಲ್ಲುವಾಗ

ಬಿಡಿಸುವವರಾರಿಲ್ಲ ಈಗಳೆ ಮುಂದರಿತು
ಕಡಲಶಯನನ ಪೊಂದಿ ಮುಕುತಿ ಪಡೆಯೊ ೧೪

ಈಗಲೇನೊ ಇನ್ನು ಕ್ಷಣಕೇನು ಬಪ್ಪುದೊ
ನೀ ಗರುತರಿಯದಲೆ ಹಿತ
ರಾಗದಲಿ ಸರ್ವವನು ಎನ್ನದೆಂದಾಡದಿರು
ನಾಗಾರಿಗಮನನಾಧೀನವೆನ್ನೊ ೧೫

ನೀ ಮಗುಳೆ ಮಹಿಯೊಳಗೆ ಕಂಡುಕಂಡುದ ಬಯಸಿ
ಭ್ರಾಮಕರ ನುಡಿಗೇಳಿ ಭ್ರಾಂತಿಗೊಳದೆ
ಕಾಮಾದಿಗಳ ತ್ಯಜಿಸಿ ಸತ್ಕರ್ಮವನು ಮಾಡಿ
ಶ್ರೀಮನೋ ಹರನಿಗರ್ಪಣೆಯ ಮಾಡೊ ೧೬

ಏನುಧಾವತಿಗೊಳಲೇನೇನು ಫಲವಿಲ್ಲ
ಮಾನವಜನುಮ ಜೊಳ್ಳು ಮಾಡಬ್ಯಾಡ
ಆನಂದತೀರ್ಥರ ಪಾದಕಮಲವ ಪೊಂದಿ ಅಚ-
ಲಾನಂದವಿಠಲನ್ನ ನೀನೊಲಿಸಿಕೊ ೧೭

## ೩೮

ನಾನಾ ಯೋನಿಗಳೊಳು ಹೀನಜನ್ಮದಿ ಬಂದು
ನಾನು ತಿರುಗಲಾರೆನೊ ಗೋಪಾಲ ಪ.

ಶ್ರೀನಿವಾಸ ನಿನ್ನ ಸೇರಿದ ಬಳಿಕ
ಉದಾಸೀನ ಮಾಳ್ಪರೇನೋ ಗೋಪಾಲ ಅ.ಪ.

ತಂದೆಯ ಉದರದಿ ತ್ರೈಮಾಸವು ಶುಕ್ಲ
ಇಂದ್ರಿಯದೊಳಿದ್ದೆನೊ ಗೋಪಾಲ
ಅಂದಾಗ ಜನನಿಯ ಜಠರದಿ ಶೋಣಿತದಿಂದ
ಪಿಂಡವಾದೆನೊ ಗೋಪಾಲ
ಕುಂದದೆ ಮಾಸ ನಾಲ್ಕಯಿದಾಗಲ ವಯವಂಗಳಿಂದ
ಬೆಳೆವುತಿದ್ದೆನೊ ಗೋಪಾಲ ೧

ನರದ ಸಂಕೋಲೆ ಮಾಸುಚೀಲದ ಬಲೆಯೊಳು
ನರಳಿ ಕೋಟಲೆಗೊಂಡೆನೊ ಗೋಪಾಲ
ಪರಿಪರಿಯಲಿ ಇಂತು ಪಾಪ ಪುಣ್ಯಗಳೆಂತು
ಹಿರಿದು ಚಿಂತಿಸಿದೆನೊ ಗೋಪಾಲ
ನೆರೆ ಅಷ್ಟ ಮಾಸವು ಕ್ಷೀರ ಶೀತೋಷ್ಣದಿ ಕರೆ
ಕಷ್ಟಬಡುತಿದ್ದೆನೊ ಗೋಪಾಲ
ಇರುತಿರೆ ನವಮಾಸ ಘಳಿಗೆ ವಾಯು
ಸಂದ ಧರೆಗೆ ಪತನವಾದೆನೊ ಗೋಪಾಲ ೨

ಮಾಸು ಮಲವು ಸಹ ಮೊರದಿ ಮಲಗಿ ನೊಣದ
ಘಾಸಿಯೊಳೊರಲುವೆನೊ ಗೋಪಾಲ
ಹೇಸದೆ ಹಸಿದು ಬೆರಳು ಬಾಯೊಳಗಿಟ್ಟು
ಘಾಸಿಸಿ ದುಃಖಿಪೆನೊ ಗೋಪಾಲ
ಪುಟ್ಟಿಸಲು ಮಾತೆ ದುರ್ಬಲವೆನುತಲಿ
ಬ್ಯಾಸತ್ತು ಒರಲುವೆನೊ ಗೋಪಾಲ
ಈಸು ಬವಣೆಯಿಂದಾ ನರ್ಕದ ಒಳಗಿಂದ
ಶ್ವಾಸ ಎತ್ತಿದೆನೊ ಗೋಪಾಲ ೩

ಬಾಲತನದಿ ಬಹುವಿಧದಾಟವ ತೋರಿ
ಮೇಲನರಿಯದಿದ್ದೆನೊ ಗೋಪಾಲ
ಲೀಲೆಯೊಳು ತುರುವಿಂಡು ಮೃಗಪಕ್ಷಿ
ಮಾರ್ಜಾಲ ಘಾತಕನಾಗಿದ್ದೆನೊ ಗೋಪಾಲ
ಖೂಳತನದಿ ದುಷ್ಕೃತ್ಯವ ಮಾಡಲು
ಕೂಳಿಗೀಡಾಗಿದ್ದೆನೊ ಗೋಪಾಲ
ಹೇಳಬಾರದ ಪಾಪವ ಮಾಡಿ ನರಕದ
ಪಾಳೆಯಕೀಡಾದೆನೊ ಗೋಪಾಲ ೪

ಹೀಗಿರುತಿರೆ ಮುಂಜಿ ಮದುವೆ ನಾಳೆಲ್ಲವು
ಆಗಿ ಬಾಳುತಲಿದ್ದೆನೊ ಗೋಪಾಲ
ಸೋಗೆಗಣ್ಣಿನ ಸುದತಿಯರ ಕಂಡು ಜ್ಞಾನ
ನೀಗಿ ಬಾಳುತಿದ್ದೆನೊ ಗೋಪಾಲ

ರೋಗವಿಲ್ಲದೆ ನರಳುವನಂತೆ ಕಾಮನ
ಬಾಧೆಗೆ ಬೆಂಡಾದೆನೊ ಗೋಪಾಲ
ಆಗಲು ಪುತ್ರ ಬಾಂಧವರಿಗೋಸ್ಕರ ಭವ-
ಸಾಗರ ಎತ್ತಿದೆನೊ ಗೋಪಾಲ ೫

ಬಾಲ್ಯಯೌವನವಳಿದು ಜರೆ ಒದಗಿ ನಾನು
ಮೇಲೇನರಿಯದಿದ್ದೆನೊ ಗೋಪಾಲ
ಕಾಲು ಕೈಗಳು ಕುಗ್ಗಿ ಕಣ್ಣುಗಳು ಭಯವಡಗಿ
ಬೀಳುತೇಳುತಲಿದ್ದೆನೊ ಗೋಪಾಲ
ನಾಲಿಗೆ ಉಡುಗಿ ನರಗಳೆಲ್ಲವು ಸಡಲಿ ಕೋಲು
ಹೋದಂತಿದ್ದೆನೊ ಗೋಪಾಲ
ಹಾಳುಗೋಡೆಗೆ ತಲೆಯನು ಕೊಟ್ಟು ಕಾದುವ
ಗೂಳಿಯಂದದಲಿದ್ದೆನೊ ಗೋಪಾಲ ೬

ಹುಟ್ಟಿದಾಗಲೆ ಸತ್ತನೆಂಬರಾ ಬೈದುಂಡುಟ್ಟು
ಬಾಳುತಲಿದ್ದೆನೊ ಗೋಪಾಲ
ಮಟ್ಟ ತಗ್ಗಲು ಸತಿಸುತ ಸಹಜಾತ
ಗಿಷ್ಟನೆನಿಸಿಕೊಂಡೆನೋ
ಬಿಟ್ಟ ಪ್ರಾಣವ ಕಡೆಗ್ಹೋಗಲು ಪೆಣನೆಂದು
ಮುಟ್ಟರೆನಿಸಿಕೊಂಡೆನೊ ಗೋಪಾಲ
ಕೆಟ್ಟಡವಿಯ ಹದ್ದು ಕಾಗೆಗೆ ದೇಹವ
ಕೊಟ್ಟು ತಿನಿಸಿದೆನೊ ಗೋಪಾಲ ೭

ಹಾದಿವಿಡಿದು ವೈತರಣದೊಳು ಮುಳುಗಿ
ವೇದನೆಗೊಳುತಿದ್ದೆನೊ ಗೋಪಾಲ
ಕಾದಕಾವಲಿ ಉಕ್ಕಿನಕಂಬ ಕೀವಿನ ಸ್ವೇದ
ಕೊಂಡದಿ ಬಿದ್ದೆನೊ ಗೋಪಾಲ
ಭೇದವಿಲ್ಲದೆ ಪರ್ವತ ಪ್ರೇತ ಗುಹ್ಯ ಮೊದಲಾದ
ಯಾತನೆಗೊಳಗಾದೆ ಗೋಪಾಲ
ಸಾಧಿಸಿ ಹಿರಿಯರೊಳು ಮೀರಿ ನಡೆಯೆ ಯಮ
ಬಾಧೆಯೊಳು ಒರಲುವೆನೊ ಗೋಪಾಲ ೮

ಇಷ್ಟಂತು ಕಳೆಯಲಾರೆನೊ ನರಕದೊಳೆಂದು
ನಿನ್ನ ನೆನೆಯದಿದ್ದೆನೊ ಗೋಪಾಲ
ನಷ್ಟದೇಹವ ನೆಚ್ಚಿ ನರರ ಕೊಂಡಾಡುತ
ದುಷ್ಟಬುದ್ಧಿಯೊಳಿದ್ದೆನೊ ಗೋಪಾಲ
ಅಷ್ಟರೊಳಗೆ ನಿನ್ನ ದಾಸರೊಳಾಡಲು
ಶ್ರೇಷ್ಠಜನ್ಮದಿ ಬಂದೆನೊ ಗೋಪಾಲ
ಸೃಷ್ಟಿಯೊಳು ತುರುಗೇರಿ ಗುರು ಅಚಲಾನಂದವಿಠಲ
ಸಲಹೆಂದೆನೋ ಗೋಪಾಲ ೯

## ೩೯*

ನೋಡಿದರೆ ನೋಡು ಮಾತಾಡು ತಾಯಿಗಳೆಂದು
ನೋಡಿ ಭ್ರಮಿಸಲು ಬೇಡ ಪರಸತಿಯರ ಪ.

ದಾರಿಯೊಳು ಭಯವೆಂದು ಚೋರರೊಳು ಪೋಗುವರೆ
ಗೇರುಬೀಜದ ತೈಲ ಲೇಪಿಸುವರೆ
ಅರಣ್ಯ ಮಧ್ಯದಲಿ ಮೃಗವಿರಲು ತುರಗವೆಂ
ದೇರುವರೆ ಪರಸತಿಯ ಪಾಪಿ ಮನವೆ ೧

ಹಸಿಯ ಯಕ್ಕೆಯಕಾಯಿ ನಸುಗುನ್ನಿ ತುರುಚೆಯನು
ತೃಷೆಗೆ ಮೆಲುವರೆ ವ್ಯಸನ ದೋರಿತೆಂದು
ವಿಷವ ಸೇವಿಸಿದಂತೆ ನೋಡಿ ನೀ ಪರಸತಿಯ
ವಿಷಯಕೆಳಸುವುದೇಕೆ ಪಾಪಿ ಮನವೆ ೨

ಪ್ರೀತಿಯಿಂದಲಿ ಸತಿಯ ಮನೆಗಾಗಿ ಯಿಂದ್ರನತಿ
ಕಾತುರದಿ ಪೋಗಿ ಮೈತೂತಾದನು
ಸೀತೆಗೋಸುಗವಾಗಿ ರಾವಣನು ತಾ ಕೆಟ್ಟ
ಸೋತು ದ್ರೌಪದಿಗೆ ಕೀಚಕ ಕೆಟ್ಟನು ೩

******************** ೪

---

* ನುಡಿ ೪ ಸಿಕ್ಕಿಲ್ಲ

ಕೆಟ್ಟವರದೃಷ್ಟವಿನ್ನೆಷ್ಟು ಹೇಳಿದರೇನು
ಬಿಟ್ಟು ಬಿಡುವರೆ ತಮ್ಮ ಕೆಟ್ಟ ಗುಣವ
ಕಟ್ಟಿನೊಳಗಿಟ್ಟು ಉತ್ಕೃಷ್ಟ ಜನಗಳ ಸಂಗ
ಕೊಟ್ಟು ಸಲಹಯ್ಯ ಅಚಲಾನಂದವಿಠಲ ೫

## ೪೦

ಯಮ ತನ್ನ ಪುರದಿ ಸಾರಿದನು
ಎಮ್ಮ ಕಮಲನಾಭನ ದಾಸರ ಮುಟ್ಟದಿರಿಯೆಂದು ಪ.

ಭುಜದಲೊತ್ತಿದ ಶಂಖಚಕ್ರಾಂಕಿತವನ್ನು
ನಿಜ ದ್ವಾದಶನಾಮ ಧರಿಸಿಪ್ಪರಾ
ತ್ರಿಜಗವಂದಿತ ತುಲಸಿಯ ಮಾಲೆ ಹಾಕಿದ
ಸುಜನರಂಗಣವ ಪೊಗದೆ ಬನ್ನಿರೆಂದು ೧

ಗೋಪಿಚಂದನ ಬಿಟ್ಟು ದೇಹಕ್ಕೆ ಭಸ್ಮವ
ಲೇಪಿಸಿ ಹರಿಹರರೊಂದೆಂಬ
ಪಾಪಿಗಾಳೆಳತಂದು ಕಣ್ಣು ಕಳಚಿ ಅಂಧ
ತಾಮಸಿನೊಳಗ್ಹಾಕಿ ಕಲ್ಲು ದಬ್ಬಿರೊ ಎಂದು ೨

ತಾಳದಂಡಿಗೆ ನೃತ್ಯಗೀತ ಸಮ್ಮೇಳದಿ
ಊಳಿಗವನು ಮಾಳ್ಪ ಹರಿದಾಸರ
ಕೇಳುತಲೊಮ್ಮೆ ಕರಗಳ ಮುಗಿದು ನ -
ಮ್ಮಾಳುಗಳೆನುತ ಪೇಳದೆ ಬನ್ನಿರೆಂದು ೩

ಗುರುಮುದ್ರೆಯವನು ತಾನೆಂದು ಪ್ರಾಣಿಗಳ ಮಂ-
ದಿರಕೆ ಪೋಗಿ ಪೋಗಿ ನಿರ್ಬಂಧಿಸಿ
ಬರಿದೆ ಬೈದು ಬಳಲಿಸುವ ಪಾಪಿಗಳ
ಕೊರೆದು ಕುಟ್ಟಿತಂದು ಮುರಿದು ಕೊಲ್ಲಿರೊ ಎಂದು ೪

ಅನ್ಯದೈವ ಅನ್ಯಮಂತ್ರ ತಂತ್ರವ ಬಿಟ್ಟು
ಪನ್ನಗಶಯನನೆ ಗತಿಯೆನುತ
ಉನ್ನತ ಹರಿದಿನ ವ್ರತವನಾಚರಿಪ ಪ್ರ-
ಸನ್ನರ ಗುಣವ ಕೆಣಕದೆ ಬನ್ನಿರೆಂದು ೫

ಚರ್ಮಕ್ಕೆ ಸಿಡಿ ಊರಿ ಬೇವಿನುಡುಗೆವುಟ್ಟು
ಚಿಮ್ಮುತ ಚೀರುತ ಬೊಬ್ಬೆಗಳಿಡುತ
ಕರ್ಮ ಕೂಗುರಿಯಾಗಿ ಪ್ರಾಣಹಿಂಸೆಯ ಮಾಳ್ಪ
ಬ್ರಹ್ಮೇತಿಕೋರನ ಬ್ಯಾಗನೆ ಎಳತನ್ನಿ ೬

ಕೇಶವ ಹರಿ ಅಚಲಾನಂದವಿಠಲನ್ನ
ಶೇಷಗಿರಿಯ ತಿರುಮಲೇಶನ
ದಾಸರ ದಾಸರ ದಾಸನೆಂದೆನಿಸುವ
ದಾಸರ ಗುಣವ ಕೆಣಕದೆ ಬನ್ನಿರಿ ಎಂದು ೭

## ಸುಳಾದಿಗಳು

### ೪೧

### ಧ್ರುವತಾಳ

ಕಾಮ ಕಂಗೆಡಿಸುತಲಿದೆ
ಕ್ರೋಧ ಬಾಧಿಸುತಲಿದೆ
ಲೋಭ ಲೋಭನರಿಯದಿದೆ
ಮೋಹ ಮುದ ಹೀರುತಿದೆ
ಮದ ಮುಂದುಗೆಡಿಸುತಿದೆ
ಮತ್ಸರ ತುಚ್ಛಮಾಡುತಿದೆ
ದೇವ ಏನು ಮಾಡಲಿ ಸ್ವಾಮಿ
ದೇವ ನಾನೊಂದು ಬೇಡಿದರೆ
ನೀನೊಂದು ನೇಮಿಸಿ ನೋಡಿ ನಗುವೆ ಸ್ವಾಮಿ
ಬಡವನ್ನ ಬಿಡಲಾಗದು

ದೂರವೇನೋ ಸ್ವಾಮಿ ಒಡೆಯ
ಬಿಡಿಸಯ್ಯ ಹಗೆಗಳ ಕಾಟವ
ಕೊಡು ನಿನ್ನ ಭಕುತಿಸುಖವನು
ನಿನ್ನ ಭಕುತಜನರೊಡನಾಡಿಸು
ಅಚಲಾನಂದವಿಠಲ ಕರುಣಿ ೧

**ರೂಪಕತಾಳ**

ಹೆಜ್ಜೆ ಹೆಜ್ಜೆಗೆ ಗೋವಿಂದ ಎನ್ನದೆ
ಲಜ್ಜೆಗೆಟ್ಟ ಪಾಪಿಗೆ ನಿತ್ಯನರಕ
ಲಜ್ಜೆಯನಳಿದು ಮಹಾತ್ಮರು ಹರಿ ಪಾ-
ದಾಬ್ಜದ ಮಕರಂದವನು ಭುಂಜಿಪರು
ಸಜ್ಜನಪ್ರಿಯ ಅಚಲಾನಂದವಿಠಲ
ಅರ್ಜುನಗೊಲಿದಂತೆ ಒಲಿವನು ಕಾಣಿರೊ ೨

*

ಆರಾರ ಮನೆಗಳಿಗೆ ಹಾರೈಸಿ ಹೋದರೆ
ಆರೆನ್ನ ನುಡಿಸರು ಇತ್ತ ಬಾ ಎನ್ನರೊ
ಇಂತು ಸಾರುವೆ ಹರಿಯೆ ಸುತ್ತ ಮುತ್ತಿದ
ಸಂಸಾರಕ್ಕೆ ಎಲ್ಲರು ಇಂತು
ಸಾರುವೆ ಹರಿಯೆ ಕತ್ತಲೆಗವಿದ
ಕಣ್ಣು ಕಾಣದ ಮುಗುಧಂಗೆ
ಎತ್ತಲೈದಾನೋ ನಮ್ಮ ಅಚಲಾನಂದವಿಠಲ ೩

**ಜತೆ**

ಎನ್ನವಗುಣಗಳಯೆಣಿಸಲಾಗದು ದೇವ ಈ ವ್ಯಾಳೆ ಕಾಯೊ
ಎನ್ನಮ್ಯಾಲೆ ಕೃಪೆ ಮಾಡೊ ಅಚಲಾನಂದವಿಠಲ **

---

* ತಾಳ ಹೇಳಿಲ್ಲ

** ಇದೊಂದು ಅಪೂರ್ಣ ಸುಳಾದಿ

## ೪೨

### ಧ್ರುವತಾಳ

ಹಿಂದಿನ ಜನ್ಮಜನ್ಮಾಂತರದಿ ಮಾಡಿದಘವ
ನಿವಾರಿಸುವರು ನಿನ್ನ ದಾಸರು
ಇಂದಣಪಾರ ದುರಿತ ದುರ್ಜಯ ದುಃಖವ
ದೂರ ಮಾಡುವರು ನಿನ್ನ ದಾಸರು
ಮುಂದಣ ಅಪಾರ ಆನಂದ ಸುಖವ
ಅನವರತ ಈವರು ನಿನ್ನ ದಾಸರು
ಯೆಂದು ಇಲ್ಲದಿರೆ ಬ್ಯಾರೆಗತಿಯುಂಟೆ
ನಿನ್ನನರಿವ ಬಗೆ ಮತ್ತುಂಟೆ ಎಲೆದೇವ
ನಂದನಂದನ ನಿನ್ನವರೆ ಜೀವನ
ಅಚಲಾನಂದವಿಠಲರೇಯ ಬ್ಯಾರೆಗತಿ ಮತ್ತುಂಟೆ ೧

### ಮಠ್ಯತಾಳ

ಭೂತದಯಾಪರ ನರನಾಥ ದೇವತೆಯೆಂಬರು
ಭೂತವಿರೋಧ ಮಾಡಿ ಕೈಯ್ಯಾತು ಬೇಡುವ ದೈವವ
ಸಾತ್ವಿಕವೆಂದು ಬಗೆವರು ಜನರು ಈ
ರೀತಿಯೇನೆಂಬೆ ಅಜಾತ ಸಕಲದೇವರ
ದಾತನೆ ಅಚಲಾನಂದವಿಠಲ ನೀನಿರೆ
ಸಾತ್ವಿಕವೆಂದು ಅನ್ಯದೈವವ ಈ
ಭೂತಳದ ಜನರು ಬಗೆವರು ಪ್ರತಿದಿನ ೨

### ತ್ರಿಪುಟತಾಳ

ಮಾನವನೆ ಕೇಳು ಕಬ್ಬಿಣ ಸೋಸಿ ಕಾಸಿ ಬಡಿಯಲು
ತಾನು ಪರುಷ ಸೋಕದೆ ಸುವರ್ಣ ಅಪ್ಪುದೇ
ಅನಾದಿ ಅವಿದ್ಯ ತಾಪದಿಂದ ಬೆಂದು

ತಾನು ನೀರೊಳು ಮಿಂದರೇ ಹೋಹುದೇನೊ
ಅನಾದಿದೈವ ಅಚಲಾನಂದವಿಠಲನ
ಧ್ಯಾನಮಾಳ್ಪರ ಪಾದಪರುಷ ಸೋಕದನಕ ೩

**ಅಟ್ಟತಾಳ**

ಎನ್ನ ಹಳಿಯಲಿ ಉಗುಳಲಿ ಬಂಧುಗಳೆನ್ನ
ಮನ ರಂಗ ನಿನ್ನನೆ ನೆಚ್ಚಿಹ್ಯದೆನ್ನಮನ ಕೃಷ್ಣ
ನಿನ್ನನೆ ನಂಬಿಹ್ಯದೆನ್ನ ಮನ ಅಚಲಾನಂದವಿಠಲರೇಯ
ನಿನ್ನವರೊಲುಮೆಯ ಸಾರಿತೆನ್ನ ಮನ ೪

**ಆದಿತಾಳ**

ಹಲವು ಮಾತೇನು ಹಲಧರನನುಜನ
ಚೆಲುವಿಕೆಯನೆ ಕಂಡು ಮನಸೋತೆನವ್ವ
ಕೆಲಬಲದಾ ಕುಲದವರೆನ್ನ ಹಳಿಯಲಿ
ಚಲಿಸದು ಚಿತ್ತ ಚಂಚಲವಾಗದೆನ್ನ ಮನ
ಕೆಲಚಿತಿ ವೆಂಣೆಲ್ಲ (?) ತಾನೊಲಿವಂತೆ ಮಾಡಿದ
ನಿಲುಕುವನಚಲಾನಂದವಿಠಲರೇಯ
ಕ್ಯಲಬಲದ ಕುಲದವರೆನ್ನ ಹಳಿಯಲಿ ೫

**ಜತೆ**

ಬೆಂದ ಸಂಸಾರದಿ ಬಂದು ಬಂದು ಹೋದೆನೊ
ಇಂದೆನ್ನ ಸಲಹೊ ಅಚಲಾನಂದವಿಠಲ

# ಅನುಬಂಧಗಳು

೧. ಕಠಿಣ ಶಬ್ದಗಳ ಅರ್ಥ

೨. ಟಿಪ್ಪಣಿಗಳು

೩. ಅಂಕಿತನಾಮಸೂಚಿ

೪. ಕೀರ್ತನೆಗಳ ಅಕಾರಾದಿ ಸೂಚಿ

# ಅನುಬಂಧ-೧

## ಕಠಿಣ ಶಬ್ದಗಳ ಅರ್ಥ

### ಉರಗಾದ್ರಿವಿಠಲದಾಸರು

| | | | | | |
|---|---|---|---|---|---|
| ಅಂಗಜ | = | ಕಾಮ | ಕಾಕು | = | ನೀಚ |
| ಅಂಬರ | = | ಆಕಾಶ | ಕಾಸಾರ | = | ಕೊಳ, ಪುಷ್ಕರಣಿ |
| ಅಕುಟಿಲ | = | ದೋಷವಿಲ್ಲದ | ಕುಂಜರ | = | ಆನೆ |
| ಅಜಾಂಡ | = | ಬ್ರಹ್ಮಾಂಡ | ಕುಂಭಿಣಿ | = | ಭೂಮಿ |
| ಅತುಳ | = | ಅಸಮಾನವಾದ | ಕುಪಿತ | = | ಕೋಪಗೊಂಡ |
| ಅನವರತ | = | ಯಾವಾಗಲೂ | ಕುವಲಯ | = | ಭೂಮಂಡಲ, ತಾವರೆ |
| ಅಪವರ್ಗ | = | ಮೋಕ್ಷ | ಕೊಂಡೆ | = | ಚಾಡಿ |
| ಅಬ್ಜಸಖ | = | ಸೂರ್ಯ | ಕೃಪಣ | = | ದೀನ |
| ಅಕ್ಷ | = | ಕಣ್ಣು | ಖುಲ್ಲ | = | ನೀಚ |
| ಆರ್ಜಿಸು | = | ಸಂಪಾದಿಸು | ಗದ್ದುಗೆ | = | ಸಿಂಹಾಸನ |
| ಆಪನ್ನ | = | ಆಪತ್ತಿಗೆ ಗುರಿಯಾದ | ಗ್ರಂಥಿ | = | ಗಂಟು |
| ಆಶಂಕೆ | = | ಸಂಶಯ ಜ್ಞಾನ | ಗಾತ್ರ | = | ದೇಹ |
| ಇಂಬು | = | ಸುಖ, ಆಶ್ರಯ | ಗ್ರೀವ | = | ಮುಖ |
| ಉಡುಗಣ | = | ನಕ್ಷತ್ರಗಳ ಸಮೂಹ | ಜರಾ | = | ಮುಪ್ಪು |
| ಉನ್ನಂತ | = | ಅತ್ಯಂತ ಶ್ರೇಷ್ಠವಾದ | ಜಾಗು | = | ಉದಾಸೀನ, ತಡ |
| ಕಂಜ | = | ಪದ್ಮ, ಕಮಲ | ಜ್ಞೇಯ | = | ತಿಳಿಯ ಬೇಕಾದದ್ದು |
| ಕಕ್ಕುಲತೆ | = | ಚಿಂತೆ | ತಟಿತ | = | ಮಿಂಚು |
| ಕರಪುಟ | = | ಜೋಡಿಸಿದ ಕೈಗಳು | ತರಣಿ | = | ಸೂರ್ಯ |
| ಕರಣ | = | ಇಂದ್ರಿಯ | ತುಷ್ಟಿ | = | ತೃಪ್ತಿ |
| ಕಚ್ಛಪ | = | ಆಮೆ | ತೂರ್ಯ | = | ತುತ್ತೂರಿ |
| ಕಲ್ಪದ್ರುಮ | = | ಕಲ್ಪವೃಕ್ಷ | | | |

ತ್ರಿವಳಿ = ಹೊಟ್ಟೆಯ ಮೇಲಿರುವ ಮೂರು ಗೆರೆಗಳು
ತೃಣ = ಹುಲ್ಲು
ದುರಿತ = ಪಾಪ
ದ್ಯುಮಣಿ = ಸೂರ್ಯ
ನಕ್ರ = ಮೊಸಳೆ
ನರಮೃಗ = ನರಸಿಂಹ
ನಾಕೇಶ = ದೇವೇಂದ್ರ
ನ್ಯಾವಳ = ಉಡುದಾರ
ನಿಕಾಯ = ಸಮೂಹ
ನಿಕೃಷ್ಟ = ನೀಚ, ಕೀಳು
ನಿಚ್ಚ = ನಿರಂತರ
ನಿಬಿಡ = ದಟ್ಟವಾದ
ನಿಭ = ಪ್ರಕಾಶ
ನಿರ್ವಿಣ್ಣ = ದುಃಖಿತ
ನಿಶಾಚರ = ದೈತ್ಯ
ಪಂಥ = ಶಪಥ, ಪ್ರತಿಜ್ಞೆ
ಪರಮೇಷ್ಠಿ = ಬ್ರಹ್ಮ ದೇವರು
ಪ್ರಗ್ರಹ = ಹಗ್ಗ
ಪಿನಾಕಿ = ಶಿವ
ಬನ್ನ = ಕಷ್ಟ, ದುಃಖ
ಬಾಣಸಿಗ = ಅಡುಗೆಯವನು
ಬುಧ = ಜ್ಞಾನಿ
ಭರ್ಮ = ಬಂಗಾರ
ಭಾಂಡ = ಗಡಿಗೆ
ಭುಜಗ = ಸರ್ಪ
ಭುಜಂಗ = ಸರ್ಪ
ಮಂದಾರ = ಕಲ್ಪವೃಕ್ಷ
ಮಂಥ = ಕಡೆಗೋಲು
ಮಚ್ಚಕ = ಮತ್ಸ್ಯ, ಮೀನು
ಮಚ್ಚರ = ಮತ್ಸರ, ದ್ವೇಷ
ಮಹಂತ = ಪೂಜ್ಯ
ಮಾತಂಗ = ಆನೆ
ಮೃಗಾಂಕ = ಚಂದ್ರ
ಮೃಡ = ರುದ್ರ, ಶಿವ
ಯಜನ = ಯಜ್ಞ
ರಜ್ಜು = ಹಗ್ಗ
ರುಜೆ = ರೋಗ
ಲಲಾಟ = ಹಣೆ
ವಲೀಮುಖ = ಕೋತಿ
ವಾರಿ = ನೀರು
ವಿತ್ತ = ಹಣ
ವಿಪಿನ = ಕಾಡು
ವೀತಿಹೋತ್ರ = ಅಗ್ನಿ
ವೈಶ್ವಾನರ = ಅಗ್ನಿ
ವ್ಯಷ್ಟಿ = ಬೇರೆ ಬೇರೆ
ವೃಂದಾರಕ = ದೇವತೆಗಳು
ಸಂಕೋಲೆ = ಬೇಡಿ, ಪ್ರತಿಬಂಧಕ
ಸಂಸೃತಿ = ಸಂಸಾರ ಚಕ್ರ
ಸಕ್ತ = ಶ್ರದ್ಧೆಯುಳ್ಳ
ಸತ್ತ = ಇರುವಿಕೆ
ಸುಮನಸರು = ದೇವತೆಗಳು
ಸೂಕರ = ಹಂದಿ
ಸೂರಿಗಳು = ಜ್ಞಾನಿಗಳು
ಸ್ಮರ = ಕಾಮದೇವರು
ಸ್ಮಶ್ರು = ಮೀಸೆ
ಶೃಗಾಲ = ನರಿ
ಹಣಿ = ಹೊಡಿ, ಥಳಿಸು
ಹದಿಬದೆ = ಪತಿವ್ರತಾ ಸ್ತ್ರೀ

## ರಘುರಾಮವಿಠಲರು

| | | |
|---|---|---|
| ಅನಂಗ | = | ಮನ್ಮಥ, ಕಾಮ |
| ಅಬ್ಧಿ ತನಯೆ | = | ಸಮುದ್ರದಲ್ಲಿ ಹುಟ್ಟಿದವಳು – ಲಕ್ಷ್ಮೀದೇವಿ |
| ಅರ್ಭಕ | = | ಚಿಕ್ಕವನು, ಹುಡುಗ |
| ಓಘ | = | ಗುಂಪು, ಸಮೂಹ |
| ಕಂತು | = | ಕಾಮ, ಮನ್ಮಥ |
| ಕರಣ | = | ಇಂದ್ರಿಯ |
| ಕಾಮಾರಿ | = | ಶಿವ |
| ಗಾತ್ರ | = | ದೇಹ |
| ಘಟಕರ್ಣ | = | ಕುಂಭಕರ್ಣ (ರಾವಣನ ತಮ್ಮ) |
| ತರಣಿ ಕುಲ | = | ಸೂರ್ಯವಂಶ |
| ನ್ಯಾಸ ಮಂತ್ರ | = | ತತ್ವ ನ್ಯಾಸ ಮಂತ್ರ (ದೇವರ ಪೂಜೆಗೆ ಸಂಬಂಧಿಸಿದ್ದು) |
| ಪಂಕ | = | ಕೆಸರು |
| ಪರಶುಹಸ್ತ | = | ಪರಶುರಾಮ |
| ಪಾವಕ | = | ಅಗ್ನಿ, ಬೆಂಕಿ |
| ಮಖ | = | ಯಜ್ಞ, ಯಾಗ |
| ಮತಿವಿಕಳ | = | ಬುದ್ಧಿಗೆಟ್ಟವ |
| ಮೃಡಸಖ | = | ಶ್ರೀಹರಿ |
| ರಜ | = | ಧೂಳು, ಕಣ |
| ರಜತಪುರಿ | = | ಉಡುಪಿ |
| ವಾರಿಶಾಯಿ | = | ಸಮುದ್ರದಲ್ಲಿ ಮಲಗಿರುವವನು – ಶ್ರೀ ಹರಿ |
| ಶಠ | = | ಧೂರ್ತ, ಕಪಟಿ |
| ಹಂದರ | = | ಚಪ್ಪರ |
| ಹರಧನು | = | ಶಿವಧನುಸ್ಸು |
| ಹಸ್ತಿವರದ | = | ಗಜೇಂದ್ರನಿ ಗೊಲಿದವ, ನಾರಾಯಣ |

## ಶ್ರೀಶಕೇಶವದಾಸರು

| | | |
|---|---|---|
| ಅಳಿ | = | ಗುಂಪು, ಸಮೂಹ |
| ಉಡುಪ | = | ಚಂದ್ರ |
| ಉಡುರಾಶಿ | = | ನಕ್ಷತ್ರ ಸಮೂಹ |
| ಉರ್ವಿ | = | ಭೂಮಿ |
| ಗಳಿಯಿಸು | = | ಜೋತುಬೀಳು, ನೇತುಬೀಳು |
| ದೇವತರು | = | ಕಲ್ಪವೃಕ್ಷ |
| ವೆಗ್ಗಳ | = | ಹೆಚ್ಚಳಿಕೆ, ಶ್ರೇಷ್ಠ |
| ಸ್ವಾದ | = | ರುಚಿ, ಸವಿ |

## ನಿಡಂಬೂರುರಾಮದಾಸರು

| | | | | | |
|---|---|---|---|---|---|
| ಅಜಗರ | = | ಹೆಬ್ಬಾವು | ಚಣ | = | ಕ್ಷಣ |
| ಆರ್ಮೊಗ | = | ಷಣ್ಮುಖ, ಸುಬ್ರಹ್ಮಣ್ಯ | ಜಾನ | = | ಜ್ಞಾನ |
| ಉಜಡೆ | = | ಒರಳು (?) | ರಸನೆ | = | ನಾಲಿಗೆ |

## ಬಿ. ವೆಂಕಟರಾವ್

| | | | | | |
|---|---|---|---|---|---|
| ಕುಂದರದನ | = | ಮಲ್ಲಿಗೆಮೊಗ್ಗಿನಂತೆ ಹಲ್ಲುಗಳುಳ್ಳವ | ನಿಕರುಂಬ | = | ಗುಂಪು, ಸಮೂಹ |
| ಕುಂಭಿನೀ | = | ಭೂದೇವಿ | ಭೃತ್ಯೌಘ | = | ಸೇವಕರ ಸಮೂಹ |
| ಕುವಲಯ | = | ಕನ್ನೈದಿಲೆ | ಮೃಗಪತಿ | = | ಸಿಂಹ |
| ಜಂಭಭೇದಿ | = | ಇಂದ್ರ | ರಾಕಾ | = | ಚಂದ್ರ |
| ನಕ್ರಂಚರ | = | ನಿಶಾಚರ, ರಾತ್ರಿ ಸಂಚರಿಸುವ ಪಿಶಾಚಿಗಳು | ರುಧಿರ ಬೀಜ | = | ರಕ್ತ ಬೀಜ (ಒಬ್ಬ ದೈತ್ಯ) |
| ನಾಕಾಧಿಪ | = | ಇಂದ್ರ | ಶರದಿಂದು | = | ಶರತ್ಕಾಲದ ಚಂದ್ರ |
| | | | ಹಿಮಕರ | = | ಚಂದ್ರ |

## ಶ್ರೀ ಅಚಲಾನಂದರು

| | | | | | |
|---|---|---|---|---|---|
| ಅಂಗುಟ | – | ಹೆಬ್ಬೆರಳು | ಕ್ರತು | – | ಯಾಗ |
| ಅಂಬರ | – | ಆಕಾಶ | ಕುಂದಕುಟ್ಮಲ | – | ಮಲ್ಲಿಗೆಮೊಗ್ಗು |
| ಅಘ | – | ಪಾಪ | ಕುಂಭಿಣಿ | – | ಭೂಮಿ |
| ಅಧ್ವರ್ಯ | – | ಯಜ್ಞವನ್ನು ನಡೆಸುವವನು | ಕ್ಲುಪ್ತ | – | ನಿಗದಿಯಾದ |
| ಇಂದೀವರ | – | ತಾವರೆ | ಕೂಳು | – | ಅನ್ನ |
| ಈಡು | – | ಸರಿಸಮಾನ | ಕೃಪಣ | – | ಜಿಪುಣ |
| ಉರ್ವಿ | – | ಭೂಮಿ | ಕೋಳು ಹೋದಂತೆ | – | ಲೂಟಿಯಾದಂತೆ, ಕೊಳ್ಳೆಯಾದಂತೆ |
| ಕಂತು | – | ಮನ್ಮಥ | ಖೂಳತನ | – | ದುಷ್ಟತನ |

ಗೋಮಾಳ – ಹಸುಗಳನ್ನು ಕೂಡುವ ಸ್ಥಳ
ಜರೆ – ಮುಪ್ಪು
ಜವ – ಯಮ
ಡಿಂಗರಿಗ – ಭಕ್ತ, ಸೇವಕ
ತರುಬು – ಅಡ್ಡಗಟ್ಟು, ನಿಗ್ರಹಿಸು
ತುರುಗೇರಿ – ತುರಗವನ್ನು ಏರಿ – ಕುದುರೆಯನ್ನು ಹತ್ತಿ
ತುರುವಿಂಡು – ಹಸುಗಳ ಗುಂಪು
ತೊತ್ತು – ಸೇವಕ
ಧರೆ – ಭೂಮಿ
ಧಾವತಿ – ಆತುರ
ನಾಗಾರಿ – ಗರುಡ
ಪರುಷ – ಸ್ಪರ್ಶಮಣಿ
ಪಿಡುಗು – ರೋಗ
ಪುಂಜ – ಗುಂಪು, ಸಮೂಹ
ಪುಚ್ಛ – ಬಾಲ
ಬನ್ನಬಡು – ಕಷ್ಟಪಡು
ಬವಣೆ – ಕಷ್ಟ
ಭ್ರಾಮಕರು – ಭ್ರಮಾಧೀನರು
ಭುಂಜಿಪರು – ಉಣ್ಣುವರು
ಭೂಪ – ದೊರೆ, ರಾಜ
ಮಕರಂದ – ಹೂವಿನ ರಸ
ಮಧುಕರ – ದುಂಬಿ
ಮರುಳುತನ – ಹುಚ್ಚು
ಮಹಿ – ಭೂಮಿ
ಮೊನೆಯಾಳ್ಗಳು – ಭಟರು, ಸೈನಿಕರು
ರವಿ – ಸೂರ್ಯ
ಲಂಪಟ – ಕಾಮುಕ
ವಾರಿಜಾಂಬಕ – ತಾವರೆಯಂತೆ ಕಣ್ಣುಳ್ಳವ, ಶ್ರೀಹರಿ
ವಾರಿಧಿ – ಸಮುದ್ರ
ವಿಧಾತ – ಬ್ರಹ್ಮ
ಶಶಿ – ಚಂದ್ರ
ಶ್ವಾನ – ನಾಯಿ
ಶುಕ್ಲ – ವೀರ್ಯ
ಶೋಣಿತ – ರಕ್ತ
ಸೂಕರ – ಹಂದಿ
ಸೂತ್ರ – ನಿಯಮ
ಸ್ವೇದ – ಬೆವರು
ಹಗೆ – ಶತ್ರು
ಹಲಧರಾನುಜ – ಬಲರಾಮನ ತಮ್ಮ, ಕೃಷ್ಣ

# ಅನುಬಂಧ-೨

## ಟಿಪ್ಪಣಿಗಳು

## ಉರಗಾದ್ರಿವಾಸ ವಿಠಲದಾಸರು

೧

ಶ್ರೀ ಗಣಪತಿಯ ಮಹಿಮೆಯನ್ನು ವರ್ಣಿಸಿ ಸ್ತೋತ್ರಮಾಡಿದ್ದಾರೆ

**ವಿಶ್ವಂಭರ** : ಗಣಪತಿಯ ಬಿಂಬನಾದ ಶ್ರೀ ಹರಿಯ ರೂಪ

**ಭೇಶ** : ಆಕಾಶಕ್ಕೆ ಅಧಿಪತಿ,

**ತತುವರೊಳಗೆ** : ತತ್ವಾಭಿಮಾನಿ ದೇವತೆಗಳಲ್ಲಿ

೨

ಅನೇಕ ಪುರಾಣಪ್ರಸಂಗಗಳನ್ನು ಉಲ್ಲೇಖಿಸಿ, ಈ ಜಗತ್ತಿನ ತಂದೆ, ತಾಯಿ, ಸತಿ, ಸುತ ಬಂಧು ಬಳಗಗಳೇನಿದ್ದರೂ, ಕೊನೆಯಲ್ಲಿ ಶ್ರೀ ಹರಿಯೇ ರಕ್ಷಕನೆಂದು ಸಾರಿದ್ದಾರೆ

೩

**ಶ್ರೀಹರಿಯ ದಶಾವತಾರಗಳ ಸ್ತುತಿ**

ಈ ಪದದ ಮೂರು ನುಡಿಯ ಒಂದೋದು ನುಡಿಯಲ್ಲೂ ಪೂರ್ವಾರ್ಧ ಉತ್ತರಾರ್ಧಗಳಲ್ಲಿ ಪ್ರತ್ಯೇಕವಾಗಿ ದಶಾವತಾರಗಳನ್ನು ವರ್ಣಿಸಿರುವುದು ಈ ಕೃತಿಯ ವೈಶಿಷ್ಟ್ಯ.

**ಶಿಲೆಯ ಝುಲಿಸಿ ಸಲಿಸಿದೆ ನಿಜಕೆ** : ಕಲ್ಲನ್ನು ಶುದ್ಧಿಮಾಡಿ ಮೊದಲಿನ ಅಹಲ್ಯೆಯ ರೂಪಕ್ಕೆ ತಂದೆ.

೪

ಪರಮಾತ್ಮನ ಸರ್ವತ್ರ ವ್ಯಾಪಕತ್ವವನ್ನೂ, ಸರ್ವಕರ್ತೃವನ್ನೂ, ಅಲ್ಪಸೇವೆಗೆ ಮಹತ್ಫಲವನ್ನೂ ಕೊಡುವ ಕಾರುಣ್ಯವನ್ನೂ ಕೊಂಡಾಡಿ ಅವನಲ್ಲಿ ಭಕ್ತಿಯನ್ನು ಬೇಡಿದ್ದಾರೆ.

**೫**

ಶ್ರೀ ಹರಿಯ ದಶಾವತಾರಗಳನ್ನು ಚಮತ್ಕಾರ ಪೂರ್ವಕ ವರ್ಣಿಸಿ ಸ್ತೋತ್ರ ಮಾಡಿದ್ದಾರೆ.

**೬**

ಶ್ರೀ ಕೃಷ್ಣನ ಅನೇಕ ಲೀಲೆಗಳನ್ನು ವರ್ಣಿಸಿ ತಮಗೆ ಅವನ ದರ್ಶನವಾಯಿತೆಂದು ಹಾಡಿದ್ದಾರೆ.

**ದೈತ್ಯ ಕೃತಾಂತ** : ದೈತ್ಯರಿಗೆ ಯಮ ಸದೃಶ

**ಕಂತುಪಿತ** : ಕಾಮನತಂದೆ ಶ್ರೀಕೃಷ್ಣ

**ಕಂಟಕದೆಡೆರಾಕಟಕ** : ಅಡ್ಡಬರುವ ವಿಪತ್ತುಗಳ ಸಮೂಹ,

**ಸಪ್ತಾಂಗ** : ತಿಥಿ, ವಾರ, ನಕ್ಷತ್ರ, ಯೋಗ, ಕರಣ, ಮಾಸ ಮತ್ತು ಋತು ಇವುಗಳ ನಿಮಾಮಕ ಶ್ರೀಹರಿ

**ಏಕೋನ ವಿಂಶತಿ ಮಂಗಳ ವಿಶ್ವನೆ** : ವಿಶ್ವನೆಂಬ ಹತ್ತೊಂಬತ್ತು ಮುಖಗಳಳ್ಳ ಶ್ರೀಹರಿಯ ರೂಪ

**೭**

ತಮಗೆ ತಿರುಪತಿ ಶ್ರೀ ವೆಂಕಟೇಶನ ದರ್ಶನವಾದದ್ದನ್ನು ಪರವಶರಾಗಿ ಹಾಡಿದ್ದಾರೆ

**ಅಂಗಿರಸ ದೀ** : ಅಂಗೀರಸಸಂವತ್ಸರದ, **ಭದ್ರ**–ಭಾದ್ರಪದಮಾಸ

**ಭಾರ್ಗವವಾಸರ** : ಶುಕ್ರವಾರ

**ಇಮ್ಮನನಾಗಿರೆ** : ಎರಡು ಮನಸ್ಸುಳ್ಳವನಾಗಿರೆ. ಒಡೆದಮನಸ್ಸುಳ್ಳವ ನಾಗಿರೆ

**ಮೇಲುಗಿರಿ** : ತಿರುಪತಿ ಬೆಟ್ಟ

**೮**

ಪರಮಾತ್ಮನ ಸಂಕಲ್ಪದಂತೆ ಸೃಷ್ಟಿಯಲ್ಲಿ ಬಂದಿರುವ ತಮ್ಮನ್ನು ಕೈಹಿಡಿದೆತ್ತಿ ಪಾರುಗಾಣಿಸೆಂದು ಪ್ರಾರ್ಥಿಸಿದ್ದಾರೆ

ಪರಮಾತ್ಮನು ಬಿಂಬ, ಜೀವನು ಪ್ರತಿಬಿಂಬ ಹಾಗೂ ಪ್ರತಿಬಿಂಬ ಮತ್ತು ಜೀವನ ಸ್ವರೂಪಗಳು ಒಂದೇ ಆಗಿದ್ದು ಬೇರೆ ಉಪಾಧಿ (ಭಿನ್ನವಾದವಸ್ತು) ಇಲ್ಲವೆಂಬ ಮತ್ತು ಈ ಜಗತ್ತು ಸತ್ಯವೆಂಬ ಮಧ್ವಮತದ ಮುಖ್ಯ ಪ್ರಮೇಯಗಳನ್ನು ಹೇಳಿದ್ದಾರೆ. ಈ ಕೃತಿಯಲ್ಲಿ ಇನ್ನು ಅನೇಕ ತಾತ್ವಿಕ ವಿಷಯಗಳು ಪ್ರತಿಪಾದಿಸಲ್ಪಟ್ಟಿವೆ .

೯

ಇದು ತಿರಮಕೂಡ್ಲು ನರಸೀಪುರದಲ್ಲಿರುವ ಗುಂಜಾನರಸಿಂಹ ದೇವರ ಸ್ತೋತ್ರ. ಶ್ರೀ ನರಸಿಂಹಾವತಾರದ ವರ್ಣನೆ ಇಲ್ಲಿದೆ.

**ಬಿಡುಗಣ್ಣರು** : ದೇವತೆಗಳು.

೧೦

ಪಾದದಿಂದ ಕೀರಿಟದವರೆಗೆ ನಾನಾ ಪ್ರಕಾರವಾಗಿ ವೆಂಕಟೇಶನನ್ನು, ತಿರುಪತಿಯ ಬೆಟ್ಟವನ್ನು ವರ್ಣಿಸಿ ಸ್ತೋತ್ರ ಮಾಡಿದ್ದಾರೆ.

**ಧ್ವಜ ವಜ್ರಾಂಕುಶಯುಕ್ತಲಾಂಛನ** : ಶ್ರೀ ಹರಿಯ ಪಾದದಲ್ಲಿ ಧ್ವಜ, ವಜ್ರಾಯುಧ, ಅಂಕುಶ, ಇತ್ಯಾದಿ ರೂಪಗಳಲ್ಲರುವ ರೇಖೆಗಳು.

**ಅಬ್ಜ ಭವಾರಾಧ್ಯ ಚರಣ** : ಬ್ರಹ್ಮಾದಿಗಳಿಂದ ಪೂಜಿಸಲ್ಪಟ್ಟ ಪಾದಗಳು

೧೧

ತಮ್ಮ ಎಲ್ಲಾ ಕರ್ಮಗಳಲ್ಲು ಸ್ಮರಣೆಯನ್ನು, ಅಭಯವನ್ನೂ, ಭಕ್ತಿ, ಬಲ, ಜ್ಞಾನಗಳನ್ನು ಇತ್ತು ತಮ್ಮನ್ನು ಕಾಪಾಡಬೇಕೆಂದು ಶ್ರೀ ಜಯತೀರ್ಥ ಗುರುಗಳ (ಶ್ರೀ ಟೀ ಕಾ ಚಾರ್ಯರ) ಅಂತರ್ಯಾಮಿ ಶ್ರೀ ಕೃಷ್ಣನನ್ನು ಪ್ರಾರ್ಥಿಸಿದ್ದಾರೆ.

**ಶ್ರೀಕಳತ್ರ** : ಲಕ್ಷ್ಮೀಪತಿ

೧೨

ಶ್ರೀನರಸಿಂಹ ದೇವರ ಸ್ತೋತ್ರ ಅವನ ವೈಶಿಷ್ಯವನ್ನು ಅವತಾರದ ಮಹಿಮೆಯನ್ನು ವರ್ಣಿಸಿದ್ದಾರೆ.

ಇದು ಶಿಷ್ಯರೊಬ್ಬರಿಗೆ ಬಂದಿದ್ದ ಅಪಮೃತ್ಯು ಪರಿಹಾರ ಕೋರಿ ಮಾಡಿದ ಸ್ತೋತ್ರ

**ದುರಿತೌಘ** : ಪಾಪಗಳರಾಶಿ

೧೩

ಶ್ರೀ ನಾರಾಯಣನ ಅನೇಕ ವ್ಯೂಹನಾಮಗಳಲ್ಲಿ ಒಂದಾದ ಶ್ರೀ ಕೇಶವಾದಿ "ಚತುರ್ವಿಂಶತಿ" (ಇಪ್ಪತ್ತನಾಲ್ಕು) ನಾಮಗಳಿಂದ ಸ್ತೋತ್ರಮಾಡಿದ್ದಾರೆ.

**ಸವನತ್ರಯ** : ಪ್ರಾತ ಕಾಲ, ಮಧ್ಯಾಹ್ನ, ಸಾಯಂಕಾಲ

### ೧೪

ತಿರುಪತಿಯ ಶ್ರೀ ವೆಂಕಟೇಶನ ಅಂಗಾಂಗಗಳನ್ನೂ ಆಭರಣಾದಿಗಳನ್ನೂ ವರ್ಣಿಸಿ ಸ್ತೋತ್ರ ಮಾಡಿದ್ದಾರೆ.

**ಚತುರಾಕ್ಷರಸ್ತ** : ವೆಂಕಟೇಶ ಎಂಬ ನಾಲ್ಕು ಅಕ್ಷರಗಳಿಂದ ಪ್ರತಿಪಾದ್ಯ

**ನರಹರಿಯಕ್ಷಾ** : ನರಸಿಂಹ (ನರ+ಹರ್ಯಕ್ಷ)

**ಖಗವರೂಢ** : ಪಕ್ಷಿವಾಹನ, ಗರುಡವಾಹನ

### ೧೫

ತಮ್ಮನ್ನು ಇನ್ನು ದಣಿಸದೆ ಪಾಲಿಸಬೇಕೆಂದು ಗುಣಗಳನ್ನು ವರ್ಣಿಸುವುದರ ಮೂಲಕ ಶ್ರೀವೆಂಕಟೇಶನನ್ನು ಪ್ರಾರ್ಥಿಸಿದ್ದಾರೆ

### ೧೬

ಶ್ರೀ ಹರಿಯ ಅನೇಕ ಗುಣವ್ಯಾಪಾರಾದಿಗಳನ್ನು ಕೊಂಡಾಡಿ ಕಾಪಾಡೆಂದು ಪ್ರಾರ್ಥಿಸಿದ್ದಾರೆ.

**ಸ್ವಗತಭೇದ ಶೂನ್ಯ** : ತನ್ನಲ್ಲಿಯೇ ಎಂದರೆ ತನ್ನರೂಪ, ನಾಮ, ಗುಣ, ಇತ್ಯಾದಿಗಳಲ್ಲಿ ಯಾವ ವ್ಯತ್ಯಾಸವೂ ಇಲ್ಲದವನು

**ಜಗದ್ಘಕು** : ಜಗತ್ತನ್ನು ನುಂಗುವವನು (ಪ್ರಳಯ ಕಾಲದಲ್ಲಿ)

**ಕ್ಷರ** : ಜನನ ಮರಣಗಳುಳ್ಳ ಜೀವರು

**ಅಕ್ಷರ** : ಜನನ ಮರಣಗಳಿಲ್ಲದ, ನಿತ್ಯಮುಕ್ತಳಾದ ಶ್ರೀ ಲಕ್ಷ್ಮೀದೇವಿ

**ಮೋದತೀರ್ಥರ ಹೃತ್ತಾಂತ** : ಶ್ರೀ ಮಧ್ವಾಚಾರ್ಯರ ಹೃದಯದಲ್ಲಿರುವವನು.

### ೧೭

ಇದು ಒಂದು ಅಂಕಿತನಾಮಾವಳಿ. ದಾಸರು ಕೊಟ್ಟ ಅನೇಕ ಅಂಕಿತಗಳು ಇದರಲ್ಲಿ ಉಲ್ಲೇಖಿಸಲ್ಪಟ್ಟಿವೆ. ಶರಣಾಗತರಾದವರಿಗೆ ಆಯುಷ್ಯ, ಜ್ಞಾನ, ಸಂಪತ್ತು, ಭಕ್ತಿ, ಸಾಧನೆಗಳನ್ನು ಕೊಟ್ಟು ಕಾಪಾಡೆಂದು ಪ್ರಾರ್ಥಿಸಿದ್ದಾರೆ.

### ೧೮

ಶ್ರೀ ಹರಿಯ ಗುಣಾತಿಶಯಗಳನ್ನು, ಅವತಾರ ಮಹಿಮೆಗಳನ್ನೂ ಪುರಾಣ ಪ್ರಸಂಗಗಳನ್ನು ವರ್ಣಿಸುತ್ತಾ ಕಣ್ಣಮುಂದೆ ಬಂದು ನಿಲ್ಲೆಂದು ಅವನನ್ನು ಪ್ರಾರ್ಥಿಸಿದ್ದಾರೆ.

**ಪಂಚಾಂಶ ತೋರಿ** : ಮೂಲನಾರಾಯಣ ನಿಂದ ಅಭಿನ್ನಗಳಾದ ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ, ವಾಸುದೇವ ರೂಪಗಳನ್ನು ತೋರಿಸಿ

**ತ್ರಿಂಶರೂಪ** : ವಿಶ್ವ, ತೈಜಸ, ಪ್ರಾಜ್ಞ ಎಂಬ ಮೂರು ರೂಪಗಳು

**ಅಜಹತ್ಯ** : ಬ್ರಹ್ಮಹತ್ಯ,

**ಇಳೆಯೊಣ್ಮರು** : ರಾಜರುಗಳು

೧೯

ಇದೊಂದು "ಅಶ್ವಧಾಟಿ" ಪದ, ಪರಮಾತ್ಮನ ಅನೇಕ ಗುಣರೂಪ ವ್ಯಾಪಾರಗಳನ್ನು ವರ್ಣಿಸಿ ಸ್ತೋತ್ರ ಮಾಡಿದ್ದಾರೆ

**ಮಾರಾರಿ ಪಿತ** : ರುದ್ರನ ತಂದೆ, ಬ್ರಹ್ಮ

೨೦

ತಿರುಪತಿ ಶ್ರೀ ವೆಂಕಟೇಶನ ಮಹಿಮೆಗಳನ್ನು ಕೊಂಡಾಡಿ, ಪಾದಧ್ಯಾನವನ್ನು ಕೊಟ್ಟು ಸಂಸಾರ ಬಂಧನವನ್ನು ಬಿಡಿಸೆಂದು ಪ್ರಾರ್ಥಿಸಿದ್ದಾರೆ.

೨೧

ಅನೇಕ ಪ್ರತಿ ಬಂಧಕಗಳನ್ನು ಪರಿಹರಿಸಿ ಭಕ್ತಿಯನ್ನು ನೀಡೆಂದು ಪರಮಾತ್ಮನಲ್ಲಿ ಪ್ರಾರ್ಥನೆ ಸಲ್ಲಿಸಿದ್ದಾರೆ.

೨೨

ಅನೇಕ ಪುರಾಣ ಪ್ರಸಂಗಗಳನ್ನು ಉಲ್ಲೇಖಿಸಿ, ಭಯದ ಪ್ರಾಪಕನೂ, ನಾಶಕನೂ ಶ್ರೀ ವೆಂಕಟೇಶನೇ ಎಂದು ಅವನ ಮಹಿಮೆಗಳನ್ನು ಕೊಂಡಾಡಿದ್ದಾರೆ.

**ತ್ರಿಸ್ಥಳ** : ಶ್ವೇತ ದ್ವೀಪ, ಅನಂತಾಸನ ಮತ್ತು ವೈಕುಂಠ ಗಳೆಂಬ ಶ್ರೀ ಹರಿಯ ಮೂರು ಧಾಮಗಳು.

೨೩

ಶ್ರೀ ಹರಿಯನ್ನು ಕೊಂಡಾಡಿ ಕಣ್ಣಮುಂದೆ ಬಂದು ನಿಲ್ಲೆಂದು ಪ್ರಾರ್ಥಿಸಿದ್ದಾರೆ.

**ಪಿಡಿಯವಲಿಗೆ** : ಹಿಡಿ ಅವಲಕ್ಕಿಗೆ, ಸುಧಾಮನ ಕಥೆ.

**ಸರ್ವಸಾರ ಭೋಕ್ತ** : ಎಲ್ಲಾ ಪಧಾರ್ಥಗಳಲ್ಲೂ ಸಾರ ಭೂತವಾದ ಸ್ವಾಖ್ಯ ರಸಗಳನ್ನು ಮಾತ್ರ ಸ್ವೀಕರಿಸುವವನು.

**ಪ್ರಣತಕಾಮದ** : ಶರಣಾಗತರ ಇಷ್ಟ ಸಲ್ಲಿಸುವವನು

**ಪ್ರಣತಾರ್ಥಿಹರ** : ಶರಣಾಗತರ ಸಂಕಟ ಪರಿಹಾರ ಮಾಡುವವನು.

## ೨೪

ಅನೇಕ ಮುನಿಜನಗಳ ಮನದಲ್ಲಿ ವಿಹಾರ ಮಾಡುತ್ತಿದ್ದು, ಬಲಿ, ಅಹಲ್ಯೆ, ಅರ್ಜುನ, ಶಬರಿ, ಅಜಾಮಿಳ, ಗಜೇಂದ್ರ, ಭೀಷ್ಮ ಇವರುಗಳನ್ನು ಅನುಗ್ರಹಿಸಿದ ಶ್ರೀಹರಿಯು ತಮ್ಮಲ್ಲಿ ಕೋಪಗೊಳ್ಳದೆ ಸಂಕಟ ಹರಿಸಬೇಕೆಂದು ಪ್ರಾರ್ಥಿಸಿದ್ದಾರೆ.

## ೨೫

ಶ್ರೀ ಲಕ್ಷ್ಮೀನಾರಾಯಣನ ಅನೇಕ ಗುಣಗಳನ್ನು ವರ್ಣಿಸಿ ರಕ್ಷಿಸೆಂದು ಪ್ರಾರ್ಥಿಸಿದ್ದಾರೆ.

**ಶ್ಯಮಲ, ಶಮಲ** : ದೋಷ

## ೨೬

ಜಗದೀಶನಾದ ಶ್ರೀ ವೆಂಕಟೇಶನ ಅನೇಕ ಗುಣಗಳನ್ನು ಗಾನಮಾಡಿ ಅವನನ್ನೇ ನಂಬಿರುವ ತಮ್ಮನ್ನು ಕಾಪಾಡಬೇಕೆಂದು ಪ್ರಾಥಿಸಿದ್ದಾರೆ.

**ಶಶಾಂಕಧರ** : ಶಿವ

**ಖಗಾಂಕ** : ಗರುಡವಾಹನ

**ಪಾಕಶಾಸನ** : ಇಂದ್ರ

**ಪಿನಾಕಿಪಿತ** : ಶಿವನ ತಂದೆಯಾದ ಚತುರ್ಮುಖ ಬ್ರಹ್ಮ.

**ಸುರಜೇಷ್ಠ** : ಮುಖ್ಯದೇವತೆಗಳು.

## -

ಪರಮಾತ್ಮತ ದಶಾವತಾರಾದಿ ವಿವಿಧ ರೂಪಗಳನ್ನು ಉಲ್ಲೇಖಿಸಿ, ಅನೇಕ ಪ್ರಕಾರವಾಗಿ ರಕ್ಷಿಸೆಂದು ಪ್ರಾರ್ಥಿಸಿದ್ದಾರೆ. ಇದು ಶ್ರೀ ಭಾಗವತದಲ್ಲಿ ಬರುವ ನಾರಾಯಣ ಕವಚದ ಅಂಶಗಳನ್ನೊಳೊಂಡಿದೆ

## ೨೮

ದರ್ಶನಾಭಿಲಾಷೆಯನ್ನು ವ್ಯಕ್ತಪಡಿಸಿ, ಮನಸ್ಸಿನಲ್ಲಿ ಬಂದುನಿಲ್ಲೆಂದು ಶ್ರೀವೆಂಕಟೇಶನನ್ನು ಪ್ರಾರ್ಥಿಸಿದ್ದಾರೆ.

೨೯

ದುರಭಿಮಾನ, ವಿಸ್ಮರಣೆ, ಅಜ್ಞಾನಿಗಳ ಪ್ರಭಾವ, ಇತ್ಯಾದಿಗಳಿಗೆ ಒಳಗಾದ ತಮಗೆ ಪಾದಸ್ಮರಣೆಯಿತ್ತು ರಕ್ಷಸಬೇಕೆಂದು ಪ್ರಾರ್ಥಿಸಿದ್ದಾರೆ.

**ಈಷಣತ್ರಯ** : ದಾರೇಷಣ, ಪುತ್ರೇಷಣ, ವಿತ್ತೇಷಣ ಎಂಬ ಹೆಂಡತಿ, ಮಕ್ಕಳು ಮತ್ತು ಹಣ ಎಂಬ ಮೂರು ಮೋಹಗಳು

೩೦

ಶ್ರೀ ಹರಿಯ ರೂಪ, ಗುಣ, ಅವತಾರಾದಿಗಳನ್ನು ವರ್ಣಿಸಿ, ಕೈಹಿಡಿದು ಕಾಪಾಡೆಂದು ಸ್ತೋತ್ರ ಮಾಡಿದ್ದಾರೆ.

**ತ್ರಿಕಕುದ್ಧಾಮ** : ಶ್ವೇತದ್ವೀಪ, ಅನಂತಾಸನ ಮತ್ತು ವೈಕುಂಠವೆಂಬ ಮೂರು ಧಾಮಗಳುಳ್ಳ ಶ್ರೀಹರಿ.

೩೧

ತಮ್ಮನ್ನು ದಾಸತ್ವೇನ ಸ್ವೀಕರಿಸಿ, ಸ್ಮರಣೆ, ಸತ್ಸಂಗ, ಭಾವಶುದ್ಧಿ, ಹರಿದಾಸರ ಸೇವೆ ಇತ್ಯಾದಿಗಳನ್ನು ಕೊಟ್ಟು ಕಾಪಾಡೆಂದು ಶ್ರೀವೇಣು ಗೋಪಾಲ ಕೃಷ್ಣನಲ್ಲಿ ಪ್ರಾರ್ಥಿಸಿದ್ದಾರೆ.

ಬಹುಷಃ ಈ ಪದ ಚಿತ್ರದುರ್ಗದ ಬೆಟ್ಟದಲ್ಲಿರುವ ಶ್ರೀ ಗೋಪಾಲ ಕೃಷ್ಣನನ್ನು ಕುರಿತದ್ದಾಗಿದೆ.

**ತೋಯಜಾಂಬಕ** : ಕಮಲದಂತೆ ಕಣ್ಣುಳ್ಳ

**ಮಾಕಳತ್ರ** : ಲಕ್ಷ್ಮೀಪತಿ

೩೨

ಶ್ರೀ ಹರಿಯ ದಶಾವತಾರಗಳನ್ನು, ಇನ್ನು ಅನೇಕ ರೂಪ ಗುಣಗಳನ್ನು ವರ್ಣಿಸಿ ಸ್ತೋತ್ರ ಮಾಡಿದ್ದಾರೆ.

**ಅವಸ್ಥಾತ್ರಯ** : ಜಾಗ್ರತ, ಸ್ವಪ್ನ, ಸುಷುಪ್ತಿ ಎಂಬ ಮೂರು ಅವಸ್ಥೆಗಳು.

೩೩

ಸತ್ಸಂಗವನ್ನು, ಪಾದಸ್ಮರಣೆಯನ್ನು ಕೊಟ್ಟು ದಾಸಜನರ ಸಂಸಾರ ಕ್ಲೇಶ ಬಂಧಗಳನ್ನು ನಾಶ ಮಾಡೆಂದು ಶ್ರೀ ವೆಂಕಟೇಶನಲ್ಲಿ ಪ್ರಾರ್ಥಿಸಿದ್ದಾರೆ.

೩೪

ಶ್ರೀ ಮಹಾಲಕ್ಷ್ಮಿಯ ಗುಣ ರೂಪಗಳನ್ನು ವರ್ಣಿಸಿ ಸ್ತೋತ್ರ ಮಾಡಿದ್ದಾರೆ.

**ತ್ರಿಗುಣಾಭಿಮಾನಿ** : ಸತ್ವರಜೋ ತಮೋ ಗುಣಗಳಿಗೆ ಅಭಿಮಾನಿ ದೇವತೆ.

**ಸ್ವೇದವಾರಿಯ ಸಂಗವಾಗಲು ಭವ ಭಂಗಹಿಂಗುವುದೇ** : ಸಾಧನಾಂತರ ಶ್ರೀ ಹರಿಯ ಬೆವರಿನ ರೂಪವಾಗಿ ಲಕ್ಷ್ಮ್ಯಾತ್ಮಕ ವಾದ ವಿರಜಾನದಿಯ ಸ್ನಾನದಿಂದ ಸಚ್ಚೇತನರು ಲಿಂಗದೇಹದ ಬಂಧನದಿಂದ ಬಿಡುಗಡೆ ಹೊಂದಿ ಮುಕ್ತರಾಗುತ್ತಾರೆ.

**ಧಾಮತ್ರಯ** : ಶ್ವೇತದ್ವೀಪ, ಅನಂತಾಸನ, ವೈಕುಂಠ ಎಂಬ ಶ್ರೀ ಹರಿಯ ಮೂರು ಧಾಮಗಳು.

**ಕಮಲ ಭವಾಂಡ** : ಬ್ರಹ್ಮಾಂಡ

**ಪದುಮ ಸರೋವಾಸಿನಿ** : ತಿರುಚಾನೂರಿನ ಪದ್ಮಸರೋವರದ ತೀರದಲ್ಲಿರುವ ಪದ್ಮಾವತಿ.

೩೫

ಶ್ರೀ ಲಕ್ಷ್ಮೀದೇವಿಯ ಗುಣ, ರೂಪಗಳನ್ನು ವರ್ಣಿಸಿ ಸ್ತೋತ್ರಗೈದಿದ್ದಾರೆ.

**ನಿತ್ಯಮುಕ್ತಳು** : ಜನನ ಮರಣಾದಿ ದೋಷರಹಿತಳಾಗಿ ಯಾವಕಾಲಕ್ಕು ಯಾವ ಬಂಧನಕ್ಕೂ ಒಳಗಾಗದವಳು.

**ಅಕ್ಷರಳು** : ಯಾವ ವಿಧವಾದ ವೃದ್ಧಿ ಹ್ರಾಸಗಳೂ ಇಲ್ಲದವಳು

**ಕರವೀರ ಪುರ** : ಕೊಲ್ಹಾಪುರ.

**ನಿತ್ಯಾವಿಯೋಗಿನಿ** : ಪರಮಾತ್ಮನನ್ನು ಯಾವ ಕಾಲದಲ್ಲಿಯೂ ಬಿಟ್ಟಿರದವಳು.

೩೬

ಶ್ರೀ ಲಕ್ಷ್ಮೀದೇವಿಯ ಸಹನ ಶಕ್ತಿಯನ್ನು, ಶ್ರೀ ಹರಿಯ ಅವತಾರಗಳನ್ನು ಉಲ್ಲೇಖಿಸುವುದರ ಮೂಲಕ ವಿಡಂಬನಮಾಡಿ ಸುತ್ತಿಸಿದ್ದಾರೆ.

**ಸಮಾಸಮಳು** : ಶ್ರೀಹರಿಗೆ ಕಾಲದೇಶಗಳಲ್ಲಿ ಸಮವ್ಯಾಪ್ತಳು, ಗುಣಗಳಲ್ಲಿ ಅಸಮಳು.

**ಕಡಹನೇರಿದ ಕ್ರಿಯಕೆ** : ಯಮುನಾ ನದಿಯ ತೀರದ ವೃಕ್ಷವನ್ನು ಏರಿದ್ದಕ್ಕೆ (ಕೃಷ್ಣಾವತಾರ)

**ನಗಶಿರಿ** : ತಿರುಪತಿ ಬೆಟ್ಟ, ನಾಗರಾಜ : ಗಜೇಂದ್ರ

**ಅಂಗಜನವೈರಿ** : ಶಿವ,

**ಸ್ವರಮಣ** : ತನ್ನಲ್ಲಿ ತಾನೇ ರಮಿಸುವವನು

**ವಕ್ಷಸ್ಥಳವಾಸಿನಿ** : ಶ್ರೀ ವತ್ಸರೂಪದಲ್ಲಿ ಶ್ರೀಹರಿಯ ಎದೆಯ ಮೇಲಿರುವವಳು.

೩೭

ಶ್ರೀ ವಾಯು ದೇವರ ಮೂಲ ರೂಪದ ಮಹಿಮೆಯನ್ನೂ, ಅವರ ಅಂಗಾಂಗಗಳಲ್ಲಿ ನೆಲೆಸಿರುವ ಶ್ರೀ ಹರಿಯ ರೂಪಗಳನ್ನು, ಅವರ ಆಭರಣಗಳನ್ನು ಆಶ್ರಯಿಸಿ ನೆಲೆಸಿರುವ ಇತರ ದೇವತೆಗಳನ್ನು ವರ್ಣಿಸಿದ್ದಾರೆ.

**ಆಖಣಾಶ್ಮಸಮ** : ತಗುಲಿದ ಮಣ್ಣಿನ ಹೆಂಟೆಯಪುಡಿ ಮಾಡುವ ಕಲ್ಲು ಬಂಡೆಯಂತೆ ಇದು ಶ್ರೀ ವಾಯುದೇವರ ಒಂದು ವೇದೋಕ್ತ ಮಹಿಮೆ.

**ಶಿಂಶುಮಾರ** : ಬ್ರಹ್ಮಾಂಡದಲ್ಲಿ ಕಾಲಚಕ್ರವನ್ನು ನಿಯಂತ್ರಿಸುವ ಶ್ರೀ ಹರಿಯ ಚೋಳಿನ ರೂಪ

೩೮

ಶ್ರೀ ವಾಯು ದೇವರ ಮಹಿಮೆ ಮತ್ತು ಕಾರ್ಯಗಳನ್ನು ವಿವರಿಸಿದ್ದಾರೆ.

ಶ್ರೀ ವಾಯು ದೇವರು ಪರಮಾತ್ಮನ ಆಣತಿಯಂತೆ ನಿಯಮ ಮೀರದೆ ಮಿಕ್ಕ ಎಲ್ಲಾ ತತ್ವಾಭಿಮಾನಿ ದೇವತೆಗಳಿಗೂ ಕಾರ್ಯ ವಿಧಿಸಿ ನಿಯಮನ ಮಾಡುತ್ತಾರೆಂದು ಮೂರನೆ ನುಡಿಯಲ್ಲಿ ಹೇಳಿದ್ದಾರೆ. ಐದು ಮತ್ತು ಆರನೇ ನುಡಿಗಳಲ್ಲಿ ಶ್ರೀ ವಾಯು ದೇವರು ಪ್ರಾಣ, ಅಪಾನ, ವ್ಯಾನ, ಉಪಾನ ಮತ್ತು ಸಮಾನ ಎಂಬ ಐದು ರೂಪಗಳಿಂದ ಮಾಡುವ ಕಾರ್ಯಗಳನ್ನು ಸೂಚಿಸಿದ್ದಾರೆ.

೩೯

ಶ್ರೀ ವಾಯು ದೇವರ ಹನುಮ ಭೀಮ ಮಧ್ವವತಾರಗಳನ್ನು ವರ್ಣಿಸುವ ಪದ. ಒಂದೊಂದು ನುಡಿಯ ಪೂರ್ವಾರ್ಧ ಉತ್ತರಾರ್ಧ ಎರಡರಲ್ಲು ಈ ಮೂರು ಅವತಾರ ಕಾರ್ಯಗಳನ್ನು ಕ್ರಮವಾಗಿ ವಿವರಿಸಿರುವುದು ಈ ಕೃತಿಯ ವೈಶಿಷ್ಟ್ಯ

**ಋಜು** : ದೇವತೆಗಳಲ್ಲಿ ಅತ್ಯಂತ ಶ್ರೇಷ್ಟವಾದ ವರ್ಗ

**ವಾರಣಾಪುರ** : ಹಸ್ತಿನಾಪುರ,

**ಗಜಪುರಾಧಿಪ** : ಹಸ್ತಿನಾಪುರಕ್ಕೆ ರಾಜ

**ಲಾಕ್ಷ್ಯಾಗಾರ** : ಅರಗಿನಮನೆ

**ಕುಂಜರಪುರ** : ಹಸ್ತಿನಾಪುರ

**ರೋಚನ** : ವಾಯು ದೇವರ ಒಂದು ಹೆಸರು

**ಪುರೋಚನ** : ದುರ್ಯೋಧನನ ಮಂತ್ರಿಗಳಲ್ಲೊಬ್ಬ, ಅರಗಿನ ಮನೆ ಕಟ್ಟಿಸಿದವ.

**ಪಾಜಕ ಕ್ಷೇತ್ರ** : ಶ್ರೀ ಮಧ್ವಾಚಾರ್ಯರ ಜನ್ಮಸ್ಥಳ

**ಘಣಿಪರೂಪ** : ಬೆಕ್ಕಿನರೂಪ

**ಬಾಣಸಿಗ** : ಅಡುಗೆಯವನು

**ಪೂರ್ವದೇವರ** : ದೈತ್ಯರ

**ದಾತಾಸ್ತ್ರ** : ಬ್ರಹ್ಮಾಸ್ತ್ರ

**ರೌಪ್ಯಪೀಠ** : ಉಡುಪಿ

**ಸೋಮಶೇಖರನ ಕೇದಾರ ಕಟ್ಟಿದ** : ಹೆದರಿಸಲು ವ್ಯಾಘ್ರ ರೂಪದಿಂದ ಬಂದ ರುದ್ರನನ್ನು ಕೇದಾರ ಕ್ಷೇತ್ರಕ್ಕೆ ಕಳಿಸಿದ.

**ಮಾರ್ಜಾಲ ರೂಪ** : ಬೆಕ್ಕಿನ ರೂಪ

**ಸೂತ್ರಾರ್ಥ** : ಬ್ರಹ್ಮಸೂತ್ರಗಳ ಅರ್ಥ

## ೪೦

ಶ್ರೀ ವಾಯು ದೇವರ ಮಹಿಮೆ ಕಾರ್ಯಗಳನ್ನು ವರ್ಣಿಸಿ ಸ್ತೋತ್ರಮಾಡಿದ್ದಾರೆ

**ಋಜು** : ದೇವತೆಗಳಲ್ಲಿ ಅತ್ಯಂತ ಶ್ರೇಷ್ಠವಾದ ಒಂದುವರ್ಗ

**ಜಯಾಪತಿ** : ಶ್ರೀ ಹರಿಯ ಸಂಕರ್ಷಣನೆಂಬ ರೂಪ

**ಲಲಾಲನೇತ್ರ ಬೆನ್ನಟ್ಟಿ ಬರಲು ಕೇದಾರಕೆ ಅಟ್ಟಿದೆ** : ರುದ್ರನನ್ನು ಕೇದಾರಕ್ಕೆ ಓಡಿಸಿದುದು (ನೋಡಿ ೩೯ರ ಟಿಪ್ಪಣಿ)

## ೪೧

ಮೊದಲಿನ ಎರಡು ನುಡಿಗಳಲ್ಲಿ ಶ್ರೀ ವಾಯು ದೇವರ ಮೂಲ ರೂಪದ ಮಹಿಮೆ ಕ್ರಿಯೆಗಳನ್ನೂ, ಕೊನೆಯ ನುಡಿಯಲ್ಲಿ ಹನುಮ, ಭೀಮ, ಮಧ್ವಾವತಾರ ಕಾರ್ಯಗಳನ್ನು ವರ್ಣಿಸಿದ್ದಾರೆ.

**ಶ್ರೀಶನ ಶಯನ** : ನಾರಾಯಣನ ಹಾಸುಗೆ

**ದ್ರುಪದನಂದನೆ** : ದ್ರೌಪದಿ

**ಮಹದಾನಂದವನ** : ಅಶೋಕ ವನ

## ೪೨

ಮುಖ್ಯಪ್ರಾಣರಾದ ಶ್ರೀ ವಾಯು ದೇವರು ತಮ್ಮ ಪ್ರಾಣ, ಅಪಾನ, ವ್ಯಾನ, ಉದಾನ ಮತ್ತು ಸಮಾನ ಎಂಬ ಐದು ಹೆಸರುಗಳಿಂದಲೂ ಅದೇ ಹೆಸರುಗಳುಳ್ಳ ದಾಸ ಪ್ರಾಣರೆಂಬ

ಬೇರೆ ಐದು ತತ್ವಾಭಿಮಾನಿ ದೇವತೆಗಳಿಂದಲೂ ಜೀವರ ಸ್ಥೂಲ ದೇಹದಲ್ಲಿ ಮಾಡಿ ಮಾಡಿಸುವ ಇಂದ್ರಿಯ ಮೊದಲಾದ ಕಾರ್ಯಗಳನ್ನು ವರ್ಣಿಸಿದ್ದಾರೆ.

**ಸಂಕರುಷಣ ಭವ** : ಶ್ರೀ ಹರಿಯ ಸಂಕರ್ಷಣ ರೂಪದಿಂದ ಹುಟ್ಟಿದವರು

**ತ್ರಿವಿಧ ಜೀವರೊಳು** : ಸಾತ್ವಿಕ, ರಾಜಸ, ತಾಮಸರೆಂಬ ಮೂರು ವಿಧವಾದ ಜೀವರಲ್ಲಿ.

೪೩

ಶ್ರೀವಾಯು ದೇವರು ಹನುಮ, ಭೀಮ, ಮಧ್ವಾವತಾರಗಳಲ್ಲಿ ಸಾಧಿಸಿದ ಕಾರ್ಯಗಳನ್ನೂ, ಪ್ರಾಣ ದೇವನೆನಿಸಿ ಜೀವೋತ್ತಮನಾಗಿ ಸಕಲಜೀವರಲ್ಲೂ ನಿಂತು ನಡೆಸುವ ಕಾರ್ಯಗಳನ್ನೂ ವರ್ಣಿಸಿ ಕೊಂಡಾಡಿದ್ದಾರೆ.

**ಕೃತಿ ರಮಣಸುತೆ** : ಶ್ರೀ ಭಾರತೀದೇವಿ

**ಯಂತ್ರೋದ್ಧಾರ ಹನುಮಂತ** : ಹಂಪಿಯ ಚಕ್ರ ತೀರ್ಥದ ಬಳಿ ಶ್ರೀವ್ಯಾಸತೀರ್ಥರಿಂದ ಪ್ರತಿಷ್ಠಿತವಾಗಿರುವ ಶ್ರೀಹನುಮಂತ ರೂಪ

**ಸಮೀರ** : ವಾಯುದೇವರ ಒಂದು ಹೆಸರು.

**ನೀರಜಾಂಡವ ಕೂರ್ಮರೂಪರೊಳು ನಿಂದುನೀಭಾರವಹಿಸಿ ಮೆರೆದೆ** : ವಾಯು ಕೂರ್ಮನಾಗಿ ಬ್ರಹ್ಮಾಂಡವನ್ನು ಹೊತ್ತುಕೊಂಡು ಪ್ರಸಿದ್ಧನಾದ.

**ಮಾತರಿಶ್ವ** : ವಾಯು ದೇವರ ಒಂದು ಹೆಸರು.

೪೪

ಶ್ರೀ ವಾಯುದೇವರು ಜೀವೊತ್ತಮರಾಗಿ ಇತರ ಸಕಲ ತತ್ವಾಭಿಮಾನಿ ದೇವತೆಗಳನ್ನು ನಿಯಮನ ಮಾಡಿ ಜಗತ್ಕಾರ್ಯ ನಡೆಸುವ ಮಹಿಮೆಯನ್ನು ಕೊಂಡಾಡಿದ್ದಾರೆ.

**ಭೂರ್ಭುವನೆನಿಸುವೆ** : ನಿದ್ರಾಕಾಲದಲ್ಲಿ ತ್ರಿವಿಧ ಜೀವರಲ್ಲಿ ಶ್ರೀವಾಯು ದೇವರು ಮಾಡುತ್ತಿರುವ ಶ್ವಾಸ ಕಾರ್ಯದ ಪ್ರಭೇದಗಳು :

೧. ಸಾತ್ವಿಕರಲ್ಲಿ ಭೂಃಶಬ್ದದಿಂದ, ೨. ರಾಜಸರಲ್ಲಿ ಭೂರ್ಭುವ ಶಬ್ದದಿಂದ, ೩. ತಾಮಸರಲ್ಲಿ ಅಭೂ 'ಅಭೂ' ಶಬ್ದದಿಂದ

೪೫

ಶ್ರವಣ, ಕೀರ್ತನ, ಸ್ಮರಣ, ಪಾದ ಸೇವನ, ಅರ್ಚನೆ, ವಂದನ, ದಾಸ್ಯ, ಸಖ್ಯ, ಆತ್ಮನಿವೇದನೆ ಎಂಬ ನವ ವಿಧ ಭಕ್ತಿಯಯನ್ನು ಕೊಟ್ಟು ಸಲಹೆಂದು ಶ್ರೀವಾಯು ದೇವರನ್ನು ಪ್ರಾರ್ಥಿಸಿದ್ದಾರೆ.

೪೬

ದಯಮಾಡಿ ಪಾಪಗಳನ್ನು ಪರಿಹಾರ ಮಾಡಿ ಸಂಸಾರ ಬಂಧನದಿಂದ ಬಿಡಿಸೆಂದು ಪ್ರಾರ್ಥಿಸಿದ್ದಾರೆ.

**ಪಂಕಜೋದ್ಭವಪದವಿ** : ಬ್ರಹ್ಮಪದವಿ

೪೭

ಶ್ರೀ ವಾಯು ದೇವರ ಅನೇಕ ರೂಪ ಕಾರ್ಯಗಳನ್ನು ವರ್ಣಿಸಿ ರಕ್ಷಿಸೆಂದು ಪ್ರಾರ್ಥಿಸಿದ್ದಾರೆ.

೪೮

ವೇದ, ಉಪನಿಷತ್ತು ಮೊದಲಾದವುಗಳಲ್ಲಿ ಹೇಳಿರುವ ಶ್ರೀ ವಾಯು ದೇವರ ಅಗಾಧ ಮಹಿಮೆಗಳನ್ನೂ, ರೂಪ, ಕಾರ್ಯ ಇತ್ಯಾದಿಗಳನ್ನೂ ಈ ಪದದಲ್ಲಿ ವರ್ಣಿಸಿದ್ದಾರೆ.

**ತ್ರಿಕೋಟಿ ರೂಪನೆ** : ಮೂರು ಕೋಟಿ ರೂಪಗಳುಳ್ಳವನು

**ಅಜಾಂಡ ಖರ್ಪಟ** : ಬ್ರಹ್ಮಾಂಡದ ಚಿಪ್ಪು

**ಈರಪಾದರು** : ದೈತ್ಯರು

**ತನುಗೋಳಕದಲಿ** : ದೇಹಕ ಇಂದ್ರಿಯ ದ್ವಾರಗಳಲ್ಲಿ

**ರಜ್ಜು ರೂಪ** : ಹಗ್ಗದಂತೆ

**ಚಿತ್ಸುಖಮಯ ವಪುಷಾ** : ಚಿದಾನಂದ ಮುಯವಾದ ದೇಹವುಳ್ಳವ

೪೯

ಮೂರು ನುಡಿಗಳಲ್ಲಿ ಶ್ರೀ ವಾಯು ದೇವರ ಹನುಮ ಭೀಮ ಮಧ್ವಾವತಾರಗಳನ್ನು ಕ್ರಮವಾಗಿ ವರ್ಣಿಸಿ ಸ್ತೋತ್ರ ಮಾಡಿದ್ದಾರೆ.

**ಗರಧೃತ** : ವಿಷವನ್ನು ಸ್ವೀಕರಿಸಿದವ

೫೦

ಶ್ರದ್ಧೆ, ಭಕ್ತಿ, ಚಿತ್ತಶುದ್ಧಿ, ಬುದ್ಧಿ ಇತ್ಯಾದಿಗಳನ್ನಿತ್ತು, ಮನಸ್ಸಿನ ಅನುಮಾನಗಳನ್ನು ಪರಿಹರಿಸಿ ಶ್ರೀಹರಿಯ ದರ್ಶನ ಮಾಡಿಸೆಂದು ಶ್ರೀ ಭಾರತೀ ದೇವಿಯನ್ನು ಪ್ರಾರ್ಥಿಸಿದ್ದಾರೆ.

**ಕಾಲಮಾನಿ** : ಕಾಲಕ್ಕೆ ಅಭಿಮಾನಿ

**ಪ್ರದ್ಯುಮ್ನ ಕುವರಿ** : ಲಕ್ಷ್ಮೀನಾರಾಯಣರ ರೂಪಗಳಾದ ಕೃತಿ ಪ್ರದ್ಯುಮ್ನರ ಮಗಳು

**ಚಿತ್ತಜ** : ಕಾಮದೇವ.

೫೧

ಶ್ರೀ ಹರಿಯಲ್ಲಿ ಮನಸ್ಸನ್ನು ನಿಲ್ಲಿಸಿ, ಅವನ ದಾಸ್ಯವನ್ನು ಕೊಡಿಸಿ ಆಪತ್ತುಗಳನ್ನು ನಿವಾರಿಸೆಂದು ಶ್ರೀ ರುದ್ರ ದೇವನನ್ನು ಪ್ರಾರ್ಥಿಸಿದ್ದಾರೆ.

**ನಿರ್ಜರೇಶನ ಬಿಂಬ** : ದೇವೇಂದ್ರನ ಬಿಂಬ.

**ತ್ರ್ಯಂಬಕ** : ಮುಕ್ಕಣ್ಣ, ರುದ್ರ,

**ಶಂಬರಾಂತಕ** : ಕಾಮದೇವ,

**ತ್ರ್ಯಕ್ಷಮೂರುತಿ** : ಮೂರು ಕಣ್ಣುಳ್ಳವ

೫೨

ಶ್ರೀ ರುದ್ರದೇವರ ಮಹಿಮೆಯನ್ನು, ಅವತಾರ ರೂಪಗಳನ್ನೂ, ವರ್ಣಿಸಿ ಸ್ತೋತ್ರ ಮಾಡಿದ್ದಾರೆ

**ತ್ರಿಪುರ** : ತ್ರಿಪುರಾಸುರರು

**ಅಂಗಜಹರ ಭಸಿತಾಂಗ** : ಮನ್ಮಥನನ್ನು ಸುಟ್ಟು ಬೂದಿಯನ್ನು ಲೇಪಿಸಿಕೊಂಡ.

**ಪ್ರದ್ಯುಮ್ನ ಸುತೆಯ** : ಶ್ರೀ ಭಾರತೀ ದೇವಿಯ

**ಹೈಮವತಿ** : ಪಾರ್ವತಿ

೫೩

ಶ್ರೀ ಶಂಕರನ ಸೇವಕರು ತಾವೆಂದು ಹೇಳಿಕೊಳ್ಳುತ್ತ, ಅವನ ರೂಪವನ್ನೂ, ಮಹಿಮೆಯನ್ನೂ ಬಣ್ಣಿಸಿ ಸ್ತೋತ್ರ ಮಾಡಿದ್ದಾರೆ.

**ಪಂಕಜಾಸನ ಕುವರ** : ಬ್ರಹ್ಮನಮಗ

**ನಿಟಲನಯನ** : ಹಣೆಗಣ್ಣ,

**ಸೋಮಧರಾ** : ಚಂದ್ರಶೇಖರ

**ಹೃತ್ತಟದಿ** : ಹೃದಯವೆಂಬ ನಿಲುಗಡೆಯ ಸ್ಥಳದಲ್ಲಿ

**ಸುರನದೀಧರ** : ಗಂಗಾಧರ,

**ಕರಿಗೊರಳ** : ನೀಲಕಂಠ

**ಕಂದರ್ಪಹರ** : ಕಾಮನನ್ನು ಸುಟ್ಟವನು

**ಶಂಬರಾಂತಕ** : ಮನ್ಮಥ,

**ಭಸಿತಧರ** : ಭಸ್ಮಧಾರಿ.

**೫೪**

ಶ್ರೀ ಜಯತೀರ್ಥರ ಅವತಾರ, ಅವರ ಕಾರ್ಯಕ್ಷೇತ್ರ, ರಚಿಸಿದ ಗ್ರಂಥಗಳು ಇತ್ಯಾದಿಗಳನ್ನು ಉಲ್ಲೇಖಿಸುತ್ತ, ಸಮುದ್ರಮಥನ ಕಾಲದಲ್ಲಿ ಹುಟ್ಟಿಬಂದ ವಸ್ತುಗಳಿಗೆ ಅವರ ಗ್ರಂಥಗಳನ್ನು ಹೋಲಿಸುತ್ತ ಸ್ತೋತ್ರ ಮಾಡಿ ತಮ್ಮನ್ನು ರಕ್ಷಿಸಬೇಕೆಂದು ಪ್ರಾರ್ಥಿಸಿದ್ದಾರೆ.

**ಮಘವಾನ** : ಇಂದ್ರ,

**ಕುಕರ್ವಿಣಿ** : ಕಾಗಿಣೀನದಿ

**ಯರಗೋಳ** : ಶ್ರೀ ಜಯತೀರ್ಥರು ಗ್ರಂಥರಚನೆ ಮಾಡಿದಾಗ ನೆಲೆಸಿದ್ದ ಊರು

**೫೫**

ಶ್ರೀ ಟೀಕಾಚಾರ್ಯರೆಂದೇ ಪ್ರಸಿದ್ಧರಾದ ಶ್ರೀ ಜಯತೀರ್ಥರನ್ನು ಅವರ ಹಿಂದಿನ ಅವತಾರಗಳು ಮತ್ತು ಈ ಅವತಾರರಲ್ಲಿ ಶ್ರೀಮನ್ಯಾಯಸುಧಾದಿ ಗ್ರಂಥಗಳ ರಚನೆ, ಸಾಧಿಸಿದ ಕಾರ್ಯಗಳು. ಇವುಗಳನ್ನು ಸೂಚಿಸಿ ಕೊಂಡಾಡಿದ್ದಾರೆ.

**ಶ್ರೀಶಶಯನನಾವೇಶ** : ಆದಿಶೇಷನ ಆವೇಶವುಳ್ಳವರು,

**ಮಾಹೇಶ ಪ್ರತಿಬಿಂಬ** : ರುದ್ರದೇವನನ್ನು ಬಿಂಬನಾಗಿ ಉಳ್ಳ ಇಂದ್ರದೇವ.

೩ನೇ ನುಡಿಯಲ್ಲಿ ಶ್ರೀ ಜಯತೀರ್ಥರನ್ನು ಶ್ರೀ ವಿಜಯದಾಸರಲ್ಲಿ ತಮ್ಮ ಮನವೆರಗಲು ಕಾರಣೀ ಭೂತರಾದವರೆಂದು ತಮ್ಮ ಆತ್ಮಾನುಭವವನ್ನ ಹೇಳಿಕೊಂಡಿದ್ದಾರೆ.

**ಮೋದತೀರ್ಥರು** : ಶ್ರೀಮಧ್ವಾಚಾರ್ಯರು

**ಮಧ್ವರಾಯರಿಗೀ ಮುದ್ದು ಮೊಮ್ಮಗ** : ಶ್ರೀ ಮಧ್ವಾ ಚಾರ್ಯರ ನೇರ ಶಿಷ್ಯರಾದ ಶ್ರೀ ಅಕ್ಷೋಭ್ಯ ತೀರ್ಥರ ಶಿಷ್ಯರಾದ ಕಾರಣ ಮೊಮ್ಮಗನ ಸಮಾನ. ಹಾಗೂ, ವಾಯುವಿನ ಅವತಾರರಾದ ಶ್ರೀ ಮಧ್ವಾಚಾರ್ಯರಿಗೆ, ರುದ್ರನ ಮಗನಾದ ಇಂದ್ರನ ಅವತಾರರಾದ ಜಯತೀರ್ಥರು ಮೊಮ್ಮಗನಂತೆ.

**ಎತ್ತಾಗಿ ಸೇವಿಸಿ** : ಶ್ರೀಜಯತೀರ್ಥರು ಹಿಂದಿನ ಜನ್ಮದಲ್ಲಿ ಎತ್ತಿನ ರೂಪದಿಂದ ಶ್ರೀ ಮಧ್ವಾಚಾರ್ಯರ ಗ್ರಂಥಗಳನ್ನು ಹೊರುವುದರ ಮೂಲಕ ಅವರ ಸೇವೆ ಮಾಡಿದ್ದರು.

**ಮಳಖೇಡ** : ಗುಲ್ಬರ್ಗಾ ಜಿಲ್ಲೆಯಲ್ಲಿ ಶ್ರೀ ಜಯತೀರ್ಥರ ವೃಂದಾವನವಿರುವ ಊರು.

೫೬

ಶ್ರೀ ಜಯತೀರ್ಥರನ್ನು ದೇಶಪಾಂಡೆ ವಂಶದಲ್ಲಿ ಜನಿಸಿದವರೆಂದೂ, ಶೇಷಾವೇಶರೆಂದೂ, ಪೂರ್ವದಲ್ಲಿ ಎತ್ತಾಗಿ ಶ್ರೀ ಮಧ್ವಾಚಾರ್ಯರ ಗ್ರಂಥಗಳನ್ನು ಹೊತ್ತು ತಿರುಗಿ ಸೇವೆ ಸಲ್ಲಿಸಿರುವವರೆಂದೂ, ಸನ್ಯಾಸಿಗಳಾಗಿ ಸುಧಾ ಮೊದಲಾದ ಗ್ರಂಥಗಳನ್ನು ರಚಿಸಿ ಸಜ್ಜನರಿಗೆ ಉಪಕಾರ ಮಾಡಿದವರೆಂದೂ ಸ್ತೋತ್ರ ಮಾಡಿದ್ದಾರೆ.

**ಬೋಧರ ಕಿಂಕರ** : ಪೂರ್ಣಬೋಧರೆಂದು ಪ್ರಸಿದ್ಧರಾದ ಶ್ರೀ ಮಧ್ವಾಚಾರ್ಯರ ಸೇವಕ.

೫೭

ಶ್ರೀ ಟೀಕಾಚಾರ್ಯರೆಂದೇ ಪ್ರಸಿದ್ಧರಾದ ಶ್ರೀಜಯತೀರ್ಥರನ್ನು ಇಂದ್ರನ ಅವತಾರರೆಂದೂ, ಶೇಷಾವೇಶರೆಂದೂ, 'ಶ್ರೀಸುಧಾ' ಮೊದಲಾದ ಗ್ರಂಥಗಳನ್ನು ರಚಿಸುವುದರ ಮೂಲಕ ಮಿಥ್ಯಾವಾದವನ್ನು ನಿರಸನಮಾಡಿ ಶ್ರೀ ಮಧ್ವಾಚಾರ್ಯರ ಸೇವೆ ಮಾಡಿದವರೆಂದು ಅನೇಕವಾಗಿ ಸ್ತುತಿಸಿ ಅವರ ಅನುಗ್ರಹವನ್ನು ಕೋರಿದ್ದಾರೆ.

**ಕಾಕಾರ ಸರಿತವಾಸ** : ಕಾಗಿಣೀನದಿ ತೀರದ ಮಳಖೇಡ ವಾಸ

**ಪಾಕಶಾಸನ** : ಇಂದ್ರ

**ಅಲವಬೋಧರು** : ಶ್ರೀ ಮಧ್ವಾಚಾರ್ಯರು

**ಅಕ್ಷೋಭ್ಯತೀರ್ಥರು** : ಶ್ರೀಜಯತೀರ್ಥರ ಗುರುಗಳು

**ಯತಿಹರ್ಯಕ್ಷ** : ಯತಿಗಳಲ್ಲಿ ಸಿಂಹದಂತಿರುವವರು.

೫೮

ಶ್ರೀ ರಾಘವೇಂದ್ರ ತೀರ್ಥರನ್ನು ಅವರ ಮಹಿಮೆಗಳು ಮತ್ತು ಅವತಾರಗಳನ್ನು ಉಲ್ಲೇಖಿಸಿ ಸ್ತೋತ್ರಗೈದಿದ್ದಾರೆ

೫೯

ಇದು ಶ್ರೀ ಶ್ರೀಪಾದರಾಜ ಮಠದ ಯತಿ ಪರಂಪರೆಯ ಶ್ರೀ ಪ್ರಜ್ಞಾನಿಧಿತೀರ್ಥರ ಸ್ತೋತ್ರ.

## ೬೦

ಶ್ರೀ ವಿಜಯದಾಸರನ್ನು ಅವರ ಅವತಾರಗಳ ಮತ್ತು ಕಾರ್ಯಗಳ ವಿವರಣೆ ಮೂಲಕ ಸ್ತೋತ್ರ ಮಾಡಿದ್ದಾರೆ.

## ೬೧

ಶ್ರೀ ಜಗನ್ನಾಥದಾಸರನ್ನು ಸಹ್ಲಾದಾಂಶರೆಂದೂ ಕನ್ನಡದಲ್ಲಿ ಶ್ರೀ ಹರಿಕಥಾಮೃತಸಾರವೆಂಬ ಗ್ರಂಥ ರಚಿಸಿ ಸಜ್ಜನರಿಗೆ ಮಹೋಪಕಾರ ಮಾಡಿದವರೆಂದೂ ಕೊಂಡಾಡಿದ್ದಾರೆ.

**ಪ್ರಾಕೃತದೊಳು** : ಪ್ರಾಕೃತ ಭಾಷೆಯಾದ ಕನ್ನಡದಲ್ಲಿ

## ೬೨

ತಮ್ಮ ಮನಸ್ಸಿನಲ್ಲಿದ್ದ ಕುಂದು ಕೊರತೆಗಳನ್ನು ಸಂಶಯಗಳನ್ನು ಪರಿಹಾರ ಮಾಡಿ ತಮಗೆ ಅಂಕಿತೋಪದೇಶವಿತ್ತು ಮಾರ್ಗದರ್ಶನ ಮಾಡಿದ ಗುರುಗಳ ದಯೆಕೋರಿ ಸ್ತೋತ್ರ ಮಾಡಿದ್ದಾರೆ.

**ನಾಗರಾಯಾಖ್ಯ** : ಸುಬ್ಬರಾಯನೆಂಬ ಹೆಸರುಳ್ಳ

## ೬೩

ತಮಗೆ ಸ್ವಪ್ನದಲ್ಲಿ ಪರಮಾತ್ಮನ ದರ್ಶನವಾದುದನ್ನೂ "ಶ್ರೀ ಪರಮಹಂಸ" ರಿಂದ ತಮಗೆ ತತ್ವರಹಸ್ಯಗಳು ತಿಳಿಸಲ್ಪಟ್ಟದ್ದನ್ನೂ ತಿಳಿಸಿ, ತಮ್ಮಲ್ಲಿರುವ ಅನೇಕ ದೋಷಗಳನ್ನು ಹೇಳಿಕೊಂಡು ಅವುಗಳನ್ನು ಲಕ್ಷಿಸದೆ ತಮ್ಮ ಕಷ್ಟಗಳನ್ನು ಪರಿಹರಿಸಿ ಕಾಪಾಡಬೇಕೆಂದು ಪರಮಾತ್ಮನನ್ನು ಪ್ರಾರ್ಥಿಸಿದ್ದಾರೆ.

**ತೈಜಸ** : ಶ್ರೀಹರಿಯ ಸ್ವಪ್ನ ನಿಯಾಮರೂಪಕ

**ಅಷ್ಟಕರ್ತತ್ವ** : ಸೃಷ್ಟಿ, ಸ್ಥಿತಿ, ಲಯ, ನಿಯಮನ, ಜ್ಞಾನ, ಅಜ್ಞಾನ ಬಂಧ ಮತ್ತು ಮೋಕ್ಷ ಎಂಬ ಎಂಟು ಕ್ರಿಯೆಗಳನ್ನು ನಡೆಸುವವನು

**ಅಷ್ಟಾಂಗಯೋಗ** : ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ ಮತ್ತು ಸಮಾಧಿ ಎಂಬ ಎಂಟು ಅವಯಗಳುಳ್ಳ ಯೋಗ ಪ್ರಕ್ರಿಯೆ

## ೬೪

ತಮ್ಮ ಆಯುಸ್ಸಿನ ಬಹಳ ಭಾಗ ಉಪಯೋಗವಿಲ್ಲದ, ದೋಷಯುಕ್ತವಾದ ಕಾರ್ಯಗಳಲ್ಲಿ ಕಳೆದುಹೋಗಿ ಇಂದ್ರಿಯಗಳು ಸವೆದುಹೋಗಿರುವುವೆಂದೂ, ಈಗಲಾದರೂ

ನಿನ್ನ ಸ್ಮರಣೆ ದರ್ಶನಗಳನ್ನು ಕೊಟ್ಟು ಕರುಣ ತೋರಿಸೆಂದು ಶ್ರೀ ವೆಂಕಟೇಶನಲ್ಲಿ ಪ್ರಾರ್ಥನೆ ಸಲ್ಲಿಸಿದ್ದಾರೆ.

**೬೫**

ನಾನು, ನನ್ನದು ಎಂಬ ಅಭಿಮಾನದಿಂದ ತುಚ್ಛವಾದ ಕರ್ಮಗಳಲ್ಲಿ ಸಿಕ್ಕು ತೊಂದರೆಗೊಳಗಾಗಿರುವ ತಮಗೆ ದಾರಿ ತೋರಿ ಉದ್ಧರಿಸಬೇಕೆಂದು ಪ್ರಾರ್ಥಿಸಿದ್ದಾರೆ.

**ಪೂರ್ಣಬೋಧ** : ಶ್ರೀಮಧ್ವಾಚಾರ್ಯ

**೬೬**

ಯಮ, ನಿಯಮ, ಆಸನ, ಪ್ರಾಣಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ ಮತ್ತು ಸಮಾಧಿ ಎಂಬ ಅಷ್ಟಾಂಗ ಯೋಗದ ಅಂಗಗಳನ್ನು ವರ್ಣಿಸಿ, ತಮಗೆ ಅವುಗಳೊಂದೂ ತಿಳಿಯವೆಂದೂ, ಆದರೂ ಕರುಣೆಯಿಂದ ತಮ್ಮನ್ನು ಕಾಪಾಡಬೇಕೆಂದು ಪರಮಾತ್ಮನನ್ನು ಪ್ರಾರ್ಥಿಸಿದ್ದಾರೆ.

**ಅದ್ವೈತತ್ರಯ** : ಕ್ರಿಯಾದ್ವೈತ, ಭಾವಾದ್ವೈತ ದ್ರವ್ಯಾದ್ವೈತ

**ಕರಣತ್ರಯ** : ದೇಹ, ಮಾತು, ಮನಸ್ಸು

**೬೭**

ತಮ್ಮ ಗುರುಗಳಾದ ಶ್ರೀ ತಂದೆ ಮುದ್ದುಮೋಹನ ವಿಠಲ ದಾಸರಿಂದ ಉಪದೇಶ, ಅಂಕಿತಗಳನ್ನು ಪಡೆದ ರೀತಿಯನ್ನು ವರ್ಣಿಸಿದ್ದಾರೆ.

**೬೮**

ತಮಗೆ ತಿರುಪತಿ ಶ್ರೀವೆಂಕಟೇಶನ ದರ್ಶನವಾದ ದಿನವನ್ನೂ, ಸಂದರ್ಭವನ್ನೂ ಸೂಚಿಸಿ ಸ್ತೋತ್ರ ಮಾಡಿದ್ದಾರೆ.

**ಮೋದನಾಮ ಸಂವತ್ಸರ** : ಆನಂದ ನಾಮ ಸಂವತ್ಸರ

**೬೯**

ತಾವು ಸೃಷ್ಟಿಗೆ ಬಂದದ್ದು ವ್ಯರ್ಥವಾಯಿತೆಂದು ತಮ್ಮನ್ನೇ ಅನೇಕ ಪ್ರಕಾರಗಳಲ್ಲಿ ಮೂದಲಿಸಿಕೊಂಡು, ಕರುಣೆ ತೋರಿಸದಿದ್ದರೆ ಫಲವೇನೆಂದು ಶ್ರೀಹರಿಯನ್ನು ಕೇಳಿದ್ದಾರೆ.

**೭೦**

ಇದು ತಮಗೆ ದತ್ತವಾಗಿದ್ದ "ಶ್ರೀವೆಂಕಟೇಶಾಂ" ಕಿತವನ್ನು ಸ್ವಪ್ನ ಸೂಚನೆಗಳ ಪ್ರಕಾರ ತಮ್ಮ ಪರಮಪ್ರಿಯ ಶಿಷ್ಯರಾದ ಚಿತ್ರದುರ್ಗದ ಆರ್. ರಾಮಚಂದ್ರರಾಯರು (ಶ್ರೀ ತಂದೆ ವೆಂಕಟೇಶ ವಿಠಲ ದಾಸರು) ಇವರಿಗೆ ವರ್ಗಾಯಿಸಿದ ಸಂದರ್ಭಕ್ಕೆ ಸಂಬಂಧಪಟ್ಟ ಪದ.

## ೭೧

ತಾವು ಎಸಗಿದ ಕೆಲವು ಅಪರಾಧಗಳನ್ನು ಸ್ಮರಿಸಿಕೊಂಡು ಅವುಗಳನ್ನು ಲೆಕ್ಕಿಸದೆ ತಮ್ಮನ್ನು ಮನ್ನಿಸಿ ಕಾಪಾಡಬೇಕೆಂದು ಪ್ರಾರ್ಥಿಸಿದ್ದಾರೆ.

## ೭೨

ಸತತವಾಗಿ ಶ್ರೀ ಹರಿಗುರು ಭಕ್ತಿಯನ್ನು ಶ್ರೀ ಮಧ್ವಮತ ತತ್ವಗಳ ಜ್ಞಾನವನ್ನೂ, ಶ್ರೀ ಹರಿಸ್ಮರಣೆಯನ್ನು ಕೊಟ್ಟು ತಮ್ಮನ್ನು ದಾಸನೆಂದು ಸ್ವೀಕರಿಸೆಂದು ಪ್ರಾರ್ಥನೆ ಮಾಡಿದ್ದಾರೆ.

**ಕರಣತ್ರಯ** : ಕಾಯ, ವಾಚ, ಮನಸಾ

**ಪಂಚಭೇದ** : ಜೀವ–ಈಶ, ಜೀವ–ಜಡ, ಜೀವ–ಜೀವ, ಈಶ–ಜಡ ಮತ್ತು ಜಡ–ಜಡ ಎಂಬ ಐದು ಭೇದಗಳು

**ತಾರತಮ್ಯ** : ಹೆಚ್ಚು–ಕಡಿಮೆ, ಉತ್ತಮ–ಅಧಮ ಎಂಬ ಭಾವನೆ.

**ಮಾಕಳತ್ರ** : ಲಕ್ಷ್ಮೀಪತಿ

## ೭೩

ತಮಗೆ ಜ್ಞಾನೋಪದೇಶ ಮಾಡುವ ಗುರು ಇನ್ನೂ ದೊರಕಿಲ್ಲವೆಂದೂ, ಅಂಕಿತವು ದೊರೆಯುವಂತೆ ಅನುಗ್ರಹಿಸಬೇಕೆಂದೂ ಶ್ರೀ ಹರಿಯನ್ನು ಪ್ರಾರ್ಥಿಸಿದ್ದಾರೆ.

**ಭೂಧನಾಯೋಷಿತ ವಾಂಛಿತ** : ಭೂಮಿ, ಹಣ ಮತ್ತು ಸ್ತ್ರೀಯಲ್ಲಿ ಆಸಕ್ತಿ

## ೭೪

ದ್ವೇಷಿಸುವವರನ್ನು ಗೌರವದಿಂದ ಕಾಣಬೇಕೆಂಬ ಲೋಕನೀತಿಯನ್ನ ತಿಳಿಸಿದ್ದಾರೆ.

**ಅರಿಷಡ್ವರ್ಗಗಳು** : ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ

**ತ್ರಿಗುಣಗಳು** : ಸತ್ವ, ರಜಸ್ಸು, ತಮಸ್ಸು.

## ೭೫

ಜಪ, ತಪ, ಪೂಜೆ ಇತ್ಯಾದಿಗಳಲ್ಲಿ ಅಕ್ಷರಾಭಿಮಾನಿ ಭಗವದ್ರೂಪಗಳು ದೇಹದ ನಾನಾ ಸ್ಥಾನಗಳಲ್ಲಿ ಇರುತ್ತವೆಂದು ತಿಳಿದು ಆ ಭಗವದ್ರೂಪಗಳನ್ನು ಧ್ಯಾನಿಸುವುದು ಮಾತೃಕಾನ್ಯಾಸವೆನಿಸುತ್ತದೆ. ಇದು ತಂತ್ರಶಾಸ್ತ್ರಕ್ಕೆ ಸಂಬಂಧಿಸಿದ ವಿಷಯ.

ಅಕ್ಷರಗಳು, ಅವುಗಳ ಅಭಿಮಾನೀ ಭಗವದ್ರೂಪಗಳು ಮತ್ತು ಅವುಗಳನ್ನು ಚಿಂತಿಸಬೇಕಾದ ಸ್ಥಾನಗಳ ನಿರ್ದೇಶನ ಈ ಪದದಲ್ಲಿದೆ.

## ೭೬

ಶ್ರೀಹರಿಯು ತನ್ನ ನಾರಾಯಣ, ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಮತ್ತು ಅನಿರುದ್ಧ ಎಂಬ ಐದು ರೂಪಗಳಿಂದ ಸೃಷ್ಟಿ, ಸ್ಥಿತಿ, ಲಯಾದಿಗಳಲ್ಲಿ ನಡೆಸುವ ವ್ಯಾಪಾರಗಳನ್ನು ವರ್ಣಿಸಿದ್ದಾರೆ.

**ಈಶಕೋಟಿ ಪ್ರವಿಷ್ಟೆ** : ಶ್ರೀ ಮಹಾಲಕ್ಷ್ಮೀ

## ೭೭

ಇದು ಸುವಾಲಿ ಮಟ್ಟಿನ ಕೃತಿ.

ಓಂಕಾರ ಪ್ರತಿಪಾದ್ಯನಾದ ಶ್ರೀಲಕ್ಷ್ಮೀ ನಾರಾಯಣನು ವಿವಿಧ ರೂಪಗಳಿಂದ ನಡೆಸುವ ಅನೇಕ ಪ್ರಕಾರದ ಕಾರ್ಯಗಳನ್ನು ವರ್ಣಿಸುತ್ತಾ ದಯತೋರಿ ತಮ್ಮನ್ನು ಸಲಹೆಂದು ಅವನನ್ನು ಪ್ರಾರ್ಥಿಸಿದ್ದಾರೆ.

**ದ್ವಾತ್ರಿಂಶಲ್ಲಕ್ಷಣ** : ದೇಹದ ಮೂವತ್ತೆರಡು ಲಕ್ಷಣಗಳು ಯಾವ ದೋಷವೂ ಇಲ್ಲದ ದೇಹ ಇದುಋಜುಗಳೆಂಬ ಜೀವಗಣ ದೇಹ ಲಕ್ಷಣ.

**ಮೃತ್ತಿಕಾಪ್ರತಿಮೆ** : ಮಣ್ಣಿನಗೊಂಬೆ

## ೭೮

ಓಂಕಾರದ ಅ, ಉ, ಮ, ನಾದ, ಬಿಂದು, ಘೋಷ, ಶಾಂತ, ಅತಿಶಾಂತ, ಎಂಬ ಎಂಟು ಅವಯವಗಳನ್ನು, ಅವುಗಳಿಂದ ಕ್ರಮವಾಗಿ ಪ್ರತಿಪಾದ್ಯಗಳಾದ ವಿಶ್ವ, ತೈಜಸ, ಪ್ರಾಜ್ಞ. ತುರ್ಯ, ಆತ್ಮ, ಅಂತರಾತ್ಮ, ಪರಮಾತ್ಮ ಮತ್ತು ಜ್ಞಾನಾತ್ಮ ಎಂಬ ನಾರಾಯಣನ ರೂಪಗಳನ್ನೂ ವರ್ಣಿಸಿದ್ದಾರೆ.

## ೭೯

ಇದು ಒಂದು ಸುಳಾದಿ. ದ್ವೈತ ಸಿದ್ಧಾಂತದ ಪ್ರಕಾರ ಕ್ಷೇತ್ರ ಕ್ಷೇತ್ರಜ್ಞರ ಜಿಜ್ಞಾಸೆ ಇಲ್ಲಿದೆ.

## ೮೦

ಇದು ಸೃಷ್ಟಿ ಪ್ರಕರಣ ವಿವರಿಸುವ ಕೃತಿ.

ಪ್ರಳಯೋದಕದಲ್ಲಿ ಆಲದೆಲೆಯ ಮೇಲೆ ಬಾಲ ರೂಪದಲ್ಲಿ ಯೋಗ ನಿದ್ರೆಯಲ್ಲಿದ್ದ ನಾರಾಯಣನನ್ನು ಸೃಷ್ಟಿ ಕಾರ್ಯದಲ್ಲಿ ತೊಡಗೆಂದು ಶ್ರೀ ದುರ್ಗಾರೂಪದ ಶ್ರೀ ಮಹಾಲಕ್ಷ್ಮಿಯು ಪ್ರಾರ್ಥನೆ ಮಾಡಲು ತಾನು ಎಚ್ಚರಗೊಂಡವನಂತೆ ತೋರಿ, ಕ್ರಮವಾಗಿ ಶುದ್ಧ, ಪರಾಧೀನ ವಿಶೇಷ, ಮಿಶ್ರ, ಕೇವಲ, ಪ್ರಾಕೃತ ವೈಕೃತ, ಪಾದ್ಮ (ಬ್ರಹ್ಮಾಂಡ) ಇತ್ಯಾದಿ ಅನೇಕ ಪ್ರಕಾರದ ಸೃಷ್ಟಿಗಳನ್ನು ಮಾಡಿದ ವಿವರಣೆ ಇಲ್ಲಿದೆ. ಸೃಷ್ಟಿ, ಲಯ ಪ್ರಕರಣದ ವಿವರಣೆ ಮೂಲತಃ

ವೇದ ಉಪನಿಷತ್ತುಗಳಲ್ಲಿದ್ದು, ಭಾಗವತ ವಿಷ್ಣು ರಹಸ್ಯ, ಮೊದಲಾದ ಪುರಾಣಗಳಲ್ಲೂ ವಿವರಿಸಲ್ಪಟ್ಟಿದೆ. ಕನ್ನಡದಲ್ಲಿ ಶ್ರೀವಿಜಯದಾಸರು ಸೃಷ್ಟಿಪ್ರಕರಣ ಕುರಿತು ಅನೇಕ ಸುಳಾದಿಗಳನ್ನು ರಚಿಸಿದ್ದಾರೆ. ಅವುಗಳೆಲ್ಲದರ ಸಾರಾಂಶ ಈ ಪದ ಮತ್ತು ಮುಂದಿನ ಪದದಲ್ಲಿದೆ.

**ವಾಸುದೇವಾದಿ ಚತುರ ರೂಪಗಳು** : ವಾಸುದೇವ, ಪ್ರದ್ಯುಮ್ನ, ಅನಿರುದ್ಧ, ಸಂಕರ್ಷಣ.

**೮೧**

ಬ್ರಹ್ಮಕಲ್ಪದ ಅಂತ್ಯದಲ್ಲಿ ನಡೆಯುವ ಲಯವನ್ನು ವರ್ಣಿಸಿದ್ದಾರೆ. ಪದ ೮೦ರಲ್ಲಿ ವಿವರಿಸಿದ ಸೃಷ್ಟಿ 'ಕ್ರಮ'ವಾದರೆ, ಇಲ್ಲಿ ವಿವರಿಸಿರುವ ಲಯ ವ್ಯುತ್ಕ್ರಮ

**೮೨**

ವೈಷ್ಣವರು ಧರಿಸಬೇಕಾದ ದ್ವಾದಶನಾಮ ಪಂಚಮುದ್ರೆಗಳನ್ನು ಧರಿಸುವ ಕ್ರಮ, ಸಂಬಂಧ ಪಟ್ಟ ಭಗವದ್ರೂಪಗಳು ಮತ್ತು ಧರಿಸುವುದರಿಂದ ದೊರೆಯುವ ಫಲ ಇತ್ಯಾದಿಗಳನ್ನು ವಿವರಿಸಿದ್ದಾರೆ.

**೮೩**

ಜೀವರುಗಳ ಸ್ಥೂಲ ದೇಹದ ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನ ಮಯ ಮತ್ತು ಆನಂದಮಯ ಎಂಬ ಐದು ಕೋಶಗಳಲ್ಲಿ ಕ್ರಮವಾಗಿ ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ ಮತ್ತು ನಾರಾಯಣನೆಂಬುದಾಗಿ ಇರುವ ಶ್ರೀಹರಿಯ ಐದು ರೂಪಗಳನ್ನು, ಅವುಗಳ ಕಾರ್ಯವನ್ನು ವಿವರಿಸಿ ಸ್ತೋತ್ರ ಮಾಡಿದ್ದಾರೆ.

**೮೪**

ಇದು ಸೃಷ್ಟಿ ಲಯಗಳ ಸಂಕ್ಷೇಪ ವಿವರಣೆಯ ಜೊತೆಗೆ ಇನ್ನೂ ಅನೇಕ ಶಾಸ್ತ್ರ ವಿಚಾರಗಳನ್ನು ವಿವರಿಸುವ ಕೃತಿ.

ಮೂಲ ಜಡ ಪ್ರಕೃತಿಯ ತ್ರಿಗುಣಗಳಾದ ಸತ್ವ, ರಜ, ತಮಗಳ ವಿಷಮತೆ ಮತ್ತು ಅವುಗಳ ಅನೇಕ ಪ್ರಕಾರದ ಮಿಶ್ರಣಗಳಿಂದ ಪಂಚಭೂತಾದಿ ತತ್ವಗಳ ಸೃಷ್ಟಿ, ಅವುಗಳ ಕಾರ್ಯಗಳು ಮತ್ತು ವ್ಯುತ್ಕ್ರಮದಲ್ಲಿ ತತ್ವಗಳ ಲಯ ಇತ್ಯಾದಿಗಳನ್ನು ವರ್ಣಿಸಿದ್ದಾರೆ.

**೮೫**

ಊಟ (ಪ್ರಾಣಗ್ನಿ ಹೋತ್ರ) ಮತ್ತು ಒಂದು ಯಜ್ಞದ ಪರಿಕರ ಪ್ರಕ್ರಿಯೆಗಳಿಗೆ ಸಾಮ್ಯವನ್ನು ಹೇಳಿ ತಾವು ತಿನ್ನುವುದೆಲ್ಲಾ ಒಂದು ಯಜ್ಞದಂತಾಗಿ ಶ್ರೀಹರಿಯು ತೃಪ್ತನಾಗಲೆಂದು ಪ್ರಾರ್ಥಿಸಿದ್ದಾರೆ.

**ಅಜಪಿತ** : ಬ್ರಹ್ಮನ ತಂದೆ–ನಾರಾಯಣ–ಶ್ರೀಹರಿ

## ೮೬

ಶ್ರೀ ಹರಿಯ ಸರ್ವೋತ್ತಮತ್ವವನ್ನೂ, ಸರ್ವಕರ್ತೃತ್ವವನ್ನೂ ಪ್ರತಿ ಪಾದಿಸುವ ಈ ಕೃತಿಯಲ್ಲಿ ಜಗತ್ತನ್ನೂ, ಜೀವರಸ್ಥೂಲ ದೇಹವನ್ನು ಒಂದು ವೃಕ್ಷಕ್ಕೆ ಹೋಲಿಸಿ ಅನೇಕ ತಾತ್ವಿಕ ವಿಷಯಗಳನ್ನು "ದ್ವಾಸುಪರ್ಣಾಸಜುಗಾ ಸಖಾಯ..." ಇತ್ಯಾದಿ ಉಪನಿಷದ್ವಾಕ್ಯಗಳ ಅರ್ಥವನ್ನು ವಿವರಿಸಿದ್ದಾರೆ.

## ೮೭

ಈ ಪದದಲ್ಲಿ ಧ್ಯಾನೋಪಾಸನೆಗೆ ಸಂಬಂಧಿಸಿದ ಹೃತ್ಕಮಲ ಚಕ್ರಮಂಡಲವನ್ನು ವಿವರಿಸಿದ್ದಾರೆ. ಇದು ತಂತ್ರಶಾಸ್ತ್ರದ ವಿಷಯವಾಗಿದ್ದು ಶ್ರೀ ವಿಜಯದಾಸರ ಕಂಕಣಾಕಾರ ಸುಳಾದಿಯಲ್ಲಿ ಚಕ್ರಾಬ್ಜಮಂಡಲದ ವಿಸ್ತಾರವಾದ ವಿವರಣೆ ಇದೆ.

'ಘೃಣೀ'ನಾಮಕ ಸೂರ್ಯಾಂತರ್ಗತ ನಾರಾಯಣನನ್ನು ಹೃತ್ಕಮಲದ ಕೇಂದ್ರವಾಗಿಟ್ಟುಕೊಂಡು ಧ್ಯಾನ ಮಾಡುವ ನವಾವರಣಗಳ ವಿವರಣೆ ಇಲ್ಲಿದೆ. ನವಾವರಣಗಳು ಒಳಗಿನಿಂದ ಕ್ರಮವಾಗಿ ಈ ರೀತಿ ಇದೆ :

೧. ಮೂಲ ಚಕ್ರ (ಘೃಣಿಯಸ್ಥಾನ) ೨. ತ್ರಿಕೋನ, ೩. ಸೂರ್ಯ, ಚಂದ್ರ ಮತ್ತು ಅಗ್ನಿಗಳನ್ನೊಳಗೊಂಡ ಮಂಡಲತ್ರಯ ೪. ಕರಿ, ಆಜ, ರಥವೆಂಬ ಮೂರು ವೀಧಿಗಳನ್ನೊಳಗೊಂಡ ಕಾಲಚಕ್ರ, ೫. ಆರು ದಳಗಳುಳ್ಳ ಕಮಲ (ಷಡ್ದಳ) ೬. ಎಂಟು ದಳಗಳುಳ್ಳ ಕಮಲ (ಅಷ್ಟದಳ), ೭. ಹನ್ನೆರಡು ದಳಗಳುಳ್ಳ ಕಮಲ(ದ್ವಾದಶದಳ), ೮. ಇಪ್ಪತ್ತನಾಲ್ಕು ದಳಗಳುಳ್ಳ ಕಮಲ (ಚತುರ್ವಿಂಶತಿ ದಳ) ಮತ್ತು ೯. ಐವತ್ತೊಂದು ದಳಗಳುಳ್ಳ ಕಮಲ (ಏಕಪಂಚಾಶತ್ ದಳ)

## ೮೮

ಇದು ಒಂದು ಸುಳ್ವಿಪದ, ಇದರಲ್ಲಿ ಅನೇಕ ಶಾಸ್ತ್ರಪ್ರಮೇಯಗಳು ಅಡಗಿವೆ.

ಸೃಷ್ಟಿಯ ಉದ್ದೇಶ, ಕ್ರಮ, ಜೀವರುಗಳಿಗಿರುವ ಬಂಧಕದ ಪ್ರಕಾರಗಳು, ಅವುಗಳ ನಿವೃತ್ತಿಗೆ ಅನುಸರಿಸಬೇಕಾದ ಸಾಧನ ಕ್ರಮ, ಪುಣ್ಯ ಪಾಪಗಳ ಪ್ರಕಾರಗಳು, ಜೀವನ ಕರ್ತೃತ್ವ ವಿಚಾರ ಇತ್ಯಾದಿಗಳು ವಿವರಿಸಲ್ಪಟ್ಟಿವೆ.

## ೮೯

ಜೀವನು ಅಸ್ವತಂತ್ರನೆಂದೂ ಪರಮಾತ್ಮನೇ ಜೀವರ ಅಂತರ್ಯಾಮಿಯಾಗಿ ಸರ್ವತಂತ್ರಸ್ವತಂತ್ರನೆಂದೂ ಹೇಳುತ್ತ, ಅಸೃಜ್ಯರಾಶಿಯಿಂದ ಜೀವನು ಸೃಷ್ಟಿಗೆ ಬಂದ ರೀತಿಯನ್ನೂ, ಸ್ಥಿತಿಕಾಲದಲ್ಲಿ ತಾನು ಬಿಂಬನಾಗಿ ಪ್ರತಿಬಿಂಬರಾದ ಜೀವರ ಸರ್ವ ಚೇಷ್ಟೆಗಳನ್ನು ನಡೆಸುವುದನ್ನೂ ವಿವರಿಸಿದ್ದಾರೆ.

**ಈಷಣ ತ್ರಯಗಳು** : ದಾರೇಷಣ, ಪುತ್ರೇಷಣ, ವಿತ್ತೇಷಣ ಎಂಬ ಹೆಂಡತಿ,

ಮಕ್ಕಳು ಮತ್ತು ಹಣ ಇವು ಮೂರರ ಮೋಹ

**ಭ್ರಾಮಕತ್ರಯ** : ಕಾರಕ, ಕ್ರಿಯಾ, ದ್ರವ್ಯ ಎಂಬ ಮೂರು ಭ್ರಾಂತಿಗಳು

**ಮೋದತೀರ್ಥ** : ಆನಂದ ತೀರ್ಥ (ಶ್ರೀ ಮಧ್ವಾಚಾರ್ಯ)

## ೯೦

ತಿರುಪತಿ ಶ್ರೀವೆಂಕಟೇಶನ ಕಲ್ಯಾಣದ ಕಥೆಯನ್ನೂ, ಅವನ ಮಹಿಮೆಯನ್ನೂ ಮತ್ತು ತಿರುಪತಿ ಬೆಟ್ಟದ ವೈಶಿಷ್ಟ್ಯಗಳನ್ನು ವರ್ಣಿಸಿದ್ದಾರೆ.

**ಅಜರಾಮರಣ** : ಮುಪ್ಪು ಮರಣಗಳಿಲ್ಲದವನು

**ಮಸ್ತಕ ಸ್ಫೋಟನ ವ್ಯಾಜದಿ** : ತಲೆಯು ಒಡೆದು ಗಾಯವಾದ ನೆಪದಿಂದ (ಶ್ರೀ ವೆಂಕಟೇಶ ಕಲ್ಯಾಣ ಸಂದರ್ಭ)

## ೯೧

ಶ್ರೀ ವೆಂಕಟಾಚಲ, ಅದರಲ್ಲಿ ಮತ್ತು ಸುತ್ತ ಮುತ್ತಲಿರುವ ಬಂಡೆ, ಗಿಡ, ಮರ, ಬಳ್ಳಿಗಳು, ಪಕ್ಷಿಗಳು, ನದೀ ಸರೋವರಗಳು, ಗಾಳಿ ಗೋಪುರ ಮೊದಲಾದ ವಾಸ್ತು ವಿಶೇಷಗಳು, ಶ್ರೀ ವೆಂಕಟೇಶನ ದರ್ಶನಕ್ಕಾಗಿ ಬರುವ ಭಕ್ತಾದಿಗಳು ಇತ್ಯಾದಿಗಳನ್ನು ವರ್ಣಿಸಿ ಎಲ್ಲೆಲ್ಲೂ ಶ್ರೀ ವೆಂಕಟೇಶನ ಪರಿವಾರ ದೇವತೆಗಳನ್ನು ಕಾಣುತ್ತ, ನಮಿಸುತ್ತ ಶ್ರೀ ವೆಂಕಟೇಶನ ದಶಾವತಾರಗಳನ್ನೂ, ವಿರಾಡ್ರೂಪವನ್ನೂ, ವಸ್ತ್ರಾಭರಣ ಆಯುಧಾದಿಗಳನ್ನೂ, ಅನೇಕ ಸಲ ಆಪಾದಮೌಳಿ ವರ್ಣಿಸುತ್ತ ಸ್ತೋತ್ರ ಮಾಡಿದ್ದಾರೆ.

ಇದು ಅನೇಕ ತಾತ್ವಿಕ ವಿಷಯಗಳನ್ನೂ, ಪ್ರಮೇಯಗಳನ್ನೂ, ಅಂತರಾರ್ಥಗಳನ್ನೂ ಒಳಗೊಂಡ ಒಂದು ಪ್ರೌಢ ಕೃತಿ. ಶಾಸ್ತ್ರಜ್ಞಾನವಿಲ್ಲದೆ ಈ ಪದದ ಅರ್ಥವನ್ನು ತಿಳಿಯುವುದು ಸುಲಭವಲ್ಲ.

**ನವಾಂಗುಳ್ಯಂಗುಷ್ಠ** : ಹೊಸ ಉಂಗುರವನ್ನು ಧರಿಸಿರುವ ಅಂಗುಷ್ಠ

**ದಳಾರ್ವಿಲಿಸಿತ** : ಪಾದ ಪದ್ಮರೇಖೆಗಳುಳ್ಳ ಪಾದಗಳು

**ಪ್ರಲಂಬಪೀವರ ಭುಜ ತುಂಗಾ** : ದೀರ್ಘ ಮತ್ತು ಪುಷ್ಟವಾದ ಬಾಹುಗಳು,

**ಶ್ರೋತಸ್ಥಳಾಶ್ರಯ** : ಕರ್ಣಕುಂಡಲಗಳು,

**ಪೀತ ಕೌಶೇಯವಾಸ** : ಪೀತಾಂಬರ

## ೯೨

ಶ್ರೀ ಶ್ರೀ ಮದ್ಭಾಗವತದ ಮಹಿಮೆಯನ್ನು, ಅದರ ಹನ್ನೆರಡು ಸ್ಕಂದಗಳಲ್ಲಿ ಒಂದೊಂದರ ಸಾರವನ್ನು ಹೇಳಿ, ಶ್ರೀಭಾಗವತದ ಶ್ರವಣ, ಸ್ಮರಣ ಮತ್ತು ಪಾರಾಯಣಗಳ ಫಲವನ್ನು ವರ್ಣಿಸಿದ್ದಾರೆ.

# ರಘುರಾಮ ವಿಠಲರು

೧

ಶ್ರೀ ಹರಿಯು ಸರ್ವತ್ರ ವ್ಯಾಪ್ತನಾಗಿ ನಡೆಸುವ ಕಾರ್ಯಗಳನ್ನು ವಿವರಿಸಿದ್ದಾರೆ.

೨

ರಾಮಾಯಣದ ಕೆಲವು ಪ್ರಸಂಗಗಳನ್ನು ಉಲ್ಲೇಖಿಸಿ ಶ್ರೀರಾಮನ ಸ್ತೋತ್ರ ಮಾಡಿದ್ದಾರೆ.

೩

ಸಕಲ ಚರಾಚರಗಳಲ್ಲಿ ವ್ಯಾಪ್ತನಾಗಿರುವ ಶ್ರೀಹರಿಯನ್ನು ದರ್ಶನ ನೀಡೆಂದು ಪ್ರಾರ್ಥಿಸಿದ್ದಾರೆ.

೪

ನಾರಾಯಣನು ನೀರಿನಲ್ಲಿ ಮತ್ತು ಇತರ ವಸ್ತುಗಳಲ್ಲಿ ವ್ಯಾಪ್ತನಾಗಿದ್ದು ಅನೇಕ ವ್ಯಾಪಾರಗಳಿಂದ ಜೀವರ ಗುಣ-ಸ್ವಭಾವಗಳನ್ನು ಅಭಿವ್ಯಕ್ತಿಗೊಳಿಸುವುದನ್ನು ತಿಳಿಸಿದ್ದಾರೆ.

೫

ಪರಮಾತ್ಮನ ಅನೇಕ ಮಹಿಮೆಗಳನ್ನು ವಿವರಿಸಿದ್ದಾರೆ.

೬

ರಾಮಾಯಣವನ್ನು ಸಂಕ್ಷೇಪ ನಿರೂಪಿಸಿ ರಾಮನಾಮದ ಮಹತ್ವವನ್ನು ಕೊಂಡಾಡಿದ್ದಾರೆ.

೭

ರಾಮಾಯಣದ ಅನೇಕ ಪ್ರಸಂಗಗಳನ್ನು ಉಲ್ಲೇಖಿಸುವುದರ ಮೂಲಕ ಸ್ತೋತ್ರ ಮಾಡಿ ತಮ್ಮನ್ನು ಕಾಪಾಡಬೇಕೆಂದು ಶ್ರೀರಾಮನನ್ನು ಪ್ರಾರ್ಥಿಸಿದ್ದಾರೆ.

೮

ರಾಮಾಯಣದ ಅನೇಕ ಪ್ರಸಂಗಗಳನ್ನು ಕೇಳಿ ತಿಳಿದು ಬಂದಿರುವ ತಮ್ಮನ್ನು ಪಾಲಿಸಬೇಕೆಂದು ಶ್ರೀರಾಮನನ್ನು ಪ್ರಾರ್ಥಿಸಿದ್ದಾರೆ.

೯

ಶ್ರೀ ವಾಯು ದೇವರ ಹನುಮ–ಭೀಮ– ಮಧ್ವಾವತಾರಗಳ ಕಾರ್ಯಗಳನ್ನು ವಿವರಿಸಿ ತಮ್ಮನ್ನು ಸಂಸಾರದಿಂದ ಬಿಡುಗಡೆ ಮಾಡಿ ಶ್ರೀರಾಮನ ಪಾದವನ್ನು ತೋರಿಸಬೇಕಾಗಿ ಪ್ರಾರ್ಥಿಸಿದ್ದಾರೆ.

೧೦

ಷೋಡಶೋಪಚಾರಗಳನ್ನು ಉಲ್ಲೇಖಿಸಿ ತಾವು ಶ್ರೀಹರಿಗೆ ಅವನ್ನು ಸಮರ್ಪಕವಾಗಿ ಮಾಡಿಲ್ಲವೆಂಬ ಭಾವನೆಯನ್ನು ವ್ಯಕ್ತಪಡಿಸಿ, ತಮ್ಮಲ್ಲಿ ದುರ್ಗುಣಗಳಿದ್ದರೂ ತಮ್ಮನ್ನು ಕಾಪಾಡಬೇಕೆಂದು ಶ್ರೀಹರಿಯನ್ನು ಪ್ರಾರ್ಥಿಸಿದ್ದಾರೆ.

೧೧

ತಮ್ಮ ಜನನ–ಮರಣಗಳ ರಹಸ್ಯ ತಿಳಿಯದೆಂದು ಹೇಳಿಕೊಂಡು ತಮ್ಮ ಸ್ವರೂಪವನ್ನು ತಿಳಿಸಿ ಕಾಪಾಡಬೇಕೆಂದು ಶ್ರೀಹರಿಯನ್ನು ಪ್ರಾರ್ಥಿಸಿದ್ದಾರೆ.

೧೨

ಪರಮಾತ್ಮನ ವ್ಯಾಪ್ತತ್ವವನ್ನು ತಿಳಿದು ಜೀವನು ನಡೆಯಬೇಕಾದ ರೀತಿಯನ್ನು ವರ್ಣಿಸಿದ್ದಾರೆ.

೧೩

ಪರಮಾತ್ಮನ ನಾಮಸ್ಮರಣೆ, ಅನೇಕ ರೀತಿಯ ಪೂಜೆ ಇತ್ಯಾದಿಗಳಿಂದ ಅವನ ಅನುಗ್ರಹ ಸಂಪಾದಿಸುವ ರೀತಿಯನ್ನು ವಿವರಿಸಿದ್ದಾರೆ.

೧೪

ದೋಷಯುಕ್ತರಾದ ಜನರನ್ನು ರಕ್ಷಿಸಲು ಶ್ರೀರಾಮನ ಪಾದವೇ ಗತಿ ಎಂದಿದ್ದಾರೆ.

೧೫

ಪರಮಾತ್ಮನು ಸೃಷ್ಟಿಸಿರುವ ಬಗೆ, ಜೀವನು ಅಜ್ಞಾನದಿಂದ ಅನೇಕ ಕರ್ಮಗಳನ್ನು ಎಸಗುವ ರೀತಿ ಮೊದಲಾದವುಗಳನ್ನು ವಿವರಿಸಿ ತಮ್ಮ ತಪ್ಪುಗಳನ್ನು ಕ್ಷಮಿಸಬೇಕೆಂದು ಕೋರಿದ್ದಾರೆ.

# ಶ್ರೀಶ ಕೇಶವದಾಸರು

## ೧

ಇದು ಶ್ರೀ ಪಾಂಡುರಂಗ ವಿಠ್ಠಲನ ಭಜನೆ. ಸಾಮೂಹಿಕವಾಗಿ ಹಾಡಲು ಬಹಳ ಚೆನ್ನಾಗಿ ಹೊಂದುತ್ತದೆ. ದಶಾವತಾರಗಳ ಜೊತೆಗೆ ಇತರ ಅವತಾರಗಳೂ, ಶ್ರೀ ಹರಿಯ ಮಹಿಮೆಗಳೂ ವರ್ಣಿತವಾಗಿದ್ದು ಇಷ್ಟಾರ್ಥ ಸಲ್ಲಿಸೆಂದು ವಿಠ್ಠಲನಲ್ಲಿ ಪ್ರಾರ್ಥನೆ ಸಲ್ಲಿಸಲಾಗಿದೆ.

## ೨

ಇದು ಶ್ರೀ ಕೃಷ್ಣನ ಸ್ತೋತ್ರ

## ೩

ಇದು ಸೊರಬದಲ್ಲಿ ದಂಡಾವತಿ ನದಿ ತೀರದಲ್ಲಿರುವ ಶ್ರೀ ರಂಗನಾಥಸ್ವಾಮಿಯ ಸ್ತೋತ್ರ. (ಸುರಭೀಶ = ಸೊರಬ ನಗರದ ಒಡೆಯ)

## ೪

ಇದು ಶಿಕಾರಿಪುರ(ಮೃಗಯಾ ಪುರ)ದಲ್ಲಿರುವ ಭ್ರಾಂತೇಶ (ಹುಚ್ಚರಾಯ ಸ್ವಾಮಿ) ಎಂದು ಕರೆಸಿಕೊಳ್ಳುವ ಮಾರುತಿಯ ಸ್ತೋತ್ರ.

## ೫, ೬, ೧೧ ಮತ್ತು ೧೩

ಇವು ಉಡುಗಣಿಯಲ್ಲಿರುವ ಶ್ರೀ ರಾಘವೇಂದ್ರ ಸ್ವಾಮಿಗಳ ಬೃಂದಾವನದ ಸ್ತೋತ್ರಗಳು.

## ೭

ಇದು ಕಡೂರಿನಲ್ಲಿ ಭೀಮಸೇತು ಅಥವಾ ಭೀಮನಕಟ್ಟೆ ಎಂಬ ಮಾಧ್ವ ಮಠದ ಯತಿಗಳಿಂದ ಶ್ರೀ ರಾಘವೇಂದ್ರ ಸ್ವಾಮಿಗಳ ಬೃಂದಾವನ ಪ್ರತಿಷ್ಠಿಸಲ್ಪಟ್ಟಾಗ ರಚಿತವಾದ ಕೀರ್ತನೆ. ಶ್ರೀ ರಾಯರ ಹಿಂದಿನ ಅವತಾರಗಳಾದ ಪ್ರಹ್ಲಾದ ಮತ್ತು ವ್ಯಾಸರಾಜರ ಮಹಿಮೆಗಳೂ ವರ್ಣಿತವಾಗಿವೆ.

ತಾತ್ಪರ್ಯ ಚಂದ್ರಿಕಾ ಎಂಬುದು ಶ್ರೀ ವ್ಯಾಸರಾಜರು ರಚಿಸಿದ ಗ್ರಂಥ.

## ೮

ಶ್ರೀ ರಾಘವೇಂದ್ರ ಸ್ವಾಮಿಗಳ ಅವತಾರ ಕಾರ್ಯಗಳನ್ನೂ ಮಹಿಮೆಗಳನ್ನೂ ವರ್ಣಿಸಿದ್ದಾರೆ.

**ವೇನ** : ಒಬ್ಬ ಪುರಾಣ ಪ್ರಸಿದ್ಧ ನಾಸ್ತಿಕ ರಾಜ

**ವಾರಾಹಿ ಕ್ಷೇತ್ರ** : ಮಂತ್ರಾಲಯ

೯

ದಾವಣಗೆರೆಯಲ್ಲಿರುವ ಶ್ರೀ ರಾಘವೇಂದ್ರ ಸ್ವಾಮಿಗಳ ಬೃಂದಾವನದ ಮಂಗಳ ಸೋತ್ರ.

**ದೇವತರು** : ಕಲ್ಪವೃಕ್ಷ.

೧೦

ಈ ಕೀರ್ತನೆಯು ಶಿವಮೊಗ್ಗದಲ್ಲಿರುವ ಶ್ರೀ ರಾಘವೇಂದ್ರ ಸ್ವಾಮಿಗಳ ಬೃಂದಾವನದ ಸ್ತೋತ್ರವೆಂದು ಪ್ರಕಟಣೆಯೊಂದರಲ್ಲಿ ಸೂಚಿತವಾಗಿದೆ.

೧೨

ಇದು ದಾವಣಗೆರೆಯಲ್ಲಿ ಪ್ರತಿಷ್ಠಿತವಾಗಿರುವ ಶ್ರೀ ರಾಘವೇಂದ್ರ ಸ್ವಾಮಿಗಳ ಬೃಂದಾವನ ಸ್ತೋತ್ರ. ಹಿಂದೆ ಶ್ರೀ ರಾಯರು ತಮ್ಮ ಜೀವಿತಕಾಲದಲ್ಲಿ ತಂಜಾವೂರು ಪ್ರಾಂತದಲ್ಲಿ ಕ್ಷಾಮ ನಿವಾರಣೆ ಮಾಡಿದ ಮಹಿಮೆಯನ್ನು ಕೊಂಡಾಡಿ, ಈಗ ಶ್ರೀ ರಾಯರು ಈ ಪ್ರಾಂತದಲ್ಲಿ ನೆಲೆಸುವುದರ ಮೂಲಕ ಮಳೆ–ಬೆಳೆಯಾಗಿ ಸುಖ–ಶಾಂತಿಗಳು ಸ್ಥಾಪಿತವಾಗಲೆಂಬ ಪ್ರಾರ್ಥನೆ ಸೊಗಸಾಗಿದೆ.

೧೪

ಈ ಕೃತಿಯಲ್ಲಿ 'ಶಿರಿಯಾಳ ಕೊಪ್ಪದಲ್ಲಿ ಸ್ವಭಾನು ಸಂವತ್ಸರದ ಕಾರ್ತೀಕ ಶುದ್ಧ ಪ್ರತಿಪದದಂದು ಶ್ರೀ ರುಕ್ಮಿಣೀ (ಭೈಷ್ಮೀ) ಸತ್ಯಭಾಮಾ ಸಮೇತ ಶ್ರೀವ್ಯಾಸರಾಜ ಮುನಿವರದ ಶ್ರೀ ವೇಣುಗೋಪಾಲಸ್ವಾಮಿಗೆ ಅಬ್ಬೂರು–ಕುಂದಾಪುರ ಶ್ರೀವ್ಯಾಸರಾಜ ಮಠಾಧೀಶರಾಗಿದ್ದ ಶ್ರೀಲಕ್ಷ್ಮೀಶತೀರ್ಥ ಶ್ರೀಪಾದಂಗಳವರು ಸಹಸ್ರ ಕುಂಭಾ(ಶಂಖಾ)ಭಿಷೇಕ ಗೈದ ಪರಿ'ಯು ವರ್ಣಿತವಾಗಿದೆ.

ಅಭಿಷೇಕ ಸಾಮಗ್ರಿಗಳಾದ ಹಾಲು, ಮೊಸರು, ತುಪ್ಪ, ಮಧು, ಶರ್ಕರ, ಎಳನೀರು, ಫಲ ಇತ್ಯಾದಿಗಳನ್ನು ಕೃಷ್ಣಾವತಾರದ ಲೀಲೆಗಳಿಗೆ ಸಂಬಂಧಿಸಿದಂತೆ ವರ್ಣಿಸಿರುವುದು ಸೊಗಸಾಗಿದೆ.

## ನಿಡಂಬೂರು ರಾಮದಾಸರು

ಇದನ್ನು ಕೃಷ್ಣಸ್ತುತಿ ಎಂದು ಕರೆದಿದ್ದರೂ ಇದು ಕೇವಲ ಸ್ತುತಿಯಾಗಿರದೆ ಪ್ರಪಂಚದ ಸೃಷ್ಟಿ ಕ್ರಮ, ಭಗವಂತನ ಅನೇಕ ನಾಮರೂಪ ಕ್ರಿಯೆಗಳು, ಭಕ್ತಿಯ ಪ್ರಕಾರಗಳು, ಗಾಯತ್ರೀಮಂತ್ರದ ಮಹಾತ್ಮ್ಯೆ, ಅನೇಕ ಪುರಾಣ ಪ್ರಸಂಗಗಳು, ಅನೇಕ ಗಹನಶಾಸ್ತ್ರ ಪ್ರಮೇಯಗಳು ಇದರಲ್ಲಿ ನಿರೂಪಿತವಾಗಿವೆ.

ತುಳುನಾಡಿನ, ಪರಶು ರಾಮಕ್ಷೇತ್ರದ ಮಹಿಮೆ, ಸುತ್ತಮುತ್ತಲಿನ ದೇವಳಗಳು ಇತ್ಯಾದಿಗಳು ವರ್ಣಿಸಲ್ಪಟ್ಟಿವೆ.

ಶ್ರೀ ವಾದಿರಾಜಸ್ವಾಮಿಗಳಿಂದ ದಾಸರ ಬಲ್ಲಾಳ ವಂಶಕ್ಕೆ ಕೊಡಲ್ಪಟ್ಟಿರುವ ಮೂರವತಾರ ಮಾರುತೀ ಮತ್ತು ಭೂವರಾಹ ದೇವರ ವಿಗ್ರಹಗಳ ಬಗ್ಗೆ ಉಲ್ಲೇಖಿಸಿದ್ದಾರೆ.

**ಗಾಧಿಪುತ್ರ** : ವಿಶ್ವಾಮಿತ್ರ, ಗಾಯತ್ರೀಮಂತ್ರದ ದೃಷ್ಟಾರ.

**ಅಷ್ಟಾಕ್ಷರಿಯಮಂತ್ರ** : 'ಓಂ ನಮೋ ನಾರಾಯಣಾಯ' ಎಂಬ ಮಂತ್ರ

**ಪಂಚಾಕ್ಷರಿ** : 'ನಮಃ ಶಿವಾಯ' ಎಂಬ ಮಂತ್ರ

**ಸಪ್ತಧಾತುಗಳು** : ತ್ವಕ್, ಚರ್ಮ, ಮಾಂಸ, ರುಧಿರ (ರಕ್ತ) ಮೇಧಸ್, ಮಜ್ಜಾ, ಅಸ್ಥಿ.

## ಬಿ. ವೆಂಕಟರಾವ್

೧

ಇದು ಶ್ರೀ ಗಣೇಶನ ಸ್ತುತಿ

೨

ಶ್ರೀಹರಿಯ ದಶವತಾರಗಳನ್ನು ಕೊಂಡಾಡಿದ್ದಾರೆ

೩

ಶ್ರೀಹರಿಯ ದಶವತಾರಗಳನ್ನು ವರ್ಣಿಸಿದ್ದಾರೆ

೪

ರಾಮಧ್ಯಾನ ಮಾಡಬೇಕೆಂದಿದ್ದಾರೆ

೫

ಶ್ರೀ ಹರಿಯ ಸ್ತುತಿ ಎರಡೇ ನುಡಿಗಳಿವೆ.

೬

ಶ್ರೀಕೃಷ್ಣನ ಅನೇಕ ಲೀಲೆಗಳನ್ನು ಹೇಳಿ ಸ್ತುತಿಸಿದ್ದಾರೆ.

೭

ಭಗವನ್ನಾಮಸ್ಮರಣೆಯನ್ನು ಮಾಡಿ ನಲಿಯಬೇಕೆಂದಿದ್ದಾರೆ.

೮

ಇದು ಬಾಲಕೃಷ್ಣನ ಸ್ತೋತ್ರ

೯

ಇದು ರಾಮದೇವರ ಸ್ತೋತ್ರ

೧೦

ದಶವತಾರಗಳನ್ನು ವರ್ಣಿಸಿದ್ದಾರೆ. – ಎರಡೇ ನುಡಿಗಳಿವೆ

೧೧

ಶ್ರೀಹರಿಯು ಅನೇಕ ಭಕ್ತರನ್ನು ಉದ್ಧರಿಸಿದ್ದನ್ನು ಉಲ್ಲೇಖಿಸಿ ಸ್ತುತಿಸಿದ್ದಾರೆ.

೧೨

ಶ್ರೀಹರಿಯ ಮಹಿಮೆಗಳನ್ನು ಕೊಂಡಾಡಿ ನಾಮಸ್ಮರಣೆಯ ಮಹತ್ವವನ್ನು ಸೂಚಿಸಿದ್ದಾರೆ.

೧೩

ಇದು ಶ್ರೀ ಲಕ್ಷ್ಮೀ ಸ್ತುತಿ

೧೪–೧೭

ಇವು ಶ್ರೀ ಸರಸ್ವತಿಯ ಸ್ತೋತ್ರಗಳು

೧೮

ಇದು ಶಿವ ಭಜನೆ. ಪ್ರಾಸ ಅನುಪ್ರಾಸಗಳು ಸೊಗಸಾಗಿ ಬಂದಿವೆ. ಶಿವನ ಅನೇಕ ನಾಮಗಳನ್ನು ಹೇಳುವುದರ ಮೂಲಕ ಸ್ತುತಿಸಿದ್ದಾರೆ.

೧೯–೩೯

ಮಂಗಳೂರಿನ ಬಳಿ ಕಟೀಲಿನಲ್ಲಿ ನಂದಿನಿ ನದಿಯ ನಡುಗಡ್ಡೆಯಲ್ಲಿರುವ ಶ್ರೀ ದುರ್ಗಾಪರಮೇಶ್ವರಿಯ ಸ್ತೋತ್ರಗಳು. ಕಟೀಲು ಒಂದು ಸುಪ್ರಸಿದ್ಧ ಕ್ಷೇತ್ರವಾಗಿದ್ದು, ಕ್ಷೇತ್ರದ ಮತ್ತು ಅಲ್ಲಿ ನೆಲೆಸಿರುವ ದೇವಿಯ ಮಹಿಮೆಯನ್ನು ಭಕ್ತಿ ಪರವಶತೆಯಿಂದ ಸ್ತೋತ್ರ ಮಾಡಿದ್ದಾರೆ.

೪೦

ಶ್ರೀ ಹರಿಯ ಅನೇಕ ಮಹಿಮೆಗಳನ್ನು ಕೊಂಡಾಡಿ ತಮ್ಮನ್ನು ಪೊರೆಯಬೇಕೆಂದು ಪ್ರಾರ್ಥಿಸಿದ್ದಾರೆ.

೪೧

ತಮ್ಮಲ್ಲಿರುವ ದೋಷಗಳನ್ನು ಹೇಳಿಕೊಂಡು ಅವುಗಳನ್ನು ಮನ್ನಿಸಿ ಇಷ್ಟಾರ್ಥಗಳನ್ನು ಸಲ್ಲಿಸಬೇಕೆಂದು ಶ್ರೀ ಕೃಷ್ಣನನ್ನು ಪ್ರಾರ್ಥಿಸಿದ್ದಾರೆ.

೪೨

ಮುಕ್ತಿ ಸಾಧನವಾದ ಶ್ರೀ ರಾಮನಾಮವನ್ನು ಭಜಿಸಿರೆಂದಿದ್ದಾರೆ.

೪೩

ಮಂಗಳಾರತಿ ಪದ. ದೇವಿಗೆ, ಗಣಪತಿಗೆ ಹಾಗೂ ದಶವತಾರಗಳನ್ನು ವರ್ಣಿಸುವುದ ಮೂಲಕ ಶ್ರೀ ಹರಿಗೆ ಮಂಗಳಾರತಿ ಬೆಳಗುವೆನೆಂದಿದ್ದಾರೆ. ಕೊನೆಯಲ್ಲಿ 'ವಿಜಯ ವಿಠಲ' ಎಂತಿರುವುದರಿಂದ ವಿಜಯ ದಾಸರ ಕೃತಿಯಾಗಿ ತಿಳಿಯ ಬಾರದು.

## ಅಚಲಾನಂದ ದಾಸರು

೧

**ಅಂಗುಟದಲ್ಲಿ . . . . . ರುಂಟೇ** : ಶ್ರೀಹರಿಯ ಕಾಲಿನ ಹೆಬ್ಬೆರಳಿನಲ್ಲಿ ಗಂಗೆ ಹುಟ್ಟಿದ ವಿಚಾರ

**ಪೊಕ್ಕಳದಲ್ಲಿ . . . . ರುಂಟೇ** : ಶ್ರೀಹರಿಯ ಹೊಕ್ಕುಳಿನಲ್ಲಿ ಬ್ರಹ್ಮ ಹುಟ್ಟಿದ ವಿಷಯ

೪

ತೋರಿಕೆಯ ಭಕ್ತಿಯನ್ನು ಅಲ್ಲಗಳೆಯುತ್ತದೆ, ಈ ಉಗಾಭೋಗ. ಹೊಟ್ಟೆಯಲ್ಲಿ ಖಂಡುಗ ಕೊಳಕಿಟ್ಟುಕೊಂಡು ಮತ್ತೆ ಮತ್ತೆ ನೀರಿನಲ್ಲಿ ಮುಳುಗಿ ಶುದ್ಧನಾದೆನೆಂದು ಭಾವಿಸುವ ಮನುಷ್ಯನಿಗಿಂತ ಸದಾಕಾಲ ನೀರೊಳಗಿರುವ ಮುದಿಕಪ್ಪೆ ಹೆಚ್ಚು ಮಡಿಯಲ್ಲವೆ ? ಎಂದು ದಾಸರು ಇಲ್ಲಿ ವಿಡಂಬನೆ ಮಾಡಿದ್ದಾರೆ.

೮

ಕುಹಕ ಮನಸ್ಸಿನವನಿಗೆ ದೀಕ್ಷೆಯಿತ್ತರೆ ಏನೂ ಪ್ರಯೋಜನವಿಲ್ಲವೆಂಬುದು ದಾಸರ ಇಂಗಿತ. ಈ ಉಗಾಭೋಗವನ್ನು ಓದಿದರೆ ವಚನವೊಂದರ ನೆನಪನ್ನು ತರುತ್ತದೆ.

೧೧

ಇಲ್ಲಿ 'ಕೊಡಲಿ' ಎಂಬ ಶಬ್ದವನ್ನು ಚಮತ್ಕಾರದಿಂದ ಬಳಸಿದ್ದಾರೆ. ನಾಮಪದವಾಗಿ ಪಾಪದ ಬೇರನ್ನು ಕಡೆಯುವ ಸಾಧನವಾಗಿ; ದಾನವೆಂಬ ಅರ್ಥದಲ್ಲಿ.

೧೪

ತಾನು ಮಾಡಿದ ಕರ್ಮವನ್ನು ತಾನೇ ಅನುಭವಿಸಬೇಕು, ವಿಧಿಯನ್ನು ಬೈದು ಫಲವಿಲ್ಲವೆಂಬ ಸೂಚನೆ ಈ ಉಗಾಭೋಗ.

೧೫

'ಅನ್ಯಥಾ ಶರಣಂ ನಾಸ್ತಿ' – ಎಂಬ ಭಾವ

೧೭

ಇದು ಸಂಸಾರ ಕೂಪದಿಂದ ತಮ್ಮನ್ನು ಮೇಲೆತ್ತಬೇಕೆಂಬ ಪ್ರಾರ್ಥನೆ.

೧೮

ಇಲ್ಲಿ ಸಖ್ಯಭಾವದ ಸಲಿಗೆಯಿಂದ ತಮ್ಮನ್ನು ಕಾಪಾಡುವಂತೆ ಪ್ರಾರ್ಥಿಸಿದ್ದಾರೆ.

೧೯

ಶ್ರೀಹರಿಗೆ ತಮ್ಮ ನಿಷ್ಠೆಯನ್ನು ಈ ಮೂಲಕ ಮೆರೆದಿರುವರು.

೨೧

'ಸರ್ವವೂ ನೀನೇ' – ಎಂದು ಶ್ರೀಹರಿಯ ಸರ್ವೋತ್ತಮತ್ವ, ಸರ್ವವ್ಯಾಪಕತ್ವಗಳನ್ನು ಒಪ್ಪಿಕೊಂಡಿರುವರು.

೨೪

ಹನುಮನ ದಾಸ್ಯದಂತೆ ತಮ್ಮ ದಾಸ್ಯಭಾವವೂ ಇರಬೇಕೆಂಬ ಬಯಕೆ ದಾಸರಿಗೆ.

೨೫

ಹರಿಸೇವೆಯಿಲ್ಲದ ಬಾಳು ವ್ಯರ್ಥ.

### ೨೭

ಋಷಿ ಮುನಿಗಳಿಗೆ ಉಪನಿಷತ್ತುಗಳಿಗೆ ಅರಿಯಲಾಗದ ಕೃಷ್ಣನನ್ನು ಮಗುವೆಂದು ಎತ್ತಿ ಮುದ್ದಾಡಿ ಮೊಲೆಯೂಡುವ ಗೋಪೀದೇವಿಯ ಪುಣ್ಯವನ್ನು ಕಂಡು ಅಚ್ಚರಿ ಪಡುತ್ತಾರೆ, ಅಚಲಾನಂದವಿಠಲರು.

### ೨೮

ಇಲ್ಲಿ, ಶ್ರೀ ಪಾದರಾಜರು, ವ್ಯಾಸರಾಯರು ಮತ್ತು ಪುರಂದರ ದಾಸರ ಬಗ್ಗೆ ತಮಗಿರುವ ಭಕ್ತಿ – ಗೌರವಗಳನ್ನು ಹೇಳಿಕೊಂಡಿದ್ದಾರೆ, ಅಚಲಾನಂದರು.

### ೩೦

ಹರಿಸರ್ವೋತ್ತಮನೆಂಬ ದಾಸರ ನಂಬಿಕೆಯ ಅಭಿವ್ಯಕ್ತಿ ಈ ಉಗಾಭೋಗ.

### ೩೧

ಇದೂ ಒಂದು ಸಖ್ಯಭಾವ, ಸಲಿಗೆಯ ಅಭಿವ್ಯಕ್ತಿ.

### ೩೨

ಸಕಲವೂ ಶ್ರೀಹರಿಯ ಅಧೀನ; ನರರ ಸ್ವತಂತ್ರವೇನೂ ಇಲ್ಲವೆನ್ನುವ ಭಾವನೆ.

### ೩೩

ಜೀವನವನ್ನು ವ್ಯರ್ಥವಾಗಿ ಕಳೆದ ಬಗ್ಗೆ ಪಶ್ಚಾತ್ತಾಪವಾಗಿದೆ, ಅಚಲಾನಂದರಿಗೆ.

### ೩೪

ಸದಾಚಾರದ ಬೋಧನೆ ಈ ಉಗಾಭೋಗ.

### ೩೫

**'ತೇನವಿನಾ ತೃಣಮಪಿ ನಚಲತಿ'** : ಎನ್ನುವ ವಾಕ್ಯಾರ್ಥವೇ ಈ ಕೀರ್ತನೆಯ ವಸ್ತು. ಎಲ್ಲ ಜೀವಿಗಳ ಆಟವೂ ಆ ಕಪಟನಾಟಕಸೂತ್ರಧಾರಿಯ ಇಚ್ಛೆಯಂತೆಯೇ ನಡೆಯುವುದು. ಸ್ವತಂತ್ರ ಶ್ರೀಹರಿ ಆಡಿಸುವ ಅಸ್ವತಂತ್ರ ಸೂತ್ರದ ಗೊಂಬೆಗಳು ನಾವು.

**ನುಡಿ ೨ : ಒಂಬತ್ತು . . . . . ದೊಳಗೆ :** ಈ ಶರೀರದಲ್ಲಿರುವ ನವದ್ವಾರಗಳು, ಎರಡು ಕಣ್ಣುಗಳು, ಎರಡು ಮೂಗಿನ ಹೊಳ್ಳೆಗಳು, ಒಂದು ಬಾಯಿ, ಎರಡು ಕಿವಿಗಳು, ಒಂದು ಗುದ, ಒಂದು ಉಪಸ್ಥ.

**ಇಪ್ಪತ್ನಾಲ್ಕು ಮೊನೆಯಾಳ್ಗಳು** : **ಪಂಚಭೂತಗಳು** : ಪೃಥ್ವಿ, ಅಪ್ಪು, ವಾಯು, ತೇಜಸ್ಸು, ಆಕಾಶ

**ಪಂಚಜ್ಞಾನೇಂದ್ರಿಯಗಳು** : ಶ್ರವಣ, ನಯನ, ಘ್ರಾಣ, ತ್ವಕ್ಕು, ರಸನ

**ಪಂಚ ಕರ್ಮೇಂದ್ರಿಯಗಳು** : ವಾಕು, ಪಾಣಿ, ಪಾದ, ಪಾಯು, ಉಪಸ್ಥ

**ಪಂಚತನ್ಮಾತ್ರೆಗಳು** : ಶಬ್ದ, ಸ್ಪರ್ಶ, ರೂಪ, ರಸ, ಗಂಧ
ಮತ್ತು ಮನಸ್ಸು, ಬುದ್ಧಿ, ಅಹಂಕಾರ, ಚಿತ್ತ.

**೩೬**

ಹನುಮ–ಭೀಮ–ಮಧ್ವ – ಈ ಅವತಾರತ್ರಯದ ಸ್ತುತಿಯಿದು. ಮೊದಲ ಎರಡು ನುಡಿಗಳಲ್ಲಿ ಹನುಮನ ಸ್ತುತಿಯಿದೆ. ಮೂರನೆಯದು ಭೀಮನಸ್ತುತಿ, ನಾಲ್ಕನೆಯದು ಮಧ್ವರಾಯರ ಸ್ತುತಿ. ಐದನೆಯ ನುಡಿಯಲ್ಲಿ ಮೂರೂ ಅವತಾರಗಳ ಸ್ತುತಿಯಿದೆ.

**೩೭**

ದಾಸರು ಇಲ್ಲಿ ತಮ್ಮ ಮಧ್ವಮತ ನಿಷ್ಠೆಯನ್ನು ಮೆರೆದಿದ್ದಾರೆ. ಈ ಕ್ಷಣಿಕ ಜೀವನವನ್ನು ವ್ಯರ್ಥಹೋಗಗೊಡದೆ ಶ್ರೀಹರಿಯ ಪಾದಕಮಲಗಳನ್ನು ಸ್ಮರಿಸಿ ಸುಖಿಯಾಗೆಂದು ಉಪದೇಶಿಸಿರುವರು. ಮನುಷ್ಯ ಜನ್ಮವನ್ನು ಹರಿ ಸಾಯುಜ್ಯ ಪಡೆದು ಸಾರ್ಥಕ ಪಡಿಸಿಕೊ ಎಂದಿರುವರು.

**೩೮**

ಸಂಸಾರದಲ್ಲಿ ಜೀವಿ ಅನುಭವಿಸುವ ಕಷ್ಟ ಕೋಟಲೆಗಳ ಸ್ವರೂಪ, ಮನುಷ್ಯ ಜನ್ಮದ ಶ್ರೇಷ್ಠತೆಗಳನ್ನು ಮನನ ಮಾಡಿದ ದಾಸರು ಇಲ್ಲಿ ತಮ್ಮನ್ನು ಕಾಪಾಡುವಂತೆ ಶ್ರೀಹರಿಯನ್ನು ಬೇಡಿಕೊಂಡಿರುವರು.

**೩೯**

**ನುಡಿ ೩** : ಪರಸತಿಯರ ವ್ಯಾಮೋಹವನ್ನು ಬಿಡು : ಒಳ್ಳೆಯದಲ್ಲವೆಂದು ಹೇಳುತ್ತಾ, ಅಹಲ್ಯೆಗಾಗಿ ಕಾತರನಾದ ಇಂದ್ರನ ಮೈಯೆಲ್ಲ ಕಣ್ಣಾದ ಪ್ರಸಂಗ, ಸೀತೆಗೆ ಆಶಿಸಿದ ರಾವಣ ಸತ್ತದ್ದು, ದ್ರೌಪದಿಗೆ ಮನಸೋತ ಕೀಚಕ ಹೆಣವಾದ ಪ್ರಸಂಗಗಳನ್ನು ಉದಾಹರಿಸಿ ಸಜ್ಜನರ ಸಂಗವನ್ನು ಬಯಸಿರುವರು.

**೪೦**

ಹರಿದಾಸರಾದವರು ಹೇಗಿರಬೇಕು ಮತ್ತು ಹೇಗೆ ಇರಬಾರದು ಎಂಬುದನ್ನು ದಾಸರು ಈ ಕೀರ್ತನೆಯಲ್ಲಿ ಮಾರ್ಮಿಕವಾಗಿ ಹೇಳಿದ್ದಾರೆ.

## ೪೧

ಈ ಸುಳಾದಿಯಲ್ಲಿ ಕಾಮಕ್ರೋಧಾದಿ ಅರಿಷಡ್ವರ್ಗಗಳಿಂದ ಬಾಧೆ ಪಡುತ್ತಿರುವ ತಮ್ಮನ್ನು ಕಾಪಾಡಬೇಕೆಂದು ಶ್ರೀಹರಿಯಲ್ಲಿ ಮೊರೆಯಿಟ್ಟಿದ್ದಾರೆ, ಅಚಲಾನಂದವಿಠಲರು.

## ೪೨

ಶ್ರೀಹರಿಗಿಂತ ಅವನ ದಾಸರೇ ಮಿಗಿಲೆನ್ನುವ ಭಾವ ಈ ಸುಳಾದಿಯಲ್ಲಿ ಸುಳಿದಿದೆ. ಮಧುರ ಭಕ್ತಿಯಿಂದ ತಮ್ಮನ್ನು ಸಲಹಬೇಕೆಂದು ಕೇಳಿ ಕೊಂಡಿದ್ದಾರೆ, ಅಚಲಾನಂದವಿಠಲರು.

# ಅನುಬಂಧ ೩

## ಶ್ರೀ ಉರಗಾದ್ರಿವಾಸ ವಿಠಲದಾಸರಿಂದ ಪ್ರದಾನವಾಗಿರುವ ಅಂಕಿತನಾಮ ಸೂಚಿ

೧. ಅಂತರಾತ್ಮ ವಿಠಲ
೨. ಆನಂದಮಯ ವಿಠಲ
೩. ಆನಂದ ವಿಠಲ
೪. ಆನಂದ ವಿಠಲ
೫. ಇಂದಿರಾ ಪತಿ ವಿಠಲ
೬. ಉದ್ಧವ ವರದ ವಿಠಲ
೭. ಓಂ ಶ್ರೀ ಧನ್ವಂತ್ರಿ ವಿಠಲ
೮. ಕಮಲನಾಭ ವಿಠಲ
೯. ಕಮಲನಾಥ ವಿಠಲ
೧೦. ಕರಿವರದ ವಿಠಲ
೧೧. ಕಾರುಣ್ಯ ವಿಠಲ
೧೨. ಕೃತೀಶ ವಿಠಲ
೧೩. ಕೃಷ್ಣದ್ವೈಪಾಯನ ವಿಠಲ
೧೪. ಕ್ಷೇತ್ರಜ್ಞ ವಿಠಲ
೧೫. ಗಜವರದ ವಿಠಲ
೧೬. ಗುರುವಾಸುದೇವ ವಿಠಲ
೧೭. ಗೋಪ ವಿಠಲ
೧೮. ಗೋಪೀನಾಥ ವಿಠಲ
೧೯. ಜಗಧ್ಧರಿತ ವಿಠಲ
೨೦. ಜಯಾಕಾಂತ ವಿಠಲ
೨೧. ಜಯಧನ್ವಂತ್ರಿ ವಿಠಲ
೨೨. ಜಯಾಪತಿವಿಠಲ
೨೩. ಜ್ಞಾನಗಮ್ಯ ವಿಠಲ
೨೪. ಜ್ಞಾನಾತ್ಮ ವಿಠಲ
೨೫. ಜ್ಞಾನಾತ್ಮ ವಿಠಲ
೨೬. ತಂದೆವೆಂಕಟೇಶ ವಿಠಲ
೨೭. ತಾಂಡವಕೃಷ್ಣ ವಿಠಲ
೨೮. ದಯಾನಿಧಿ ವಿಠಲ
೨೯. ದಾಶರಥಿ ವಿಠಲ
೩೦. ಧೃವವರದ ವಿಠಲ
೩೧. ನರಹರಿ ವಿಠಲ
೩೨. ನರಹರಿ ವಿಠಲ
೩೩. ನಾಗಶಯನ ವಿಠಲ
೩೪. ನಾರಸಿಂಹ ವಿಠಲ
೩೫. ಪನ್ನಂಗಶಯನ ವಿಠಲ
೩೬. ಪಾರ್ಥಸಾರಥಿ ವಿಠಲ
೩೭. ಪುರುಷೋತ್ತಮ ವಿಠಲ
೩೮. ಪ್ರದ್ಯುಮ್ನ ವಿಠಲ
೩೯. ಪ್ರಜ್ಞಾನಿಧಿ ವಿಠಲ
೪೦. ಪ್ರಾಜ್ಞ ವಿಠಲ
೪೧. ಭಾರ್ಗವ ವಿಠಲ
೪೨. ಭಾರತೀಶಪ್ರಿಯ ವಿಠಲ

೪೩. ಮಧುರಾನಾಥ ವಿಠಲ
೪೪. ಮನೋಮಯ ವಿಠಲ
೪೫. ಮಹಿದಾಸ ವಿಠಲ
೪೬. ಮಾರಮಣ ವಿಠಲ
೪೭. ಮುಕುಂದ ವಿಠಲ
೪೮. ಮುರಳೀಧರ ವಿಠಲ
೪೯. ಮುರಳೀಧರ ವಿಠಲ
೫೦. ಯದುಪತಿ ವಿಠಲ
೫೧. ಯದುನಾಥ ವಿಠಲ
೫೨. ಯೋಗೀಶ ವಿಠಲ
೫೩. ರಮಾಧವ ವಿಠಲ
೫೪. ರಮಾಮಧು ಸೂದನ ವಿಠಲ
೫೫. ರಾಧಾನಾಥ ವಿಠಲ
೫೬. ವರದ ಲಕ್ಷ್ಮೀರಮಣ ವಿಠಲ
೫೭. ವರದೇಂದ್ರ ವಿಠಲ
೫೮. ವಿಧುವದನ ವಿಠಲ
೫೯. ವಿಜ್ಞಾನ ಮಯ ವಿಠಲ
೬೦. ವೆಂಕಟೇಶ ವಿಠಲ
೬೧. ವೇದಾವತೀಶ ವಿಠಲ
೬೨. ವೈಕುಂಠ ಪತಿ ವಿಠಲ
೬೩. ಶಾಂತೀಶ ವಿಠಲ
೬೪. ಶೇಷಶಯನ ವಿಠಲ
೬೫. ಶೇಷಶಾಯಿ ವಿಠಲ
೬೬. ಶ್ರೀಕಾಂತ ವಿಠಲ
೬೭. ಶ್ರೀನಾಥ ವಿಠಲ
೬೮. ಶ್ರೀ ವರಾಹ ವಿಠಲ
೬೯. ಶ್ರೀಹರಿ ವಿಠಲ
೭೦. ಶ್ರೀ ಹರೇ ವಿಠಲ
೭೧. ಸಂಕರ್ಷಣ ವಿಠಲ
೭೨. ಸನತ್ಕುಮಾರ ವಿಠಲ
೭೩. ಸರ್ವಜ್ಞ ಮೂರ್ತಿ ವಿಠಲ
೭೪. ಸಿಂಧುಶಯನ ವಿಠಲ
೭೫. ಸಿರಿಉರಗಾದ್ರಿವಾಸ ವಿಠಲ
೭೬. ಸುಜ್ಞಾನ ವಿಠಲ
೭೭. ಹರಿಣೀಪತಿ ವಿಠಲ
೭೮. ಲಕ್ಷ್ಮೀಪತಿ ವಿಠಲ

**ಸೂಚನೆ** : ೧. ಒಂದೇ ಅಂಕಿತವು ಅನೇಕರಿಗೆ ಕೊಡಲ್ಪಟ್ಟಿದೆ.

೨. ಈ ಪಟ್ಟಿ ಪೂರ್ಣವಲ್ಲ ದೊರೆತಷ್ಟು ಮಾತ್ರ ಕೊಟ್ಟಿದೆ.

# ಅನುಬಂಧ–೪

## ಕೀರ್ತನೆಗಳ ಅಕಾರದಿ ಸೂಚಿ

| ಕ್ರಮ ಸಂಖ್ಯೆ | ಕೀರ್ತನೆಯ ಮೊದಲ ಸಾಲು | ಕೀರ್ತನೆ ಸಂಖ್ಯೆ |
|---|---|---|
| | **ಉರಗಾದ್ರಿವಾಸ ವಿಠಲದಾಸರು** | |
| ೧. | ಅಂಚಿತ್ಯಾದ್ಭುತ ಮಹಿಮೆ | ೬೩ |
| ೨. | ಅಮಮ ಏನಿದದ್ಭುತ ಮಹಿಮೆ | ೩೭ |
| ೩. | ಆರಿಗೆ ಆರಾಗರ್‍ಯ್ಯ | ೨ |
| ೪. | ಇಂದಿರಾರಾಧ್ಯನೆ ಬಂದುನಿಲ್ಲೋ | ೩ |
| ೫. | ಇನ್ನೆಂದಿಗೋ ನಿನ್ನ ದರುಶನ | ೯೦ |
| ೬. | ಈ ಭಾಗ್ಯವೆ ನಿನ್ನದೋ | ೪ |
| ೭. | ಎಂದುಕಾಂಬೆನೋ ನಾನು | ೬೪ |
| ೮. | ಎಲ್ಲಿಗ್ಹೋಗುವೆಯೋ ಎಲೊ ಹರಿಯೆ | ೫ |
| ೯. | ಏಕಪಂಚಾಶದ್ವರ್ಣವಾಚ್ಯ | ೭೫ |
| ೧೦. | ಏಕಮೇವ ಅದ್ವಿತೀಯಾ | ೭೬ |
| ೧೧. | ಏನೂ ತೋಚದೋ ಮುಂದೇನುಗತಿಯೋ | ೬೫ |
| ೧೨. | ಓಂ ಕಾರ ಪ್ರತಿಪಾದ್ಯ ಶ್ರೀಕಾಂತನೇ | ೭೭ |
| ೧೩. | ಓಂನಮೊನಾರಾಯಣಾಯ | ೭೮ |
| ೧೪. | ಕಂಕಟವ ಪರಿಹರಿಸೊ ಶ್ರೀಕಂಠ ಮೂರುತಿಯೇ | ೫೧ |
| ೧೫. | ಕಂಡೆ ನಾ ಕಣ್ಣೆದುರಲಿ | ೬ |
| ೧೬. | ಕಂಡೆ ನಾ ಬ್ರಹ್ಮಾಂಡ ದೊಡೆಯ | ೭ |
| ೧೭. | ಕಮಲೇ ಕಮಲಾಲಯೇ | ೩೪ |
| ೧೮. | ಕರುಣಿಸೊ ಜಯರಾಯ ಗುರುವರ್ಯ | ೫೪ |
| ೧೯. | ಕಷ್ಟ ಕಷ್ಟವೋ ಕೃಷ್ಣ | ೬೬ |
| ೨೦. | ಕಷ್ಟ ಪರಿಹರಿಸೋ ಪರಮೇಷ್ಠಿಪಿತನೆ | ೮ |

## ರಘುರಾಮ ವಿಠಲರು

## ಶ್ರೀಶ ಕೇಶವದಾಸರು

| ಕ್ರಮ ಸಂಖ್ಯೆ | ಕೀರ್ತನೆಯ ಮೊದಲ ಸಾಲು | ಕೀರ್ತನೆ ಸಂಖ್ಯೆ |
|---|---|---|
| ೨೫. | ಪಾಲಿಸು ಶ್ರೀಕೃಷ್ಣ ಬಾಲಮುಕುಂದ | ೬ |
| ೨೬. | ಪಾಲಿಸು ಪರತರ ಪಾವನ ಮಾತೆ | ೩೪ |
| ೨೭. | ಪಾವನಾತ್ಮಕಿಯೆ ಪಾಲಿಸು | ೩೫ |
| ೨೮. | ಪೊರೆಯುವಳು ದೇವಿ ಪೊರೆಯುವಳು | ೩೬ |
| ೨೯. | ಬಾ ಕೃಪಾಕರೆ ಮೋದದಿ | ೩೭ |
| ೩೦. | ಭಗವನ್ನಾಮನಾಡು ಅಡಿಗಡಿ | ೭ |
| ೩೧. | ಭಾಗ್ಯವ ಕೊಡು ತಾಯೆ ನೀ ಸೌಭಾಗ್ಯ | ೧೩ |
| ೩೨. | ಮಂಗಳಾರತಿ ಬೆಳಗುವೆ ನೀಗ | ೪೩ |
| ೩೩. | ಮನ ಒಲಿದೆನ್ನನು ಪಾಲಿಸು ಜನನಿ | ೧೬ |
| ೩೪. | ಮನವೇ ನೀ ಭಜಿಸು ರಾಮ ನಾಮವನು | ೪೨ |
| ೩೫. | ಮಾತೆ ದಾತೆ ಹಿತೆ ಘನ ಸುಚರಿತೆ | ೩೮ |
| ೩೬. | ಮುರಲಿನಾದವ ಮಾಡಿ ಕುಣಿದಾಡಿ ಬಾರೋ | ೮ |
| ೩೭. | ವೈದೇಹೀಧವ ರಾಮ ನಿನ್ನ ಪಾದವ ಬೇಡುವೆ | ೯ |
| ೩೮. | ಶರತ್ಕಾಲಶಶಿಪೂರ್ಣನಿಭಾನನೆ | ೩೯ |
| ೩೯. | ಶಾರದಾಂಬೆ ಜಯಜಯ | ೧೭ |
| ೪೦. | ಸಾಂಬಶಿವ ಸಾಂಬಶಿವ | ೧೮ |
| ೪೧. | ಹರಿ ನಿನ್ನ ನಾಮದ ಸ್ಮರಣೆಯ ನಾನು | ೧೧ |
| ೪೨. | ಹರಿಯೆ ನಿನ್ನಯ ಮಹಿಮೆ | ೧೦ |
| ೪೩. | ಹರಿಯೆ ನಿನ್ನಯ ಅಪಾರ ಮಹಿಮೆಯ | ೧೨ |

## ಅಚಲಾನಂದದಾಸರು

| | | |
|---|---|---|
| ೧. | ಅಂಗುಟದಲ್ಲಿ ಹೆಣ್ಣು | ೧ |
| ೨. | ಅಂಬರದಳವು | ೨ |
| ೩. | ಅಪರಾಧಿ ನಾನಲ್ಲ | ೩೫ |
| ೪. | ಇದಕ್ಯಾರಂಜುವರೊ | ೩ |

ಕನ್ನಡ ಸಾಹಿತ್ಯದ ಇತಿಹಾಸದಲ್ಲಿ
ಹರಿದಾಸ ಸಾಹಿತ್ಯ ಒಂದು ಪ್ರಮುಖ ಮಜಲು.
ಹರಿದಾಸರು ರಚಿಸಿರುವ ವಿಪುಲ ಕೀರ್ತನೆಗಳು
ಕರ್ನಾಟಕ ಸಾಂಸ್ಕೃತಿಕ ತವನಿಧಿಗಳಾಗಿವೆ.
ದಾಸ ಸಾಹಿತ್ಯದಲ್ಲಿ ಕಂಡುಬರುವ
ಭಾಷಿಕ ಹಾಗೂ ಸಾಹಿತ್ಯಕ ಸೊಬಗು,
ಆಧ್ಯಾತ್ಮಿಕ ಬೆಡಗು, ಸಂಗೀತದ ಮೆರುಗು ಅನನ್ಯ.
ದಾಸ ಸಾಹಿತ್ಯವು ಜ್ಞಾನ, ಮನೋಲ್ಲಾಸ
ಮತ್ತು ಜೀವ ಸಂಸ್ಕಾರಗಳ ತ್ರಿವೇಣಿ ಸಂಗಮ.
ಇಂಥ ದಾಸ ಸಾಹಿತ್ಯವನ್ನು
ಸಮಗ್ರವಾಗಿ ಸಂಗ್ರಹಿಸಿ, ಸಂಪಾದಿಸಿ,
ಬಹುಮಾಧ್ಯಮದಲ್ಲಿ ಹಾಗೂ ಸುಲಭ ಬೆಲೆಯಲ್ಲಿ
ಕನ್ನಡ ಜನತೆಗೆ ನೀಡುವ ಮಹತ್ವದ ಆಶಯವೇ
**ಸಮಗ್ರ ದಾಸ ಸಾಹಿತ್ಯ ಯೋಜನೆ**



ಕರ್ನಾಟಕ ಸರ್ಕಾರ
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ಕನ್ನಡ ಭವನ, ಜೆ.ಸಿ. ರಸ್ತೆ
ಬೆಂಗಳೂರು